# ಒರೆ ಕಲ್ಲು

## ಒರೆ ಕಲ್ಲು

## ಒರೆ ಕಲ್ಲು

## ಒರೆ ಕಲ್ಲು

## ಒರೆ ಕಲ್ಲು

## ಒರೆ ಕಲ್ಲು

## ಒರೆ ಕಲ್ಲು

| ಒರೆ | ಕಲ್ಲು |
|---|---|
| ಜ್ಞಾನ | ಅಜ್ಞಾನ |
| ಸತ್ಯ | ಅಸತ್ಯ |
| ದೇವರು | ಮಾಯೆ |


ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org



# ಒರೆಕಲ್ಲು


<u>ಗ್ರಂಥಕರ್ತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಫೆಬ್ರವರಿ–2017

ಪ್ರತಿಗಳು : 1000 **ಬೆಲೆ. 170/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೇಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋಣಗಳು
97. ಮಾನವತ್ವ
98. ದ್ಯಾನ - ಪ್ರಾರ್ಥನೆ - ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಒರೆ ಕಲ್ಲು



## (ಪ್ರಾರ್ಥನೆ)

ಇದನ್ನು ಬರೆಯುವುದಕ್ಕಿಂತ ಮೊದಲು ನಾನು ದೇವರನ್ನು ಪ್ರಾರ್ಥಿಸುತ್ತಿದ್ದೇನೆಂದು ಹೇಳಿ ಆತ್ಮನನ್ನು ಪ್ರಾರ್ಥಿಸುತ್ತಿದ್ದೇನೆ. ನಿಮ್ಮೊಂದಿಗೆ ದೇವರನ್ನು ಪ್ರಾರ್ಥಿಸುತ್ತಿದ್ದೇನೆಂದು ಹೇಳಿದ್ದೇವೆ ಆದರೇ ದೇವರನ್ನು ಪ್ರಾರ್ಥಿಸಲಿಲ್ಲ. ಪ್ರಾರ್ಥಿಸಿರುವುದು ಆತ್ಮನನ್ನು, ಒಂದು ವಿಧವಾಗಿ ನಿಮಗೆ ಅಸತ್ಯವನ್ನು ಹೇಳಿದಂತೆ ಕಾಣಿಸಿದ ಮಾತು ವಾಸ್ತವವೇ. ನಾನು ಈಗಲೇ ಅಲ್ಲ ಎಂದೂ ದೇವರನ್ನು ಪ್ರಾರ್ಥಿಸಲಿಲ್ಲ, ಭವಿಷ್ಯತ್ತಿನಲ್ಲಿ ಕೂಡಾ ಯಾವಾಗಲೂ ಪ್ರಾರ್ಥಿಸುವುದಿಲ್ಲ. ಆದರೂ ನಾನು ದೇವರನ್ನು ಪ್ರಾರ್ಥಿಸುವುದಿಲ್ಲವೆಂದು ನನಗೆ ತಿಳಿದು ನಿಮಗೆ ಸುಳ್ಳನ್ನು ಹೇಳುತ್ತಿದ್ದೇನೆ. ಹಾಗೆ ಅಸತ್ಯವನ್ನು ಹೇಳಬೇಕಾಗಿರುವ ಅಗತ್ಯವೇನು ಬಂದಿದೆಯೆಂದು ಇತರರು ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ. ನಾನು ಯಾವಾಗಲೂ ದೇವರನ್ನು ಪ್ರಾರ್ಥಿಸಲಿಲ್ಲ. ಯಾವಾಗ ಪ್ರಾರ್ಥಿಸಿದರೂ ನನ್ನೊಳಗಿರುವ, ನನ್ನ ಪಕ್ಕದಲ್ಲೇ ಇರುವ ಆತ್ಮನನ್ನು ಪ್ರಾರ್ಥಿಸುತ್ತಿರುತ್ತೇನೆ. ಆದರೇ ಆತ್ಮ ಅಡಗಿರುವವನು, ಹೊರಗೆ ತಿಳಿಯಲ್ಪಡುವವನಲ್ಲ. ಆದ್ದರಿಂದ ನಾನು ಆತನ ಧ್ಯೇಯಕ್ಕೆ ವಿರುದ್ಧವಾಗಿ ಹೇಳಬಾರದು. ಜೀವಾತ್ಮನಾದ ನನಗೆ ಆತ್ಮನಾದ ಆತನು ತಂದೆಯಾಗುವನು. ಆತ್ಮನಾದ ಆತನಿಗೆ ಪರಮಾತ್ಮ ತಂದೆಯಾಗುವನು. ಆತ್ಮನಾದ ಆತನು ಅಂದರೇ ನನ್ನ ತಂದೆ ಮಾಡಿದ ಕೆಲಸಗಳನ್ನೆಲ್ಲಾ ತಾನು ಮಾಡಿದಹಾಗೆ ಹೇಳದಂತೆ ತನ್ನ ತಂದೆಯಾದ ದೇವರು ಮಾಡಿದಹಾಗೆ ಹೇಳುತ್ತಿರುತ್ತಾನೆ. ತನ್ನ ತಂದೆ ಮಾಡಿದ್ದಾನೆಂದು ಹೇಳಿಕೊಳ್ಳುವುದು ಆತನಿಗೆ ಆನಂದ. ತನ್ನ ತಂದೆಯನ್ನು ಮೀರಿದವನು ಇಲ್ಲವೆಂದೂ, ಎಲ್ಲ ಕೆಲಸಗಳ ಕೀರ್ತಿ ತನ್ನ ತಂದೆಗೇ ಸಿಗಬೇಕೆಂದು ನನ್ನ ತಂದೆಯಾದ ಆತ್ಮನಿಗೆ ಇಷ್ಟ. ನನ್ನ ತಂದೆ ಅಭಿಲಾಷೆಯನ್ನು ತಿಳಿದ ನಾನು ನನ್ನ ತಂದೆ ಹೇಳಿದ ಹಾಗೆಯೇ ನಾನೂ ಆತನ ತಂದೆಯ ಮೇಲೆಯೇ ಹೇಳುತ್ತಿರುತ್ತೇನೆ. ಅಂದರೇ ನನಗೆ ತಾತನಾದ ದೇವರ ಮೇಲೆ ಹೇಳುತ್ತಿರುತ್ತೇನೆ. ಇದೇನು ದೇಶದಲ್ಲಿ ಯಾರೂ ಹೇಳದ ವಿಧಾನವನ್ನು ನೀವು ಹೇಳುತ್ತಿದ್ದೀರೇನು?

ಎಂದು ನೀವು ಕೇಳಬಹುದು. ಅದಕ್ಕೆ ನಾನು ಏನು ಹೇಳುತ್ತಿದ್ದೇನೆಂದರೇ ಈಗಿದು ನಿಮಗೆ ಹೊಸದೇ ಆದರೂ ನನಗೆ ಮಾತ್ರ ಹಳೆಯದ್ದೇ. ಈ ವಾವೀ ವರಸೆಗಳ ವಿಷಯುವು ಭಗವದ್ಗೀತೆಯಲ್ಲಿಯು, ಬೈಬಲ್‌ನಲ್ಲಿಯು, ಖುರಾನ್‌ನಲ್ಲಿಯು ಮೊದಲೇ ಹೇಳಿದ್ದಾರೆ. ಒಂದುಸಲ ಭಗವದ್ಗೀತೆಯಲ್ಲಿ ಏನು ಹೇಳಿದ್ದಾರೋ ಜ್ಞಾಪಕ ಮಾಡಿಕೊಳ್ಳೋಣ. ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ 17ನೇ ಶ್ಲೋಕವನ್ನು ನೋಡೋಣ.

**ಶ್ಲೋ॥ ಪಿತಾಹ ಮಸ್ಯ ಜಗತೋ ಮಾತಾಧಾತಾ ಪಿತಾಮಹಃ।**
**ವೇದ್ಯಂ ಪವಿತ್ರ ಮೋಂಕಾರ ಋಕ್ಸಾಮ ಯಜುರೇವಚ॥**

**ಭಾವಾರ್ಥ :– "ಅಖಿಲ ಜಗತಿಗೆ ತಾಯಿತಂದೆ ನಾನೇಯಾಗುತ್ತೇನೆ. ಅಷ್ಟೇಅಲ್ಲದೇ ಧಾತನು, ತಾತನು ನಾನೇ. ವೇದ ಸ್ವರೂಪನಾದ ಓಂಕಾರವು ನಾನೇ. ಋಗ್ಯಜುರ್ ಸಾಮ ವೇದಗಳಲ್ಲಿನ ವಾಕ್ಕು ಕೂಡಾ ನಾನೇ".**

ಈ ಶ್ಲೋಕಾರ್ಥದಲ್ಲಿ 'ತಂದೆ ನಾನು' ಎಂದು ಹೇಳುವುದೇ ಅಲ್ಲದೇ 'ತಾತನು ಕೂಡಾ ನಾನೇ' ಎಂದು ಸ್ವತಃವಾಗಿ ದೇವರೇ ಹೇಳುವುದಾಗಿದೆ. ಈಗ ನಿಮಗೆ ಚೆನ್ನಾಗಿ ಅರ್ಥವಾಗಿರುತ್ತದೆ. ನನಗೆ ತಂದೆ ದೇವರ ಅಂಶವಾದ ಆತ್ಮವಾಗಿರುವಾಗ, ಆತ್ಮನಿಗೆ ತಂದೆ ಸ್ವತಃವಾಗಿ ದೇವರೇ. ನಾನು ದೇವರ ಮೇಲೆ ನನ್ನ ಪ್ರಾರ್ಥನೆ ಮಾಡಿದಂತೆ ಹೇಳಿದರೂ, ಅದು ಸ್ವಲ್ಪ ಅಸತ್ಯವಾದರೂ, ಹೇಳಬೇಕಾಗಿರುವ ವಿಧಾನವು ಅದೇ. ನನ್ನ ಆತ್ಮ ಸ್ವತಃವಾಗಿ ಕೆಲಸ ಮಾಡುತ್ತಿದ್ದರೂ ತಾನು ಏನು ಮಾಡದಹಾಗೆ ಎಲ್ಲಾ ದೇವರೇ ಮಾಡುತ್ತಿರುವ ಹಾಗೆ ಅಸತ್ಯವನ್ನೇ ಹೇಳುತ್ತಿದೆ ಅಲ್ಲವೆ! ಆದ್ದರಿಂದ ನನ್ನ ತಂದೆಯಾದ ಆತ್ಮ ಹೇಳಿರುವ ಪದ್ಧತಿ ಪ್ರಕಾರವೇ ನಾನು ಹೇಳಬೇಕು. 'ನಾನು' ಎನ್ನುವುದು ನನಗಾಗಲೀ, ನನ್ನ ತಂದೆಯಾದ ಆತ್ಮಕ್ಕಾಗಲೀ ಇಲ್ಲ. ಆಧ್ಯಾತ್ಮಿಕ ವಿದ್ಯೆ ಪ್ರಕಾರ ಇರಬಾರದು. ಆದ್ದರಿಂದ ಆತ್ಮ ಮಾಡಿದರೂ ದೇವರ ಮೇಲೆಯೇ ಹೇಳಬೇಕಾಗಿ ಬಂದಿದೆ. ಒಂದೇ ಸಲ ಈ ವಿಷಯಗಳು ಅರ್ಥವಾಗುವುದಿಲ್ಲ, ಆಧ್ಯಾತ್ಮಿಕವನ್ನು ಕಲಿಯುತ್ತಾ ಕಲಿಯುತ್ತಾ ಅಸತ್ಯದಲ್ಲಿ ಸತ್ಯವಿದೆಯೆಂದು ತಿಳಿಯುತ್ತದೆ.

ಇದನ್ನು ಬರೆಯುವುದಕ್ಕೆ ಮೊದಲು ನಾನು ದೇವರನ್ನು ಪ್ರಾರ್ಥಿಸುತ್ತಿದ್ದೇನೆಂದು ಹೇಳಿದ್ದೇನಲ್ಲ. ಪ್ರಾರ್ಥಿಸಿರುವುದು ಆತ್ಮನನ್ನು, ಆತ್ಮ ಯಾರ ಕೋರಿಕೆಗಳನ್ನು ತೀರಿಸುವುದಿಲ್ಲ. ಪ್ರಾರ್ಥಿಸಿದರೂ ಪ್ರಾರ್ಥಿಸದೇ ಹೋದರೂ ಜೀವಿಯ ಕರ್ಮವನ್ನು ಅನುಸರಿಸಿ ಶರೀರದಲ್ಲಿ ಕಾರ್ಯಗಳು ಮಾಡುತ್ತಿರುತ್ತದೆ. ಹಾಗೆಯೇ ಕರ್ಮವನ್ನು ಅನುಸರಿಸಿ ಜೀವಿಗೆ ಕಷ್ಟಸುಖಗಳನ್ನು ಉಂಟು ಮಾಡುತ್ತಿರುತ್ತದೆ. ಕರ್ಮವನ್ನನುಸರಿಸಿ ಜೀವಿಯನ್ನು ಎಲ್ಲ ವಿಧಗಳಾಗಿ ನಡೆಸುತ್ತಿರುತ್ತದೆ. ಯಾವ ಜೀವಿಯ ಇಷ್ಟಪ್ರಕಾರ ಆತ್ಮ ಕೆಲಸ ಮಾಡದಿರುವಾಗ ಪ್ರಾರ್ಥನೆಯಿಂದ ಕೆಲಸವೇ ಇಲ್ಲವಲ್ಲ! ಎಂದು ಯಾರಾದರೂ ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ. ಆತ್ಮ ಜೀವಿಯ ಕರ್ಮಪ್ರಕಾರವೇ ನಡೆಸುತ್ತದೆ ಎಂಬಮಾತು ವಾಸ್ತವವೇ, ಆದರೂ ಇಲ್ಲಿ ಪ್ರಪಂಚ ವಿಷಯಗಳಾದರೇ ಕರ್ಮಪ್ರಕಾರ ಆತ್ಮ ನಡೆಸುವುದು. ಯಾವ ಜೀವಿಗಾದರೂ ಶರೀರದಲ್ಲಿ ಪ್ರಪಂಚ ಸಂಬಂಧವಾಗಿ ಎಂತಹ ಸ್ವತಂತ್ರವಿಲ್ಲ. ಆತ್ಮ ಆಡಿಸಿದಂತೆ ಆಡಬೇಕಾದ್ದೇ. ಹಾಗೆಯೇ ಆತ್ಮ ನಡೆಸಿದಹಾಗೆ ನಡೆಯಬೇಕಾದ್ದೇ. ಹಾಗೆಂದು ಆತ್ಮ ತನ್ನ ಇಷ್ಟಪ್ರಕಾರ ಜೀವಿಯನ್ನು ನಡೆಸುವುದಿರುವುದಿಲ್ಲ. ಜೀವಿಯ ಕರ್ಮವನ್ನನುಸರಿಸಿ ಪ್ರತಿಯೊಂದೂ ಲೆಕ್ಕಚಾರದ ಪ್ರಕಾರ ಆತ್ಮ ಮಾಡುತ್ತಿರುತ್ತದೆ. ಮನುಷ್ಯ ಹುಟ್ಟಿದಾಗಲೇ ಜೀವಿಯೊಂದಿಗೆ ಆತ್ಮ ಬಂದು ಅಂದಿನಿಂದ ಜೀವಿಯನ್ನು ತನ್ನ ಕೈಕೆಳಗೆ ಕರ್ಮ ಲೆಕ್ಕಪ್ರಕಾರ ನಡೆಸುತ್ತದೆ. ಆತ್ಮ ಆಡಿಸುತ್ತಿರುವಾಗ, ಜೀವಿಯು ಆಡುತ್ತಿರುವಾಗ, ಪರಮಾತ್ಮ ಎನ್ನಲ್ಪಡುವ ಅಲ್ಲಾಹ್ ಅಥವಾ ಯೆಹೋವಾ (ದೇವರು) ನೋಡುತ್ತಿದ್ದಾನೆ. ದೇವರು ಪ್ರತಿ ಶರೀರದಲ್ಲಿ ಸಾಕ್ಷಿಯಾಗಿರುವಾಗ, ಆತ್ಮ ಕೆಲಸ ಮಾಡುತ್ತಿರುವಾಗ, ಜೀವಿಯು ಅನುಭವಿಸುತ್ತಿದ್ದಾನೆ. ಈ ವಿಷಯನ್ನು ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 50, ಆಯತ್ 21ರಲ್ಲಿ ಹೀಗೆ ಬರೆದಿದ್ದಾರೆ. **(50–21) "ಪ್ರತಿ ಜೀವಾತ್ಮ ಒಬ್ಬ ನಡೆಸುವವನೊಂದಿಗೆ, ಮತ್ತೊಬ್ಬ ಸಾಕ್ಷಿಯಾಗಿರುವವನೊಂದಿಗೆ ಸಹ ಬರುತ್ತದೆ."** ಮತ್ತೊಂದು ಗ್ರಂಥದಲ್ಲಿ **(50–21) "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ಕರೆದುಕೊಂಡು ಬರುವವನೊಬ್ಬನು, ಸಾಕ್ಷಿ ಇರುವವನು ಒಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ (ಜನ್ಮಕ್ಕೆ ಬರುತ್ತಾನೆ)**

ಎಂದಿದೆ. ಇದನ್ನನುಸರಿಸಿ ಶರೀರದಲ್ಲಿ ಒಟ್ಟು ಮೂರು ಆತ್ಮಗಳಿವೆ ಎಂದು ತಿಳಿಯುತ್ತಿವೆ.

ಈ ವಿಧವಾಗಿ ಮೂರು ಆತ್ಮಗಳು ಶರೀರದಲ್ಲಿದ್ದು ಜೀವನಯಾತ್ರೆಯನ್ನು ಸಾಗಿಸುತ್ತಿವೆ. ಕರ್ಮಗಳನ್ನು ಮಾಡಿಕೊಂಡ ಜೀವಿಗಾಗಿ ಉಳಿದ ಎರಡು ಆತ್ಮಗಳು ಶರೀರದಲ್ಲಿ ಇರಬೇಕಾಗಿದೆ. ಇದು ಮಾನವ ಶರೀರದಲ್ಲಿನ ನಿರ್ಮಾಣವು. ಮಾನವ ಶರೀರವನ್ನು ಧರಿಸಿ ದೇವರು ಭೂಮಿಮೇಲೆ ಬಂದರೂ ಆತನ ಶರೀರದಲ್ಲಿ ಕೂಡಾ ಇದೇ ಮೂರು ಆತ್ಮಗಳ ವಿಧಾನವೇ ಇರುತ್ತದೆ. ನಾನು ಎಂದರೇ ಜೀವಿಯು ಏನಾದರೂ ಕೋರಿಕೊಳ್ಳಬಹುದು. ನಾನು ಕೋರಿರುವುದು ಪ್ರಪಂಚ ಸಂಬಂಧವಾದರೇ ಯಾರೂ ಏನೂ ಮಾಡಲಾರರು. ಅದು ಕರ್ಮವನ್ನನುಸರಿಸಿ ಇರುತ್ತದೆ, ಅದನ್ನು ಕೇಳಿದರೂ, ಜೋರಾಗಿ ಕೋರಿದರೂ ನೆರವೇರುವುದಿಲ್ಲ. ನೆರವೇರದಿರುವುದನ್ನು ಯಾಕೆ ಕೇಳಬೇಕು? ಆ ವಿಷಯ ಮನುಷ್ಯನಿಗೆ ತಿಳಿದಿಲ್ಲ. ನೆರವೇರುವುದೆಂಬ ನಂಬಿಕೆಯಿಂದಲೇ ಕೇಳುತ್ತಿದ್ದಾನೆ. ಇವೆಲ್ಲಾ ತಿಳಿದು ನೀನು ಯಾಕೆ ಪ್ರಾರ್ಥಿಸಿದ್ದೀಯ? ಎಂದು ನೀವು ಕೇಳಬಹುದು. ಅದಕ್ಕೆ ನನ್ನ ಉತ್ತರ ಏನೆಂದರೇ! ನಾನು ಆತ್ಮನನ್ನು ಕೋರಿರುವುದು ಪ್ರಪಂಚ ವಿಷಯವಲ್ಲ. ಪ್ರಪಂಚ ವಿಷಯದಲ್ಲಿ ನನಗೆ ಎಂತಹ ಹಕ್ಕು, ಅಧಿಕಾರವಿಲ್ಲವೆಂದು ತಿಳಿದಿದೆ. ಆದರೇ ಪರಮಾತ್ಮ ವಿಷಯದಲ್ಲಿ ಯಾವ ಜೀವಿಗಾದರೂ ಸ್ವತಂತ್ರವಿದೆ. ಕೋರಿಕೊಳ್ಳುವ ಅಧಿಕಾರವಿದೆ, ನೆರವೇರುವ ಅವಕಾಶವಿದೆ. ದೇವರ ವಿಷಯದಲ್ಲಿ ಸರ್ವ ಜೀವಿಗಳಿಗು ಸ್ವತಂತ್ರತೆ ಕೊಡಲಾಗಿದೆ. ಆದ್ದರಿಂದ ಮನುಷ್ಯ ದೇವರನ್ನು ದೈವಿಕವಾಗಿ ಏನಾದರೂ ಕೋರಿಕೊಳ್ಳಬಹುದು, ಎಷ್ಟಾದರೂ ಕೋರಿಕೊಳ್ಳಬಹುದು.

**ಪ್ರಶ್ನೆ :– ಹಾಗಾದರೇ ದೇವರಿಗಿರುವ ಅಧಿಕಾರ ನನಗೆ ಬೇಕೆಂದು ಮನುಷ್ಯ ಕೋರಿಕೊಳ್ಳಬಹುದಲ್ಲ. ಅದು ದೈವಿಕವಾದ ಪ್ರಾರ್ಥನೆಯೇ ಅಲ್ಲವೇ? ಹಾಗೆ ಕೋರಿದರೇ ಮನುಷ್ಯನ ಕೋರಿಕೆ ನೆರವೇರುತ್ತದಾ?**

**ಉತ್ತರ :–** ಹೇಗೆ ನೆರವೇರುತ್ತದೆ? ನೆರವೇರುವುದಿಲ್ಲ. ಅದು ಮೊದಲಿಗೇ

ದೈವಿಕವಾದ ಪ್ರಾರ್ಥನೆಯಲ್ಲ. ಏಕೆಂದರೇ! ದೇವರ ಅಧಿಕಾರವು ಪ್ರಪಂಚದ ಮೇಲೆಯೇ ಇರುತ್ತದೆ. ಆದಕಾರಣ ನೀನು ಪ್ರಪಂಚ ಅಧಿಕಾರವನ್ನು ಕೇಳಿದಂತಾಗಿದೆ. ಆದ್ದರಿಂದ ನಿನ್ನ ಪ್ರಾರ್ಥನೆ ಪ್ರಪಂಚ ಪ್ರಾರ್ಥನೆ, ಪ್ರಪಂಚ ಕೋರಿಕೆಯಾಗಿದೆ. ಆದ್ದರಿಂದ ಅದು ನೆರವೇರುವುದಿಲ್ಲ. ನೀನು ದೇವರ ಅಧಿಕಾರವನ್ನು ಕೋರದೆ ದೇವರನ್ನು ಕೋರಬೇಕು. ದೇವರ ಸನ್ನಿಧಾನವನ್ನು ಕೋರಬೇಕು. ದೇವರೊಳಗೆ ಐಕ್ಯವಾಗುವ ಕೋರಿಕೆಯನ್ನು ಕೋರಬೇಕು. ಅಷ್ಟೇ ಹೊರತು ನೇರವಾಗಿ ದೇವರ ಅಧಿಕಾರವನ್ನು ಕೋರಬಾರದು. ಅದು ಪ್ರಪಂಚ ಸಂಬಂಧವಾದ ಕೋರಿಕೆಯಾಗುವುದು. ದೇವರು ತನ್ನ ಮೇಲೆ ತನಗೆ ಅಧಿಕಾರವನ್ನು ಇತರರಿಗೆ ಬಿಟ್ಟು, ಇತರರ ಅಧಿಕಾರವನ್ನು ತಾನು ತೆಗೆದುಕೊಂಡಿದ್ದಾನೆ. ವಿವರವಾಗಿ ಹೇಳಿದರೇ ತನ್ನ ಮೇಲಿನ ಅಧಿಕಾರ ಮನುಷ್ಯರ ಕೈಯಲ್ಲಿಟ್ಟು, ಮನುಷ್ಯರ ಮೇಲಿನ ಅಧಿಕಾರವನ್ನು ತಾನು ಪಡೆದಿದ್ದಾನೆ. ಆದರೇ ಮನುಷ್ಯರ ಅಧಿಕಾರ ದೇವರಮೇಲೆ ಇದೆಯೆಂದು ಮನುಷ್ಯರಿಗೆ ತಿಳಿದಿಲ್ಲ. ದೇವರ ಅಧಿಕಾರ ಮನುಷ್ಯರ ಮೇಲೆ ಇದೆಯೆಂದು ದೇವರಿಗೆ ಚೆನ್ನಾಗಿ ತಿಳಿದಿದೆ. ದೇವರ ಮೇಲೆ ದೇವರ ಜ್ಞಾನದಮೇಲೆ ಅಧಿಕಾರವನ್ನು ಮನುಷ್ಯರು ಹೊಂದಿದ್ದರೂ ಅದು ತಿಳಿಯದಿರುವುದರಿಂದ ದೇವರ ಮೇಲೆ ಜೀವಿಯು (ಮನುಷ್ಯ) ತನ್ನ ಅಧಿಕಾರವನ್ನು ಚಲಾಯಿಸಲಾರದೆ ಹೋಗುತ್ತಿದ್ದಾನೆ. ಆದರೇ ದೇವರ ಮೇಲೆ ಅಧಿಕಾರವನ್ನು ಚಲಾಯಿಸುವುದಕ್ಕೆ ಮೊದಲು ಆತನ ಹೆಸರು (ವಿಳಾಸ) ಮನುಷ್ಯನಿಗೆ ಅಗತ್ಯ. ದೇವರ ಅಡ್ರಸ್ ತಿಳಿಯಬೇಕೆಂದರೇ ದೇವರ ಜ್ಞಾನವನ್ನು ತಿಳಿಯಬೇಕು. ದೇವರ ಜ್ಞಾನವನ್ನು ತಿಳಿಯಬೇಕೆಂದರೇ ದೇವರನ್ನು ತಿಳಿಯಬೇಕೆಂಬ ಶ್ರದ್ಧೆಬೇಕು. ಅದನ್ನೇ **'ಜ್ಞಾನದ ಮೇಲೆ ಶ್ರದ್ಧೆ'** ಎನ್ನುತ್ತಾರೆ. ಜ್ಞಾನದ ಮೇಲೆ ಶ್ರದ್ಧೆ ಇರುವಾಗ ಜ್ಞಾನವು ತಿಳಿಯುವುದು. ಜ್ಞಾನವನ್ನು ತಿಳಿದರೇ ದೇವರ ಇರುವಿಕೆ (ಅಡ್ರಸ್) ತಿಳಿಯುವುದು. ದೇವರ ಇರುವಿಕೆಯನ್ನು ತಿಳಿದರೇ ಮನುಷ್ಯ ಅಂದುಕೊಂಡಹಾಗೆ ದೇವರ ಹತ್ತಿರಕ್ಕೆ ಸೇರಬಹುದು. ದೇವರಿಗೆ ಸಂಬಂಧಿಸಿದ ಶ್ರದ್ಧೆ ನಿನ್ನ ಇಷ್ಟವನ್ನು ಅನುಸರಿಸಿರುತ್ತದೆ.

**ಜ್ಞಾನದ ಮೇಲೆ ಶ್ರದ್ಧೆ ಪ್ರತಿ ಮನುಷ್ಯನಿಗು ಜನ್ಮಹಕ್ಕಿನಂಥದ್ದು.** ಆದರೇ ಮನುಷ್ಯ ತನ್ನ ಹಕ್ಕನ್ನು ವಿನಿಯೋಗಿಸಿಕೊಳ್ಳುತ್ತಿಲ್ಲ.

ಪ್ರಪಂಚ ವಿಷಗಳ ಮೇಲೆ ಯಾವ ಮನುಷ್ಯನಿಗೂ ಸ್ವತಂತ್ರವಿಲ್ಲ, ಹಾಗೆಯೇ ಯಾವ ಹಕ್ಕು ಇಲ್ಲ. ಇರುವ ಸ್ವತಂತ್ರದ ಮೇಲೆ ದೃಷ್ಠಿ ಹರಿಸದೇ, ಇರುವ ಹಕ್ಕನ್ನು ಬಿಟ್ಟು ಇಲ್ಲದ ಹಕ್ಕನ್ನು, ಇಲ್ಲದ ಸ್ವಾತಂತ್ರಕ್ಕೆ ಮನುಷ್ಯ ಪರೆದಾಡುತ್ತಿದ್ದಾನೆ. ಇಲ್ಲದ ಹಕ್ಕಿಗಾಗಿ, ಇಲ್ಲದ ಸ್ವಾತಂತ್ರಕ್ಕಾಗಿ ಎಷ್ಟು ಹೋರಾಡಿದರೂ ಮನುಷ್ಯನಿಗೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ನಾನು ದೇವರ ಮೇಲೆ ದೃಷ್ಠಿ ಹೊಂದಿದ್ದು, ದೇವರ ಜ್ಞಾನದ ಮೇಲೆ ಆಸಕ್ತಿ ಹೊಂದಿದ್ದು ನನಗೆ ದೇವರ ಜ್ಞಾನವು ಇನ್ನೂ ಚೆನ್ನಾಗಿ ತಿಳಿಯಬೇಕೆಂದೂ, ನನಗೆ ತಿಳಿದ ಜ್ಞಾನವನ್ನು ಇನ್ನೂ ಚೆನ್ನಾಗಿ ಇತರರಿಗೆ ತಿಳಿಸಬೇಕೆಂಬ ಕೋರಿಕೆಯನ್ನು ಕೋರಿದ್ದೇನೆ. ಈ ಕೋರಿಕೆ ಯಾವಕಡೆ ನೋಡಿದರೂ ಪ್ರಪಂಚ ಸಂಬಂಧವಾದುದಲ್ಲ. ಆದ್ದರಿಂದ ನಾನು ನನ್ನ ಪ್ರಾರ್ಥನೆಯಾಗಿ ಅದನ್ನು ನಾನು ಕೋರುವುದು ಸರ್ವವಿಧಗಳಲ್ಲಿ ಸಮಂಜಸ. ನಾನು ಕೋರಿ ಕೊಂಡಿರುವುದು ನನ್ನ ಜನ್ಮಹಕ್ಕು. ನನ್ನ ಕರ್ಮಕ್ಕೆ ಸಂಬಂಧಿಸಿರುವುದಲ್ಲ, ಪ್ರಪಂಚ ಸಂಬಂಧವಾದುದಲ್ಲ. ಆದ್ದರಿಂದ ನಾನು ಕೋರಿರುವುದು ಕೋರಿಕೊಂಡಹಾಗೆ ನೆರವೇರುತ್ತಿದೆ. ನಾನು ದೇವರ ಜ್ಞಾನವನ್ನು ಕೋರಿದ್ದೇನೆ ಆದ್ದರಿಂದ ನನಗೆ ದೇವರ ಜ್ಞಾನವು ದೊರೆಯುತ್ತಿದೆ. ನಾನು ದೇವರ ಜ್ಞಾನವನ್ನು ಎಷ್ಟು ಪುಷ್ಕಳವಾಗಿ ಕೋರಿದ್ದೇನೋ ಅಷ್ಟು ಪುಷ್ಕಳವಾಗಿ ನನಗೆ ದೊರೆಯುತ್ತಿದೆ. ನನಗೆ ಎಷ್ಟು ದೊರೆಯುತ್ತಿದೆಯೋ, ಅಷ್ಟು ನಾನು ಇತರರಿಗೆ ಕೊಡುತ್ತಿದ್ದೇನೆ. ನಾನು ಯಾರಿಗೆ ಎಷ್ಟು ಕೊಟ್ಟರೂ ಸ್ವಲ್ಪವೂ ಕೂಡಾ ನನ್ನಬಳಿ ತಗ್ಗದೆ ಇದೆ. ಆದ್ದರಿಂದ ನನ್ನ ಪ್ರಾರ್ಥನೆಯ ಪ್ರಕಾರ ನನ್ನ ಜ್ಞಾನದಾಹ ತೀರುತ್ತಿದೆ, ಹಾಗೆಯೇ ಇತರರ ದಾಹವು ಕೂಡಾ ತೀರುತ್ತಿದೆ.

**ಪ್ರಶ್ನೆ :– ನೀವು ಹಿಂದೂ ಮತದಲ್ಲಿ ಹುಟ್ಟಿದ್ದೀರ, ಆದಕಾರಣ ನಿಮಗೆ ದೇವರು ಹಿಂದೂಗಳ ಜ್ಞಾನವನ್ನು ಕೊಡಬೇಕು. ನೀವು ಹಿಂದೂಗಳ ಜ್ಞಾನವನ್ನು ತಿಳಿದರೇ**

**ಹಿಂದೂಗಳಿಗೆ ಹಿಂದೂ ಜ್ಞಾನವನ್ನೇ ಹೇಳಬಹುದು. ಹಾಗಲ್ಲದೇ ನೀವು ಮೂರು ಮತಗಳ ಜ್ಞಾನವನ್ನು ಹೇಳುತ್ತಿದ್ದೀರ. ನೀವು ದೇವರ ಜ್ಞಾನವನ್ನು ಕೇಳಿರುತ್ತೀರ ಆದರೇ, ಮೂರು ಮತಗಳಲ್ಲಿನ ದೇವರ ಜ್ಞಾನವನ್ನು ಕೇಳಿರುವುದಿಲ್ಲ ಅಲ್ಲವೇ?**

**ಉತ್ತರ :–** ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರು ಇದ್ದಾನೆ. ಆತನನ್ನೇ ಕೆಲವರು 'ಪರಮಾತ್ಮ' ಎನ್ನುತ್ತಿದ್ದಾರೆ. ಕೆಲವರು 'ಯೆಹೋವಾ' ಎನ್ನುತ್ತಿದ್ದಾರೆ. ಇನ್ನು ಕೆಲವರು 'ಅಲ್ಲಾಹ್ ಎಂದು ಅನ್ನುತ್ತಿದ್ದಾರೆ. ಒಟ್ಟಾರೆ ಎಲ್ಲರೂ ಸೇರಿ 'ದೇವರು' ಎನ್ನುವ ಭಾವನೆಯಿಂದಲೇ ಹೇಳುತ್ತಿದ್ದಾರೆ. ಆದರೇ ಇದರಲ್ಲಿ ಈಮಧ್ಯೆ ಕ್ರೈಸ್ತವ ಮತ ಬಂದ ನಂತರ 'ಯೆಹೋವಾ' ಎನ್ನುವ ಮಾತು ಹೊಸದಾಗಿ ಬಂದಿದೆ. ಸೃಷ್ಟಿ ಆದಿಯಲ್ಲಿ **"ಪರಮಾತ್ಮ, ಸೃಷ್ಟಿಕರ್ತ, ಅಲ್ಲಾಹ್"** ಎನ್ನುವ ಮೂರು ಬಿರುದುಗಳು (ಹೆಸರುಗಳು) ಮಾತ್ರ ಇದ್ದವು. ಈ ಮೂರು ಪದಗಳನ್ನು, ಅರ್ಥವನ್ನು ಅನುಸರಿಸಿ, ಭಾವ ಸಹಿತವಾಗಿ ಆದಿಯಲ್ಲಿದ್ದ ತೆಲುಗು ಭಾಷೆಯಲ್ಲಿ ಹೇಳುವುದಾಗಿದೆ. ಹೇಗೆ ಹೇಳಿದರೂ ವಿಶ್ವವೆಂಬ ಸಾಮ್ರಾಜ್ಯ ಚಕ್ರವರ್ತಿ ಒಬ್ಬನೇ, ಆತನೇ ದೇವರು. ದೇವರು ಒಂದು ಮತಕ್ಕೆ ಸಂಬಂಧಿಸಿದವನಲ್ಲ. ಮತಗಳು ಈ ಮಧ್ಯೆ ಕಾಲದಲ್ಲಿ ಕಲಿಯುಗದಲ್ಲಿ ಹುಟ್ಟಿಕೊಂಡುಬಂದಿವೆ. ದೇವರು ಆದಿಯಲ್ಲಿಯೇ ತನ್ನ ಜ್ಞಾನವನ್ನು ತಿಳಿಸುವುದಾಗಿದೆ. ದೇವರು ಆದಿಯಲ್ಲಿ ತಿಳಿಸಿದ ಜ್ಞಾನವನ್ನು ಮನುಷ್ಯರು ವಿವಿಧ ಪ್ರಾಸಗಳಲ್ಲಿ, ವಿವಿಧ ಭಾಷೆಗಳಲ್ಲಿ ಹೇಳಿಕೊಳ್ಳುತ್ತಾ, ಕೊನೆಗೆ ವಿವಿಧ ಮತಗಳಾಗಿ ಸೀಳಿಹೋಗಿ ಜ್ಞಾನವನ್ನು ಸೀಳಿಸಿಕೊಂಡಿದ್ದಾರೆ. ಇರುವುದು ಒಂದೇ ದೇವರೇ, ಒಂದೇ ಜ್ಞಾನವೇ. ಆದರೇ ಮನುಷ್ಯನಲ್ಲಿನ ಅಜ್ಞಾನದಿಂದ ದೇವರು ಬೇರೆ, ಜ್ಞಾನವು ಬೇರೆಯಾಗಿ ಊಹಿಸಿಕೊಂಡು ಇದು ನಮ್ಮ ಜ್ಞಾನ, ಇದು ನಮ್ಮ ದೇವರು ಎಂದು ಹೇಳುವುದೇ ಅಲ್ಲದೇ ಇದು ನಮ್ಮ ಮತವು ಎಂದು ಹೇಳುತ್ತಿದ್ದಾರೆ. ನನಗೆ ಮನುಷ್ಯರ ಅಜ್ಞಾನದ ಪ್ರಕಾರ, ತಯಾರಾದ ಮತಗಳ ಪ್ರಕಾರ ದೇವರು ಜ್ಞಾನವನ್ನು ನನಗೆ ತಿಳಿಸಲಿಲ್ಲ. ನನಗೆ ತಿಳಿಸಿರುವುದು ಒಂದೇ ದೇವರಿಗೆ ಸಂಬಂಧಿಸಿದ ಜ್ಞಾನವು. ಅದೇ ಜ್ಞಾನವೇ ಎಲ್ಲ ಮತಗಳಲ್ಲಿ ಇರುವುದರಿಂದ ನನಗೆ ಮೂರು

ಮತಗಳ ಜ್ಞಾನವು ಸುಲಭವಾಗಿದೆ. ಅವರು ಹೇಳಿಕೊಳ್ಳುವ ದೇವರನ್ನೇ ನಾನು ಹೇಳುತ್ತಿದ್ದೇನೆ. ಅವರು ಹೇಳಿಕೊಳ್ಳುವ ಜ್ಞಾನವನ್ನೇ ನಾನು ಹೇಳುತ್ತಿದ್ದೇನೆ. ಅವರು ಅಜ್ಞಾನದಿಂದ ದೇವರ ಜ್ಞಾನವನ್ನು ಅರ್ಥ ಮಾಡಿಕೊಳ್ಳದೇ ಹೋಗಿದ್ದರಿಂದ, ದೇವರ ಗ್ರಂಥಗಳಲ್ಲಿನ ವಾಕ್ಯಗಳಿಗೆ ತಪ್ಪು ಭಾವವನ್ನು ಹೇಳಿಕೊಳ್ಳುವುದು, ಬರೆದುಕೊಳ್ಳುವುದು ನಡೆದಿದೆ. ನನಗೆ ದೇವರು, ದೇವರಜ್ಞಾನ ತಿಳಿದಿರುವುದರಿಂದ ಯಾವ ಮತದವರು ಎಲ್ಲಿ ತಪ್ಪಾಗಿ ಅರ್ಥೈಸಿಕೊಂಡಿರುವುದು ಸುಲಭವಾಗಿ ತಿಳಿಯುತ್ತಿದೆ. ಅವರು ಮಾಡಿದ ತಪ್ಪನ್ನು ಸರಿಮಾಡುತ್ತಾ ಉಳಿದ ಮತದವರಿಗೆ ಹೇಳುವುದು ಮಾಡಿದ್ದೇವೆ. ಆದ್ದರಿಂದ ಮೂರು ಮತಗಳ ಜ್ಞಾನವನ್ನು, ಮೂರು ಮತದವರಿಗೆ ಹೇಳುವುದು ನನಗೆ ಸುಲಭವಾಗಿದೆ. ಆದರೂ ನನಗೆ ಮಾತ್ರ ಒಂದೇ ದೇವರೇ, ಒಂದೇ ಜ್ಞಾನವೇ, ಒಂದೇ ಮತವಾಗಿಯೇ ಎಲ್ಲ ಮತಗಳು ಕಾಣಿಸುತ್ತಿವೆ. ಅವರ ಮತಗಳು ಅವರಿಗೆ ಬೇರೆಬೇರೆಯಾಗಿದ್ದರೂ, ನನಗೆ ಜ್ಞಾನದಿಂದ ಏಕವಾಗಿ ಕಾಣಿಸುತ್ತಿವೆ. ನಮ್ಮ ಮತ, ನಿಮ್ಮ ಮತ, ನಮ್ಮ ದೇವರು, ನಿಮ್ಮ ದೇವರು ಎನ್ನುವವರು ಅವರವರ ಮಧ್ಯದಲ್ಲಿ ಅಸೂಯೆಗಳನ್ನು ಬೆಳೆಸಿಕೊಂಡು ಅವಕಾಶ ಸಿಕ್ಕಾಗಲೆಲ್ಲಾ ಒಬ್ಬರಿಗೊಬ್ಬರು ಹಿಂಸಿಸಿಕೊಳ್ಳುತ್ತಿದ್ದಾರೆ. ಈದಿನ ನಡೆಯುತ್ತಿರುವ ಮತಹಿಂಸೆ ಹೋಗಬೇಕೆಂದರೇ **'ಎಲ್ಲರ ಜ್ಞಾನವು ಒಂದೇ, ಎಲ್ಲರ ದೇವರು ಒಬ್ಬನೇ'** ಎಂದು ಎಲ್ಲರೂ ತಿಳಿಯಬೇಕು. ಹಾಗೆ ತಿಳಿಸುವುದೇ ನನ್ನ ಕರ್ತವ್ಯವಾಗಿ ಇರುವುದರಿಂದ ನಾನು ನಿಮ್ಮಂಥವರಿಗೆ ಮೂರು ಮತಗಳ ಜ್ಞಾನ ಹೇಳಿದಂತೆ ಕಾಣಿಸುತ್ತಿದೆ. ವಾಸ್ತವವಾಗಿ ನಾನು ಒಂದುವಿಧವಾದ ಜ್ಞಾನವನ್ನೇ, ಒಂದು ಮತ ಜ್ಞಾನವನ್ನೇ, ಒಂದು ದೇವರ ಜ್ಞಾನವನ್ನೇ ಹೇಳುತ್ತಿದ್ದೇನೆ.

**ಪ್ರಶ್ನೆ :– "ನಾನು ದೇವರನ್ನು ಪ್ರಾರ್ಥಿಸುತ್ತಿದ್ದೇನೆ. ನನಗೆ ದೇವರ ಜ್ಞಾನ ಬೇಕೆಂದು ಪ್ರಾರ್ಥಿಸುತ್ತಿದ್ದೇನೆ" ಎಂದು ನೀವು ಹೇಳಿದ್ದೀರ. ನಮ್ಮಹಾಗೆ ಪ್ರಪಂಚ ಕೋರಿಕೆಗಳು ಕೋರಿಕೊಳ್ಳದೇ ದೇವರನ್ನು ಮಾತ್ರ ಪ್ರಾರ್ಥಿಸುತ್ತಿದ್ದೀರ. ಉದಾಹರಣೆಗೆ ಕ್ರೈಸ್ತರ ಪ್ರಾರ್ಥನೆಗೆ, ಮುಸ್ಲಿಮ್‌ರ ಪ್ರಾರ್ಥನೆಗೆ ಎಷ್ಟೋ ವ್ಯತ್ಯಾಸ ಕಾಣಿಸುತ್ತಿದೆ. ಕ್ರೈಸ್ತರ ಪ್ರಾರ್ಥನೆಯಲ್ಲಿ ಹೆಚ್ಚಾಗಿ ಕೋರಿಕೆಗಳಿರುತ್ತವೆ, ಅವರ ಕೋರಿಕೆಗಳನ್ನು ದೇವರಿಗೆ**

ಹೇಳಿಕೊಳ್ಳುವುದರಿಂದ ದೇವರೇ ನೆರವೇರಿಸುವನೆಂದು ಅವರ ನಂಬಿಕೆ. ಆದ್ದರಿಂದ ಮಗಳ ಮದುವೆಯಿಂದ ಹಿಡಿದು ಮಗನ ಉದ್ಯೋಗದವರೆಗು, ತಿನ್ನುವ ಆಹಾರದಿಂದ ಮಾಡುವ ಉದ್ಯೋಗದವರೆಗು, ಉಪ್ಪಿನಿಂದ ಹಿಡಿದು ಬೇಳೆವರೆಗು ಮೊದಲಾದ ಕೋರಿಕೆಗಳೆಲ್ಲಾ ಕೋರಿ ಕೊನೆಯಲ್ಲಿ "ಆಮಿನ್" ಎಂದು ಹೇಳುತ್ತಾರೆ. ಆಮಿನ್ ಎಂದರೇ 'ನನ್ನ ಪ್ರಾರ್ಥನೆ ಸ್ವೀಕರಿಸು' ಎಂದು ಕೆಲವರು ಅರ್ಥ ಹೇಳುವಾಗ, ಕೆಲವರು 'ತಥಾಸ್ತು' ಎನ್ನುವ ಅರ್ಥವನ್ನು ಹೇಳುತ್ತಿರುತ್ತಾರೆ. ತಥಾಸ್ತು ಎಂದರೇ 'ಹಾಗೆಯೇ' ಎಂದು ಅರ್ಥ. ಯಾರು ಯಾವ ಅರ್ಥವನ್ನು ಹೇಳಿಕೊಂಡರೂ "ಆಮಿನ್" ಎನ್ನುವ ಪದವನ್ನು ಕ್ರೈಸ್ತರು ಮುಸ್ಲಿಮ್‌ರು ಇಬ್ಬರು ಪ್ರಾರ್ಥನೆ ಮುಗಿದ ನಂತರ ಹೇಳುತ್ತಿರುತ್ತಾರೆ. ಈಗ ಮುಖ್ಯವಾಗಿ ಕೇಳುವುದು ಏನೆಂದರೇ! ಮುಸ್ಲಿಮ್‌ರು ಪ್ರಪಂಚ ಕೋರಿಕೆಗಳನ್ನು ಕೋರದೆ ಪ್ರಾರ್ಥನೆ ಮಾಡುತ್ತಿದ್ದಾರೆ. ಅವರ ಪ್ರಾರ್ಥನೆಯಲ್ಲಿ ದೇವರ ಹಿರಿಮೆಯನ್ನು ಹೇಳಿಕೊಳ್ಳುವುದು ಅಥವಾ ಹೊಗಳುವುದು ಹೊರತು ಕೋರಿಕೆಗಳೇನೂ ಇಲ್ಲ. ನೀವು ಹೇಳಿರುವುದು 'ಪ್ರಪಂಚ ಸಂಬಂಧವಲ್ಲದ್ದು ನಿಜವಾದ ಪ್ರಾರ್ಥನೆ' ಎಂದಂತೆ. ಮುಸ್ಲಿಮ್‌ರು ಮಾಡುವುದು ನೀವು ಮಾಡುವ ಪ್ರಾರ್ಥನೆಯಂಥದ್ದೇ ಅಲ್ಲವೇ! ಅವರು ಮಾಡುವುದು ಸರಿಯಾದ ಪ್ರಾರ್ಥನೆಯೇ ಆಗಿರುವಾಗ, ಪ್ರಪಂಚ ಸಂಬಂಧ ವಲ್ಲದಿರುವಾಗ ಮುಸ್ಲಿಮ್‌ರಿಗೆ ದೇವರು ತನ್ನ ಜ್ಞಾನವನ್ನೇ ಕೊಟ್ಟಿರುತ್ತಾನಲ್ಲ! ಇದರ ಪ್ರಕಾರ ಉಳಿದ ಮತಗಳಿಗಿಂತಲೂ ಒಳ್ಳೆಯ ಮಾರ್ಗದಲ್ಲಿ ಇದ್ದಂತೆಯೇ ಅಲ್ಲವೇ! ದೈವಜ್ಞಾನವನ್ನು ಅವರಿಗೆ ದೇವರು ಕೊಟ್ಟಂತೆಯೇ ಅಲ್ಲವೇ! ಮೂರು ಮತಗಳನ್ನು ಪರಿಶೀಲಿಸಿ ನೋಡಿದರೇ ನೀವು ಹೇಳಿರುವ ಭಾವನೆಗೆ ಮುಸ್ಲಿಮ್‌ರು ಹತ್ತಿರವಾಗಿ ಇದ್ದಂತೆಯೇ ಅಲ್ಲವೇ! ಇದಕ್ಕೆ ನೀವೇನು ಹೇಳುತ್ತೀರ?

**ಉತ್ತರ :–** ನಾನು ಹೇಳಿರುವುದು ದೇವರ ಜ್ಞಾನದ ಮೇಲೆ ಅಧಿಕಾರವನ್ನು ಕೋರಲು ಹೇಳಿದ್ದೇನೆ ಹೊರತು, ದೇವರನ್ನು ಹೊಗಳಿರೆಂದು ಹೇಳಲಿಲ್ಲ. ಪ್ರಪಂಚ ಕೋರಿಕೆಗಳನ್ನು ಇಲ್ಲದಂತೆ ಮಾಡಿಕೊಳ್ಳಲು ಹೇಳಿದ್ದೇನೆ. ಅಷ್ಟೇ ಅಲ್ಲದೇ ದೇವರನ್ನು ತಿಳಿಯುವುದಕ್ಕಾಗಿ ದೇವರ ಜ್ಞಾನವನ್ನು ಅಭ್ಯರ್ಥಿ

ಸಿರೆಂದಿದ್ದೇನೆ  ಆದರೆ, ದೇವರನ್ನು ಹೊಗಳಿರೆಂದು ನಾನು ಎಲ್ಲೂ ಹೇಳಲಿಲ್ಲ. ದೇವರು ಹೊಗಳಿಕೆಗೆ ಮಣಿಯುವುದಿಲ್ಲ. ಅಷ್ಟೇ ಅಲ್ಲದೇ ಹೊಗಳಿಕೆಗಳು ಆತನಿಗೆ ಸರಿಹೋಗುವುದಿಲ್ಲ. ಆತನನ್ನು ವಶಪಡಿಸಿಕೊಳ್ಳುವ ವಿಧಾನವು ಆತನ ಜ್ಞಾನವನ್ನು ತಿಳಿದುಕೊಳ್ಳುವುದೊಂದೇ ಎಂದು ಹೇಳಿದ್ದೇನೆ. ಹೊಗಳಿಕೆಗಳು ಪ್ರಪಂಚ ಸಂಬಂಧ ಕೋರಿಕೆಗಳಲ್ಲದೇ ಹೋದರೂ ಅದು ಪ್ರಾರ್ಥನೆ ಎನಿಸಿಕೊಳ್ಳುವುದಿಲ್ಲ. ಪ್ರಾರ್ಥನೆಯೊಂದರ ಮುಖ್ಯವಾದ ಅರ್ಥ ಅರ್ಥಿಸುವುದು ಅಂದರೇ ಬೇಡಿಕೊಳ್ಳುವುದು. "ಬಿಕ್ಷಾಂದೇಹೀ" ಎಂದರೇ ಅದು ಬಿಕ್ಷೆಬೇಡಿದಂತಾ ಗುತ್ತದೆ. ಹೊಗಳಿದರೇ ದೊಡ್ಡದಾಗಿ ಹೇಳಿದಂತಾಗುತ್ತದೆ. ದೇವರಿಗೆ ಹೊಗಳಿಕೆಗಳು ಸರಿಹೋಗುವುದಿಲ್ಲ. ಒಬ್ಬನು ಹೊಗಳುತ್ತಿದ್ದಾನೆ ಎಂದರೇ ಅವನು ಇರುವ ವಿಷಯವನ್ನು ಹೇಳುವವನೇ ಹೊರತು ಅದರಿಂದ ದೇವರಿಗೂ ಪ್ರಯೋಜನವಿಲ್ಲ, ಮನುಷ್ಯನಿಗೂ ಪ್ರಯೋಜನವಿಲ್ಲ. ಬಿಕ್ಷೆಬೇಡುವವನು ತನಗೆ ಬೇಕಾಗಿರುವ ಬಿಕ್ಷೆಯನ್ನು ಕೇಳಿದಹಾಗೆ, ಮನುಷ್ಯ ತನಗೆ ಬೇಕಾಗಿರುವ ಜ್ಞಾನವನ್ನು ಕೇಳಬೇಕು. ಹಾಗಲ್ಲದೇ ಬಿಕ್ಷೆಬೇಡುವವನು ಹೊಗಳಿದರೇ, ಅವನು ಅಕ್ರಮವಾಗಿ ಇತರರ ಸ್ವತ್ತನ್ನು ದೋಚಿಕೊಳ್ಳುವುದಕ್ಕೇ ಎಂದು ಅರ್ಥವಾಗಿ ಅವನ ಹೊಗಳಿಕೆಗೆ ಮಣಿಯಬಾರದೆಂದು ತಿಳಿದಹಾಗೆ ದೇವರು ಕೂಡಾ ಮನುಷ್ಯನ ಹೊಗಳಿಕೆಗೆ ಮಣಿಯಬಾರದೆಂದುಕೊಳ್ಳುತ್ತಾನೆ. ಕೆಲವರು ಮನುಷ್ಯರಿಗೆ ಹೊಗಳಿಕೆ ಎಂದರೇ ಸ್ವಲ್ಪವಾದರೂ ಇಷ್ಟವಿಲ್ಲದಿರುವುದಾಗಿರುತ್ತವೆ. ಹಾಗೆಯೇ ದೇವರಿಗೆ ಕೂಡಾ ಹೊಗಳಿಕೆಗಳು  ಸರಿಹೋಗುವುದಿಲ್ಲ.

ಪ್ರಾರ್ಥನೆ ವಿಷಯದಲ್ಲಿ ಕ್ರೈಸ್ತರು ದೇವರಬಳಿ ಇಲ್ಲದ್ದನ್ನು ಕೇಳಿದರೇ, ಮುಸ್ಲಿಮ್‌ರು ತಮಗೆ ಬೇಕಾಗಿರುವುದನ್ನು ಕೇಳದೇ ಪ್ರಾರ್ಥನೆಯೇ ಅಲ್ಲದ, ಹೊಗಳಿಕೆಯನ್ನು ಪ್ರಾರ್ಥನೆಯೆಂದು ಅಂದುಕೊಳ್ಳುತ್ತಿದ್ದಾರೆ. ಮುಸ್ಲಿಮ್‌ರ ಪ್ರಾರ್ಥನೆಯಲ್ಲಿ ದೇವರು ಮನುಷ್ಯರಿಗೆ ಏನು ಅಗತ್ಯವೋ ಅದನ್ನು ಕೇಳಲಿಲ್ಲ ಆದ್ದರಿಂದ **ಕೇಳದಿದ್ದರೆ ದೇವರು ಕೂಡಾ ಕೊಡುವುದಿಲ್ಲ. ಪ್ರಾರ್ಥನೆ** ಎಂಬ ಪದದಲ್ಲಿ ಎರಡು ಭಾಗಗಳಿವೆ. ಪ್ರ+ಅರ್ಥನೆ=ಪ್ರಾರ್ಥನೆ ಆಗುತ್ತದೆ. **ಅರ್ಥಿಸುವುದು**

ಎಂಬ ಪದದಿಂದ ಹುಟ್ಟಿರುವುದು **ಅರ್ಥನೆ**. ಆದ್ದರಿಂದ ಅರ್ಥಿಸುವುದಕ್ಕೆ ಏನು ಅರ್ಥವಿದೆಯೋ ಅದೇ ಅರ್ಥವೇ 'ಅರ್ಥನೆ' ಎಂಬ ಪದಕ್ಕೆ ಕೂಡಾ ಇದೆ. ಪ್ರ ಎಂದರೇ ಮುಖ್ಯವಾದ ಎಂದು ಅರ್ಥವಿದೆ. 'ಪ್ರಾರ್ಥನೆ' ಎಂದರೇ ಮುಖ್ಯವಾದ ಅರ್ಥನೆ ಎಂದೂ, ಮುಖ್ಯವಾದುದನ್ನು ಅಭ್ಯರ್ಥಿಸುವುದೆಂದೂ, ಎಲ್ಲದಕ್ಕಿಂತ ದೊಡ್ಡದಾಗಿ ಕೇಳುವುದೆಂದೂ ಅರ್ಥವನ್ನು ಹೇಳಬಹುದು. ಕ್ರೈಸ್ತರು ಕೇಳುತ್ತಿದ್ದರೂ ಅದು ದೇವರ ಬಳಿ ಇಲ್ಲದ್ದು, ದೇವರು ಕೊಡಲಾರದ್ದಾಗಿದೆ. ಮುಸ್ಲಿಮ್‌ರು ಕೇಳುತ್ತಿದ್ದೇವೆಂದುಕೊಂಡು ಕೇಳಬೇಕಾಗಿರುವುದನ್ನು ಕೇಳದೇ, ಸಂಬಂಧವಿಲ್ಲದ ವಿಷಯವನ್ನು ಮಾತನಾಡಿದಂತಾಗಿದೆ. ಆದ್ದರಿಂದ ದೇವರಬಳಿ ಯಿಂದ ಅವರಿಗೆ ಯಾವುದು ಅವಶ್ಯಕವೋ ಅದನ್ನು ಪಡೆಯಲಾರದೆ ಹೋಗುತ್ತಿದ್ದಾರೆ.

ಗತಕಾಲದಲ್ಲಿ ಬುದ್ಧಿಹೀನತೆ ಇರುವವನು ಎಂದರೇ ದಡ್ಡನು ಇರುವೆಗಳಿಗಾಗಿ ಆಕಾಶದಲ್ಲಿ ಅನ್ವೇಷಣೆ ಮಾಡಿದನಂತೆ. ಇರುವೆಗಳು ಬೇಕಾದರೇ ಭೂಮಿಯಲ್ಲಿ ಹುಡಬೇಕೇ ಹೊರತು ಆಕಾಶದಲ್ಲಿ ಹುಡುಕಿದರೇ ಎಂದಿಗೂ ಇರುವೆಗಳು ದೊರೆಯದಂತೆ, ಕ್ರೈಸ್ತರಿಗೆ ದೇವರ ಸನ್ನಿಧಿ ದೊರೆಯುತ್ತಿಲ್ಲ. ದೇವರ ರಾಜ್ಯವೆಂದರೇ ಏನೋ ತಿಳಿಯುತ್ತಿಲ್ಲ. ಹಾಗೆಯೇ ಉಚಿತ ಮಜ್ಜಿಗೆಗಾಗಿ ರೈತನ ಮನೆಗೆ ಹೋದ ಕೂಲಿಯವನು ಚೆಂಬನ್ನು ಮುಚ್ಚಿಟ್ಟು ರೈತನನ್ನು ನೋಡಿ ಈ ಊರಿನಲ್ಲಿ ನಿನಗಿರುವಷ್ಟು ಹಸುಗಳು ಯಾರಿಗೂ ಇಲ್ಲ, ನಿನ್ನಷ್ಟು ದೊಡ್ಡ ಧನಿಕನು ಯಾರೂ ಇಲ್ಲ, ಭೂಮಿ ಇರುವವರಲ್ಲಿ ನಿನಗಿರುವಷ್ಟು ಎಕರೆಗಳು ಯಾರಿಗೂ ಇಲ್ಲ, ನೀನು ಬೆಳೆದ ಬೆಳೆಯನ್ನು ಯಾರೂ ಬೆಳೆಯಲಾರರು. ನಿನಗಿಂತಲೂ ದೊಡ್ಡ ರೈತ ಯಾರೂ ಇಲ್ಲವೆಂದು ಹೊಗಳಿದನಂತೆ. ಆಗ ಆ ರೈತ ತನ್ನನ್ನು ಉಚಿತವಾಗಿ ಹೊಗಳಿಸಿಕೊಳ್ಳುವುದು ಇಷ್ಟವಿಲ್ಲದೇ ಅವನು ತನ್ನನು ಹೊಗಳಿದ್ದಕ್ಕೆ ಅವನಿಗೆ ಇಪ್ಪತ್ತೈದೋ, ಪೊರಕೆಯೋ ಕೊಟ್ಟು ಕಳುಹಿಸಿದನಂತೆ. ರೈತನಬಳಿ ಕೆಲಸಮಾಡುವ ಕೂಲಿಯವನಿಗೆ ಅವಶ್ಯಕವಾದುದು ಮಜ್ಜಿಗೆ, ಆದರೇ ಅವನಿಗೆ ಲಭಿಸಿರುವುದು ಇಪ್ಪತ್ತೈದು ರೂಪಾಯಿಗಳ ಹಣ, ಕಸಗುಡಿಸಿಕೊಳ್ಳುವ ಪರಕೆ. ಅವನಿಗೆ ಏನು ಅಗತ್ಯವೋ

ಅದು ದೊರೆಯಲಿಲ್ಲ ಆದರೇ ತನಗೆ ಅವಶ್ಯವಿಲ್ಲದವು ದೊರೆತಂತೆ, ಮುಸ್ಲಿಮ್‌ರು ತಮಗೆ ಬೇಕಾಗಿರುವ ಅಲ್ಲಾಹ್ ಸನ್ನಿಧಿಯನ್ನು ಬಿಟ್ಟು ಸ್ವರ್ಗವನ್ನು ಹೊಂದುತ್ತಿದ್ದಾರೆ. ಪ್ರಾರ್ಥನೆಯಿಂದ ಅವರಿಗೆ ಅಂತಿಮ ದೈವಗ್ರಂಥದಲ್ಲಿ ಹೇಳಿದಂತೆ ಸ್ವರ್ಗ ಲಭಿಸುತ್ತಿದೆ.

ಈ ವಿಧವಾಗಿ ಕ್ರೈಸ್ತರು, ಮುಸ್ಲಿಮ್‌ರು ಬೋಧಕರ ಬೋಧನೆಗಳಿಂದ ತಪ್ಪುದಾರಿ ಹಿಡಿದುಹೋಗಿ, ದೈವಗ್ರಂಥಗಳಾದ ತಮ್ಮ ಗ್ರಂಥಗಳಲ್ಲಿ ಏನಿದೆಯೋ, ದೇವರು ಏನು ಹೇಳಿದ್ದಾನೋ ತಿಳಿಯಲಾರದೆ ಹೋಗಿದ್ದಾರೆ. ನಿಜವಾದ ಪ್ರಾರ್ಥನೆಯನ್ನು ಬಿಟ್ಟು ಹೆಸರಿಗೆ ಮಾತ್ರ ಪ್ರಾರ್ಥನೆಯಾದುದನ್ನು ಆಚರಿಸುತ್ತಿದ್ದಾರೆ. ಕ್ರೈಸ್ತರಲ್ಲಿ, ಮುಸ್ಲಿಮ್‌ರಲ್ಲಿ 'ಒಬ್ಬ ದೇವರು' ಎನ್ನುವ ನಂಬಿಕೆ ಇದೆ. ಅವರ ಬೋಧಕರು ಗ್ರಂಥದಲ್ಲಿನ ವಾಕ್ಯಗಳಿಗೆ ಸರಿಯಾದ ಅರ್ಥವನ್ನು ಬೋಧಿಸದಿದ್ದರೂ "ದೇವರು ಒಬ್ಬನೇ, ಒಬ್ಬ ದೇವರನ್ನೇ ಆರಾಧಿಸಬೇಕು, ಅನ್ಯದೇವತಾರಾಧನೆ ಮಾಡಬಾರದು" ಎಂದು ಬೋಧಿಸಿ ಎಷ್ಟೋ ಒಳ್ಳೆಯದನ್ನು ಮಾಡಿದ್ದಾರೆ. ಹಿಂದೂಗಳಲ್ಲಿ ಪ್ರಥಮ ದೈವಗ್ರಂಥವಾದ ಭಗವದ್ಗೀತಾ ಜ್ಞಾನವನ್ನು ಅವರ ಬೋಧಕರು ತಪ್ಪಾಗಿ ಹೇಳಿ, ದೈವಮಾರ್ಗವನ್ನು ಬಿಟ್ಟು ನಡೆಯುವಂತೆ ಮಾಡಿದ್ದಾರೆ. ಅದು ಎಲ್ಲ ಮತಗಳಲ್ಲಿ ಸಹಜವಾಗಿರುವುದೇ ಆದರೂ, ಹಿಂದೂಗಳಲ್ಲಿ ಮಾತ್ರ ಅವರ ಬೋಧಕರು ಒಂದೇ ದೇವರನ್ನು ಕುರಿತು ಹೇಳದೆ ಅನೇಕ ದೇವರುಗಳನ್ನು, ದೇವತೆಗಳನ್ನು ಅವರು ಆರಾಧಿಸುತ್ತಾ ಉಳಿದ ಹಿಂದೂಗಳನ್ನು ಕೂಡಾ ಅನೇಕ ದೇವತೆಗಳನ್ನು ಆರಾಧಿಸುವಂತೆ ಬೋಧಿಸಿದ್ದಾರೆ. ಆದ್ದರಿಂದ ಹಿಂದೂ ಮತದಲ್ಲಿ ಒಟ್ಟಾರೆ ಅನ್ಯದೇವತಾರಾಧನೆ ಅಭ್ಯಾಸವಾಗಿ ಹೋಗಿದೆ. ಹಾಗೆ ಆರಾಧಿಸುವುದೇ ಹಿಂದೂತ್ವವೆಂದು ಅವರೇ ಹೇಳಿಕೊಳ್ಳುತ್ತಿದ್ದಾರೆ. ಭಗವದ್ಗೀತೆ ಗ್ರಂಥದಲ್ಲಿ ಬೇಡವೆಂದು ಹೇಳಿರುವ ಆಚರಣೆಗಳನ್ನೇ ಹಿಂದೂಮತದಲ್ಲಿ ಹಿರಿಯರಾದ ಸ್ವಾಮೀಜಿಗಳು, ಸನ್ಯಾಸಿಗಳು, ಗುರುಗಳು ಹೇಳುವುದರಿಂದ ಹಿಂದೂ ಪ್ರಜೆಗಳೆಲ್ಲರೂ ಭಗವದ್ಗೀತೆಯಲ್ಲಿನ ಭಾವನೆಯನ್ನು ಬಿಟ್ಟು, ಅದರ ಕಡೆ ನೋಡದೆಯೇ, ಅವರ ಹಿರಿಯರು

ಹೇಳಿರುವ ಮಾತುಗಳನ್ನೇ ಕೇಳಿಸಿಕೊಂಡು, ಮಾರ್ಗ ತಪ್ಪಿದವರಾಗಿ ಅನ್ಯ ದೇವತಾರಾಧನೆ ಮಾಡುತ್ತಾ, ನಾವು ಸರಿಯಾದ ಮಾರ್ಗದಲ್ಲಿ ಇದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಮೂರು ಮತದವರು ಅವರ ಹಿರಿಯರ ಬೋಧನೆಗಳಿಂದ ಅವರು ಸ್ವಲ್ಪ ತಪ್ಪುದಾರಿ ಹಿಡಿದು ನಡೆಯುತ್ತಿದ್ದಾರೆ.

**ಪ್ರಶ್ನೆ :– ಮೂರು ಮತಗಳವರಿಗೆ ಅವರ ದೈವಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿನ ವಾಕ್ಯಗಳ ಭಾವವು ಸರಿಯಾಗಿ ತಿಳಿಯದೇ ಹೋಗಿದೆಯೆಂದು ನೀವು ಹೇಳಿದ ಮಾತನ್ನು ನಾನು ಒಂದುಸಲ ಮುಸ್ಲಿಮ್‌ರ ಮುಂದೆ ಪ್ರಸ್ತಾಪಿಸಿದಾಗ, ಅವರು ತಮ್ಮ ಹಿರಿಯರು ಏನು ಹೇಳಿದರೇ ಅದನ್ನೇ ಸತ್ಯವೆಂದು ನಂಬುತ್ತೇವೆಂದು, ಅವರ ಮತದಲ್ಲಿ ಮೊದಲಿನಿಂದ ಬಂದಿರುವ ಆಚಾರದ ಪ್ರಕಾರ ನಾವು ನಮ್ಮ ಖುರಾನ್ ಗ್ರಂಥದಲ್ಲಿನ ಮಾತುಗಳ ಅರ್ಥಕ್ಕಾಗಿ ನಮ್ಮ ಹಿರಿಯರು ಹೇಳಿರುವ ಮಾತುಗಳಿಗೇ ಹೆಚ್ಚು ಬೆಲೆ ಕೊಡುತ್ತೇವೆಂದು, ನಮ್ಮ ಹಿರಿಯರು ಖುರಾನ್‌ನಲ್ಲಿ ಎಷ್ಟೋ ಶೋಧಿಸಿ ತಿಳಿದುಕೊಂಡಿರುವ ವಾಕ್ಯಗಳನ್ನೇ ನಮಗೆ ತಿಳಿಸುತ್ತಿರುತ್ತಾರೆಂದು ಹೇಳಿದ್ದಾರೆ. ನಮ್ಮ ಹಿರಿಯರು ಹೇಳಿರುವುದು ಸತ್ಯವಾದ ಜ್ಞಾನವೇ ಆಗಿರುವಾಗ ನಾವೇಕೆ ನಮ್ಮ ಹಿರಿಯರ ಮಾತನ್ನು ಕೇಳಬಾರದು? ಎಂದು ಹೇಳುತ್ತಿದ್ದಾರೆ. ಅವರ ಮಾತುಗಳಿಗೆ ನೀವು ಏನು ಹೇಳುತ್ತೀರ?**

**ಉತ್ತರ :–** ಅವರ ಹಿರಿಯರ ಮಾತನ್ನು ಕೇಳುತ್ತೇವೆಂದು ಎನ್ನುವುದರಲ್ಲಿ ಇವರ ತಪ್ಪಿಲ್ಲ ಆದರೇ, ಅವರು ಹೇಳುವ ಮಾತು ಸತ್ಯವಾದುದಾ! ಅಲ್ಲವಾ! ಎಂದು ಯೋಚಿಸದೇ ವಿಚಕ್ಷಣಾ ರಹಿತವಾಗಿ ಕೇಳುತ್ತೇವೆನ್ನುವುದು ತಪ್ಪಾಗುವುದು. ಅವರ ಹಿರಿಯರು ಹೇಳುವ ವಾಕ್ಯಗಳು ಸರಿಯಾದ ಭಾವನೆ ಹೊಂದಿರುವ ವಾದರೇ ಪರವಾಗಿಲ್ಲ ಆದರೇ, ಒಂದುವೇಳೆ ಭಾವನೆ ತಪ್ಪಿರುವವಾದರೇ ಗ್ರಂಥದಲ್ಲಿ ಅಲ್ಲಾಹ್ ಹೇಳಿರುವುದು ಒಂದಾಗಿದ್ದರೇ ಮನುಷ್ಯನಿಗೆ ಅರ್ಥ ವಾಗಿರುವುದು ಮತ್ತೊಂದಾಗುತ್ತದೆ. ಆದ್ದರಿಂದ ಯಾರ ಮತದಲ್ಲಾದರೂ ಅವರ ಮತಹಿರಿಯರು ಹೇಳುವ ಮಾತುಗಳು ಸರಿಯಾದವೋ ಅಲ್ಲವೋ

ಸ್ವಲ್ಪ ಯೋಚಿಸಬೇಕಾದ ಅಗತ್ಯವಿದೆ. ಈ ವಿಷಯವಾಗಿ ಖುರಾನ್ ಗ್ರಂಥದಲ್ಲಿ ಆರನೆಯ ಸೂರಾ 91ನೇ ಆಯತ್‌ನಲ್ಲಿ ಹೀಗೆ ಬರೆದಿದ್ದಾರೆ.

**(6–91) "ಅಲ್ಲಾಹ್ (ದೇವರು) ಯಾವ ಮಾನವನ ಮೇಲೂ ಎಂತಹ ಜ್ಞಾನ ವಿಷಯವನ್ನು ಅವತರಿಸುವಂತೆ ಮಾಡಲಿಲ್ಲವೆಂದು ಹೇಳಿರುವಾಗ ಈ ಅವಿಶ್ವಾಸ ಜನರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ವಿಧವಾಗಿ ಅರ್ಥಮಾಡಿಕೊಳ್ಳಲಿಲ್ಲ. ಅವರನ್ನು ಕೇಳು ಮೂಸಾ ತಂದಿರುವ ಆ ತೌರಾತ್ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ? ಆ ಗ್ರಂಥವು ಒಂದು ಜ್ಯೋತಿ, ಮಾನವರಿಗಾಗಿ ಮಾರ್ಗದರ್ಶಕತ್ವ. ನೀವು ಅದನ್ನು ಬೇರೆಬೇರೆ ಕಾಗದಗಳಾಗಿ (ಗ್ರಂಥಗಳಾಗಿ) ವಿಂಗಡಿಸಿ ತೋರುತ್ತಿದ್ದೀರ. ಎಷ್ಟೋ ವಿಷಯಗಳನ್ನು ಮುಚ್ಚಿಡುತ್ತಿದ್ದೀರ. ನಿಮಗಾಗಲೀ, ನಿಮ್ಮ ಹಿರಿಯರಿಗಾಗಲೀ ತಿಳಿಯದ ಎಷ್ಟೋ ವಿಷಯಗಳು ಇದರ ಮೂಲವಾಗಿ ನಿಮಗೆ ಕಲಿಸಲ್ಪಟ್ಟಿವೆ. ತೌರಾತ್ ಗ್ರಂಥವನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ನೇ (ದೇವರೇ) ಎಂದು ಹೇಳು, ಆ ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿಯೇ ಆಡಿಕೊಳ್ಳಲುಬಿಡು"** ಎಂದು ಇದೆ. ಈ ಆಯತ್‌ನಲ್ಲಿ ಪ್ರತ್ಯೇಕಿಸಿ 'ನಿಮಗಾಗಲೀ, ನಿಮ್ಮ ಹಿರಿಯರಿಗಾಗಲೀ ತಿಳಿಯದ ವಿಷಯಗಳು' ಎಂದಿರುವುದನ್ನು ಗಮನಿಸಬಹುದು. ಆ ಮಾತಿನ ಪ್ರಕಾರ ಯಾರಾದರೇ ಎಲ್ಲಾ ತಿಳಿದಿರುವ ಹಿರಿಯರೆಂದು ಅಂದುಕೊಂಡಿದ್ದೇವೋ ಅವರು ತಿಳಿಯದವರೇ ಎಂದು, ಗ್ರಂಥಗಳಲ್ಲಿನ ವಿಷಯಗಳು ನಿಮಗೆ ತಿಳಿಯದಹಾಗೆಯೇ ಅವರಿಗೆ ಕೂಡಾ ತಿಳಿದಿಲ್ಲವೆಂದು ದೇವರು ಹೇಳಿದಂತೆ ಇದೆ. ಆದ್ದರಿಂದ ಜ್ಞಾನ ವಿಷಯಗಳಿರುವ ದೈವಗ್ರಂಥಗಳನ್ನು ಸ್ವತಃವಾಗಿ ನೀವು ಓದಿ ಅರ್ಥ ಮಾಡಿಕೊಳ್ಳಬೇಕು. ಇತರ ಹಿರಿಯರು ಹೇಳಿರುವ ಮಾತುಗಳನ್ನು ವಿಶಧೀಕರಿಸಿ ನೋಡಿ ಅದರಲ್ಲಿ ಸತ್ಯವಿದ್ದರೇ ನಂಬಬೇಕು. ಸತ್ಯವಿಲ್ಲದೇ ಹೋದರೇ ಅವುಗಳನ್ನು ಹಿರಿಯರು ಹೇಳಿರುವವಾದರೂ, ಬೋಧಕರು ಹೇಳಿರುವವಾದರೂ ಬಿಟ್ಟು ಹಾಕಬೇಕಾಗಿದೆ! "ಪ್ರಪಂಚ ವಿಷಯಗಳಲ್ಲಿ ಹಿರಿಯರು ಹೇಳಿದಂತೆ ಕೇಳಿದರೂ ಫರವಾಗಿಲ್ಲ ಆದರೇ,

ದೈವಗ್ರಂಥ ವಿಷಯಗಳಲ್ಲಿ ನೀವು ಶ್ರದ್ಧೆ ಹೊಂದಿದ್ದರೇ ನಿಮಗೇ ನೇರವಾಗಿ ಜ್ಞಾನ ಕೊಡಲಾಗುವುದು" ಎಂದು ದೇವರು ಒಂದು ಸಂದರ್ಭದಲ್ಲಿ ಮಧ್ಯ ದೈವಗ್ರಂಥದಲ್ಲಿ ಹೇಳಿದ್ದಾನೆ. ಯೋಹಾನ್ ಸುವಾರ್ತೆ, ಅಧ್ಯಾಯ 6, ವಾಕ್ಯ 32ರಲ್ಲಿ ಹೀಗೆ ಹೇಳಿದ್ದಾನೆ ನೋಡಿರಿ. **(ಯೋಹಾನ 6–32) "ಪರಲೋಕದಿಂದ ಬರುವ ಆಹಾರವು ಮೋಷೇ ನಿಮಗೆ ಕೊಡಲಿಲ್ಲ. ನನ್ನ ತಂದೆಯೇ ಪರಲೋಕದಿಂದ ಬರುವ ನಿಜವಾದ ಆಹಾರ ನಿಮಗನುಗ್ರಹಿಸುತ್ತಿದ್ದಾನೆ."** ಈ ವಾಕ್ಯದಲ್ಲಿ ಪ್ರಜೆಗಳಿಗೆ ದೈವಜ್ಞಾನವನ್ನು ಆತ್ಮವೇ ಸ್ವತಃವಾಗಿ ತಿಳಿಸುತ್ತಿದೆ ಎಂದು ಹೇಳುವುದರಿಂದ ಶ್ರದ್ಧೆ ಹೊಂದಿರುವವನಿಗೆ ಯಾರಿಗಾದರೂ ಅವನ ಶರೀರದಲ್ಲಿನ ಆತ್ಮವೇ ಜ್ಞಾನವನ್ನು ನೀಡಬಲ್ಲದೆಂದು ತಿಳಿಯುತ್ತಿದೆ. ಪರಲೋಕದಿಂದ ಬರುವ ಆಹಾರ ಎಂದರೇ ಪರಲೋಕ ಸಂಬಂಧ ಜ್ಞಾನವೆಂದೂ, ಪರಲೋಕವನ್ನು ಹೊಂದುವುದಕ್ಕೆ (ಮೋಕ್ಷವನ್ನು ಹೊಂದುವುದಕ್ಕೆ) ತಕ್ಕ ದೈವಜ್ಞಾನವೆಂದು ಅರ್ಥ. ದೈವಜ್ಞಾನವನ್ನು ತಿಳಿಯುವುದಕ್ಕೆ ದೇವರ ಮೇಲೆ ಶ್ರದ್ಧೆ, ಭಕ್ತಿ ಹೊಂದಿರಬೇಕು. ಶ್ರದ್ಧೆ, ಭಕ್ತಿ ಇಲ್ಲದವನಿಗೆ ದೈವಜ್ಞಾನವು ತಿಳಿಯುವುದಿಲ್ಲ.

**ಪ್ರಶ್ನೆ :– ನಮಗೆ ದೈವಗ್ರಂಥದಲ್ಲಿನ ವಿಷಯಗಳು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿಲ್ಲ. ಇದಕ್ಕು ಮೊದಲು ನಾವು ದೈವಗ್ರಂಥವನ್ನು ಓದಿದರೂ ನಮಗೆ ಅರ್ಥವಾಗದ ವಿಷಯಗಳೆಷ್ಟೋ ನೀವು ಸಂಪೂರ್ಣ ವಿವರವಾಗಿ ತಿಳಿಸುವುದರಿಂದ ನಮಗೆ ತಿಳಿದಿದೆ. ನಾವು ನಿಮ್ಮನ್ನೇ ನಮ್ಮ ಬೋಧಕರಾಗಿ ತಿಳಿದಿದ್ದೇವೆ. ನಿಮ್ಮ ಮೂಲಕವೇ ಎಲ್ಲ ವಿಷಯಗಳು ತಿಳಿಯುತ್ತಿವೆ. ನೀವಿಲ್ಲದ ಕಾಲದಲ್ಲಿ ಅಂದರೇ ಮುಂಬರುವ ಭವಿಷ್ಯತ್ತು ಕಾಲದಲ್ಲಿ ಕೂಡಾ ನೀವು ಬರೆದಿರುವ ಗ್ರಂಥಗಳನ್ನು ನೋಡಿ ಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಾಗಿದೆ. ಈ ಲೋಕದಲ್ಲಿ ನಿಮ್ಮಿಂದಲೇ ಈಗಲಾದರೂ, ನಂತರ ಯಾವಾಗಾದರೂ ನಿಮ್ಮ ಗ್ರಂಥಗಳಿಂದಾಗಲೀ ಜ್ಞಾನವು ತಿಳಿಯುವುದೆಂದು, ನೀವು ತಿಳಿಸುವ ಜ್ಞಾನವನ್ನು ಯಾರೂ ತಿಳಿಸಲಾರರೆಂದು ನಿರೂಪಣೆಯಾಗಿ ತಿಳಿಯುತ್ತಿದೆ. ಹಾಗಿರುವಾಗ ನಾವು ನಮ್ಮ ಹಿರಿಯರಾದ ನಿಮ್ಮಿಂದ ಜ್ಞಾನ ತಿಳಿದಿದೆ ಎಂದು ಹೇಳಿಕೊಳ್ಳಬಲ್ಲೆವು. ಹಾಗಿರುವಾಗ "ನಿಮ್ಮ ಹಿರಿಯರಿಂದ**

**ನಿಮಗೆ ಜ್ಞಾನ ಕೊಡಲಾಗುವುದಿಲ್ಲ ನಾನೇ ನಿಮಗೆ ಜ್ಞಾನವನ್ನು ಕೊಡುತ್ತೇನೆಂದು" ದೇವರು ಹೇಳಿದಮಾತನ್ನು ನೋಡಿ ಸ್ವತಃವಾಗಿ ನಿಮ್ಮಿಂದ ಜ್ಞಾನವನ್ನು ತಿಳಿಯಲಾದ ನಾವು ದ್ವಿತೀಯ ದೈವಗ್ರಂಥದಲ್ಲಿನ ಮೇಲಿನ ವಾಕ್ಯವನ್ನು ನಂಬಬೇಕಾ! ಇಲ್ಲವಾ!! ಎಂಬ ಸಂಶಯದಲ್ಲಿ ಬೀಳುತ್ತಿದ್ದೇವೆ. ದೇವರು ಹೇಳಿರುವಮಾತು ಶಾಸ್ತ್ರಬದ್ಧ ವಾದುದಾಗಿರುತ್ತದೆ. ಆದ್ದರಿಂದ ಅದು ನೂರಕ್ಕೆ ನೂರು ಪಾಲು ಸತ್ಯ. ಹಾಗೆಯೇ ನೀವು ಹೇಳಿರುವ ಬೋಧನೆಗಳಿಂದ ಜ್ಞಾನವು ನಮಗೆ ತಿಳಿದಿರುವುದೂ ನೂರಕ್ಕೆ ನೂರು ಪಾಲು ಸತ್ಯ. ನೀವು ಹೇಳಿರುವ ಜ್ಞಾನವು ಶಾಸ್ತ್ರಬದ್ಧವಾಗಿ, ಸತ್ಯವಾದು ದಾಗಿದೆ. ಆದ್ದರಿಂದ ಈಕಡೆ ನಿಮ್ಮ ಬೋಧನೆಯನ್ನು ಅಲ್ಲಗಳೆಯಲಾರೆವು, ಅತ್ತ ದೇವರ ಮಾತನ್ನು ಅಲ್ಲಗಳೆಯಲಾರೆವು. ನಮ್ಮಲ್ಲಿ ತುಂಬಿಹೋಗಿರುವ ಈ ಅನುಮಾನವನ್ನು ಬಗೆಹರಿಸುವುದಕ್ಕೆ ಎಲ್ಲ ವಿಧಗಳಲ್ಲಿ ನೀವೇ ಸಮರ್ಥನೆಂದು ತಿಳಿದು, ನಿಮ್ಮನ್ನೇ ಭಕ್ತಿ ಪೂರ್ವಕವಾಗಿ ಕೇಳುತ್ತಿದ್ದೇವೆ. ದೈವಗ್ರಂಥದಲ್ಲಿನ ದೇವರ ಮಾತನ್ನು ನಂಬಬೇಕಾ ಇಲ್ಲವಾ ನೀವೇ ಹೇಳಿರಿ. ಈ ಮಾತನ್ನು ಕೇಳುವುದಕ್ಕೆ ಮುಖ್ಯವಾದ ಮತ್ತೊಂದು ಕಾರಣ ಕೂಡಾ ಇದೆ. ಅದೇನೆಂದರೇ! ದೈವಗ್ರಂಥದಲ್ಲಿ ಕೂಡಾ ಸ್ವಲ್ಪ ಕಾಲುಷ್ಯ ಏರ್ಪಟ್ಟು ಮನುಷ್ಯರ ಮಾತುಗಳು ಕೂಡಾ ಅದರಲ್ಲಿ ಬೆರೆತಿವೆ ಎಂದು ತಿಳಿಯುವುದರಿಂದ ಮೇಲಿನ ವಾಕ್ಯ ದೇವರು ಹೇಳಿರುವುದೇನಾ ಎಂಬ ಸಂಶಯವನ್ನು ಕೂಡಾ ವ್ಯಕ್ತ ಪಡಿಸುತ್ತಾ ಕೇಳುತ್ತಿದ್ದೇವೆ. ದಯೆಮಾಡಿ ವಿವರವಾಗಿ ಉತ್ತರವನ್ನು ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ದ್ವಿತೀಯ ದೈವಗ್ರಂಥದಲ್ಲಿನ (ಯೋಹಾನ್ 6–32) ವಾಕ್ಯವು ಮಾನವರು ಕಲ್ಪಿಸಿ ಬರೆದಿರುವುದಲ್ಲ. ಅದು ದೈವಾದೇಶವಾದ ವಾಕ್ಯ. ಆದ್ದರಿಂದ ಆ ವಾಕ್ಯವನ್ನು ಎಲ್ಲರೂ ಗುರುತಿಸಬೇಕಾದ್ದು. ದೇವರು (ಆತ್ಮ) ಏನು ಹೇಳಿದರೂ ಅದು ಸತ್ಯವೇ ಆಗಿರುತ್ತದೆ. ಅದರಿಂದ ಪ್ರಪಂಚದಲ್ಲಿ ದೊಡ್ಡವರಿಗೆ ತಿಳಿದಿದೆ ಎಂದು ಅವರು ಹೇಳಿರುವುದು ಕೇಳಿದರೇ ಇತರರ ಮಾತುಗಳಿಂದ ದೇವರ ಜ್ಞಾನವು ನಿನಗೆ ಲಭ್ಯವಾಗುವುದಿಲ್ಲ. ನನ್ನಿಂದ ಮಾತ್ರವೇ ಲಭಿಸುವುದೆಂದು ಹೇಳಿರುವಮಾತು ಎಂದಿಗೂ ಆಮೋದ ಯೋಗ್ಯವೇ. ವಾಸ್ತವವಾಗಿ ದೇವರ

ಗ್ರಂಥದಲ್ಲಿನ ದೇವರ ವಾಕ್ಯಗಳು ದೊಡ್ಡವರೆನ್ನಲ್ಪಡುವ ಬೋಧಕರಿಗೆ ಯಾವ ಮತದಲ್ಲಿಯೂ ಸರಿಯಾಗಿ ತಿಳಿಯಲ್ಪಡಲಿಲ್ಲ. ಜ್ಞಾನ ತಿಳಿಯದಿದ್ದರೂ ತಮಗೆ ತಿಳಿದಿದೆ ಎನ್ನುವಂತೆ ಹೇಳುವವರಿರುವುದರಿಂದ ಅವರ ಮಾತುಗಳಿಂದ ಪರಲೋಕ ಆಹಾರವಾದ ದೈವಜ್ಞಾನವು ತಿಳಿಯದೆಂದು ಆತ್ಮ ವಾಕ್ಯ ರೂಪದಲ್ಲಿ ಹೇಳಿರುವುದು ವಾಸ್ತವವೇ. ಆದರೇ ಕೆಲವರು ದೇವರ ಕೃಪೆಯಿಂದ ಜ್ಞಾನ ಅರ್ಥವಾದವರು ಕೂಡಾ ಇದ್ದಾರೆ. ದೈವಜ್ಞಾನ ಅರ್ಥವಾದವರು ಅಪರೂಪವಾಗಿ ಬೋಧನೆಗಳು ಹೇಳುತ್ತಿರುತ್ತಾರೆ. ಅಂಥವರು ಹೇಳಿರುವ ಜ್ಞಾನವೆಲ್ಲವೂ ಸತ್ಯಸಮೇತವಾಗಿ, ಶಾಸ್ತ್ರಬದ್ಧವಾಗಿರುವ ಜ್ಞಾನವಾಗಿ ಇರುತ್ತದೆ. ಸಂಪೂರ್ಣ ಜ್ಞಾನವನ್ನು ತಿಳಿದಿರುವವರು ಅಪರೂಪವಾಗಿ ಇರುವುದೇ ಅಲ್ಲದೇ ಅವರು ಅಪರೂಪವಾಗಿ ಬೋಧಕರಾಗಿರುತ್ತಾರೆ.

ಈಗ ನನ್ನನ್ನು ನೀವು ಸತ್ಯವನ್ನು ಹೇಳುವ ಬೋಧಕನಾಗಿ ಗುರುತಿಸಿ ನೀವು ತಿಳಿಸುವ ಜ್ಞಾನವು ಸತ್ಯವಾದುದೇ ಅಲ್ಲವೇ! ಶಾಸ್ತ್ರಬದ್ಧವಾದುದೇ ಅಲ್ಲವೇ! ಎಂದು ಕೇಳಿದ್ದೀರಿ. ಅದಕ್ಕೆ ನಾನು "ನಾನು ಹೇಳುವ ಬೋಧನೆಗಳು ಸತ್ಯವಾದವುಗಳು, ಶಾಸ್ತ್ರಬದ್ಧವಾದುವುಗಳೆ" ಎಂದು ಒಪ್ಪಿಕೊಳ್ಳುತ್ತಿದ್ದೇನೆ. ನೀವು ಹೇಳಿದಂತೆ ನಾನು ಎಷ್ಟು ದೊಡ್ಡ ಜ್ಞಾನಿಯಾದರೂ, ಭೂಮಿಮೇಲಿರುವ ಪ್ರಜೆಗಳೆಲ್ಲರೂ ನನ್ನ ಮಾತನ್ನೇ ಸತ್ಯವೆಂದು ನನ್ನನ್ನು ಆಶ್ರಯಿಸಿದರೂ, ಈತನೇ ನಮ್ಮ ಬೋಧಕನೆಂದು ನೀವು ನನ್ನನ್ನು ಕುರಿತು ಜೋರಾಗಿ ಹೇಳಿದರೂ, ದೈವಗ್ರಂಥದಲ್ಲಿನ ದೇವರ ವಾಕ್ಯದ ಪ್ರಕಾರ ಪರಲೋಕದಿಂದ ಬರುವ ಆಹಾರವಾದ ದೈವಜ್ಞಾನವು ನನ್ನಿಂದ ಲಭ್ಯವಾಗುವುದಿಲ್ಲ. ವಾಕ್ಯದ ಪ್ರಕಾರ ಆತ್ಮದಿಂದ ಲಭ್ಯವಾಗುವುದು. ಇಲ್ಲಿ ಚೆನ್ನಾಗಿ ಆಳವಾಗಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಅದು ಹೇಗೆಂದರೇ!

ಪ್ರತಿ ಮನುಷ್ಯನ ಶರೀರದಲ್ಲಿ ಜ್ಞಾನವನ್ನು ತಿಳಿಯಬೇಕಾದವನು ಜೀವಾತ್ಮ. ಹಾಗೆಯೇ ಪ್ರತಿ ಶರೀರದಲ್ಲೂ ಜೀವಿಗೆ ಎಲ್ಲ ವಿಷಯಗಳು

ತಿಳಿಸುವವನು ಆತ್ಮವೇ. ಆದ್ದರಿಂದ ಜ್ಞಾನವನ್ನು ತಿಳಿಸುವುದು ಆತ್ಮವೆಂದು ಹೇಳಬಹುದು. ಶರೀರದಲ್ಲಿ ಜೀವಿಯು ತಿಳಿಯುವವನಾಗಿ ಇರುವಾಗ, ಆತ್ಮ ತಿಳಿಸುವುದಾಗಿರುವಾಗ, ಪರಮಾತ್ಮ ಸಾಕ್ಷಿಯಾಗಿ (ಅಕ್ಷಿಯಾಗಿ) ನೋಡುವವನಾಗಿದ್ದಾನೆ. ಈ ವಿಷಯವನ್ನು ಅಂತಿಮ ದೈವಗ್ರಂಥದಲ್ಲಿ ಸೂರಾ 50, ಆಯತ್ 21 ರಲ್ಲಿ ಹೇಳಿರುವಹಾಗೆ ಮೊದಲಿಗೇ ಹೇಳಿಕೊಂಡಿದ್ದೇವೆ. ಇದೇ ವಿಷಯವೇ ಅಂದರೇ ಮೂರು ಆತ್ಮಗಳ ವಿಷಯವೇ ಉಳಿದ ಎರಡು ದೈವಗ್ರಂಥಗಳಲ್ಲಿಯು ಇದೆ. ಶರೀರದಲ್ಲಿ ಜೀವಾತ್ಮಗೆ ಸ್ವಯಂಶಕ್ತಿ ಇಲ್ಲ ಆದ್ದರಿಂದ ಎಲ್ಲ ಕಾರ್ಯಗಳು ಆತ್ಮದಿಂದಲೇ ನಡೆಯಬೇಕು. ಪರಮಾತ್ಮವಾದ ಮೂರನೆಯ ಪುರುಷನಾಗಿರುವ ದೇವರು ಏನೂ ಮಾಡದೆ ಎಲ್ಲವನ್ನೂ ಸಾಕ್ಷಿಯಾಗಿ ನೋಡುತ್ತಾ ಇರುತ್ತಾನೆ. ಶರೀರದೊಳಗೆ ಕಿವಿಗಳ ಮೂಲಕ, ಕಣ್ಣುಗಳ ಮೂಲಕ ಸೇರುವ ವಿಷಯಗಳನ್ನು, ಅಷ್ಟೇಅಲ್ಲದೆ ಒಟ್ಟು ಐದು ಜ್ಞಾನೇಂದ್ರಿಯಗಳ ಮೂಲಕ ತಿಳಿಯುವ ವಿಷಯಗಳನ್ನು ಆತ್ಮವೇ ಬುದ್ಧಿಗೆ ಗ್ರಹಿಸುವಂತೆ ಮಾಡುತ್ತಿದೆ.

ಈಗ ಅಸಲು ವಿಷಯಕ್ಕೆ ಬಂದು ಹೇಳಿದರೇ ನಾನು ಸತ್ಯವಾದ ಜ್ಞಾನವನ್ನು ಹೇಳಿದರೂ, ನಿನ್ನ ಶರೀರದಲ್ಲಿ ಆತ್ಮವೇ ಕಣ್ಣು, ಕಿವಿಯ ಮೂಲಕ ನಾನು ಹೇಳಿರುವ ಜ್ಞಾನವನ್ನು ಒಳಗೆ ಸೇರಿಸಿ, ಒಳಗಿನ ಬುದ್ಧಿಗೆ ತಿಳಿಸುವುದು ಆತ್ಮವೇ. ಹೊರಗೆ ಎಷ್ಟು ದೊಡ್ಡ ಸತ್ಯವನ್ನು ಹೇಳಿದರೂ ಅದು ಒಳಗಿನ ಬುದ್ಧಿ ಗ್ರಹಿಸಬೇಕಾಗಿದೆ. ಶರೀರದೊಳಗೆ ಬುದ್ಧಿಗೆ ಶಕ್ತಿಕೊಟ್ಟು ವಿಷಯವನ್ನು ಗ್ರಹಿಸುವಂತೆ ಮಾಡುವವನು ಆತ್ಮವೇ. ಆತ್ಮ ನೀಡುವ ಶಕ್ತಿಯನ್ನನುಸರಿಸಿ ಬುದ್ಧಿ ವಿಷಯವನ್ನು ಗ್ರಹಿಸಬಲ್ಲದು. ಆದ್ದರಿಂದ ಯಾರಿಗೆ ಎಂತಹ ಜ್ಞಾನ ತಿಳಿಯಬೇಕೆಂದರೂ ಅದು ಆತ್ಮ ನೀಡುವ ಶಕ್ತಿ ಮೂಲಕ ಬುದ್ಧಿ ತಿಳಿಯಲಾಗುತ್ತಿದೆ. ಇದನ್ನನುಸರಿಸಿ ದೈವಜ್ಞಾನವನ್ನು ನಿಮಗೆ ತಿಳಿಸುವವನು ಆತ್ಮವೇ ಎಂದು ತಿಳಿಯುವಂತೆ ದ್ವಿತೀಯ ದೈವಗ್ರಂಥದಲ್ಲಿನ ವಾಕ್ಯದಲ್ಲಿ **'ನಿಮ್ಮ ತಂದೆಯೇ ಪರಲೋಕದಿಂದ ಬರುವ ಆಹಾರವನ್ನು ನಿಮಗನುಗ್ರಹಿಸುತ್ತಿದ್ದಾನೆ'** ಎಂದು ಹೇಳಿದ್ದಾನೆ.

ಧರ್ಮಶಾಸ್ತ್ರದಲ್ಲಿನ ಜ್ಞಾನವನ್ನು ಅಂದರೇ ಪರಲೋಕ ಆಹಾರವೆನ್ನುವ ಜ್ಞಾನವನ್ನು ಪ್ರಜೆಗಳಿಗೆ ಮೋಷೇ ತಿಳಿಸಿರುವುದಾದರೂ ಅದನ್ನು ಬುದ್ಧಿ ನೇರವಾಗಿ ಗ್ರಹಿಸಲಿಲ್ಲ, ಆದ್ದರಿಂದ **"ಮೋಷೇ ನಿಮಗೆ ಪರಲೋಕ ಆಹಾರವನ್ನು ನಿಮಗೆ ನೀಡಲಿಲ್ಲ. ನಿಮ್ಮ ತಂದೆಯೇ ನಿಮಗೆ ಪರಲೋಕದಿಂದ ಬರುವ ಆಹಾರವನ್ನು ನಿಮಗೆ ಒದಗಿಸಿದ್ದಾನೆ"** ಎಂದು ಹೇಳಿದ್ದಾರೆ. ಪ್ರತಿ ಮನುಷ್ಯನಿಗು ತಂದೆ ಆತ್ಮವೇ. ತಾತ ಪರಮಾತ್ಮನಾಗಿದ್ದಾನೆ. ಜೀವಿಗೆ ಆತ್ಮ ತಂದೆಯಾಗಿರುವಾಗ, ಆತ್ಮನಿಗೆ ತಂದೆಯಾಗಿ ಪರಮಾತ್ಮನಿದ್ದಾನೆ. ಆದ್ದರಿಂದ ಈ ವಿಷಯವನ್ನು ಅರ್ಥ ಮಾಡಿಕೊಳ್ಳುವುದಕ್ಕಾಗಿ ದ್ವಿತೀಯ ದೈವಗ್ರಂಥದಲ್ಲಿ ಹೀಗೆ ಹೇಳಿದ್ದಾರೆ. **(ಯೋಹಾನ್ 14-20) "ನಾನು ನನ್ನ ತಂದೆಯಲ್ಲಿಯು, ನೀವು ನನ್ನಲ್ಲಿಯು, ನಾನು ನಿಮ್ಮಲ್ಲಿಯೂ ಇದ್ದೇವೆಂದು ಆ ದಿನದಂದು ನಿಮಗರ್ಥವಾಗುವುದು"** ಈ ವಾಕ್ಯಕ್ಕೆ ಅರ್ಥವನ್ನು ಪರಿಶೀಲಿಸಿ ನೋಡಿದರೇ ಜೀವಿಗೆ ಆತ್ಮ ತಂದೆ ಯಾಗಿರುವಾಗ, ಆತ್ಮಗೆ ತಂದೆ ಪರಮಾತ್ಮನೆಂದು ತಿಳಿಯುವುದೇ ಅಲ್ಲದೇ, ಆತ್ಮ ದೇವರು ಇಬ್ಬರು ಬೆರೆತಿರುವಾಗ, ಜೀವಾತ್ಮ, ಆತ್ಮ ಇಬ್ಬರು ಬೆರೆತಿದ್ದಾರೆ. ಜೀವಾತ್ಮಗು ಪರಮಾತ್ಮಗು ಆತ್ಮ ಸಂಧಿಯಂಥವನು. ಯಾವ ಜೀವಾತ್ಮನಾದರು ಆತ್ಮ ಮೂಲಕವೇ ಪರಮಾತ್ಮನನ್ನು ಸೇರಬೇಕಾಗಿದೆ. ಆದ್ದರಿಂದ **'ನಾನೇ ಮಾರ್ಗವು'** ಎಂದು ಆತ್ಮ ಒಂದು ಸಂದರ್ಭದಲ್ಲಿ ಹೇಳಿರುವುದಾಗಿದೆ.

ದೇವರು ಭೂಮಿಮೇಲೆ ವ್ಯಾಪಿಸಿದ ಅಧರ್ಮಗಳನ್ನು ಇಲ್ಲದೇ ಮಾಡಿ ದೈವಧರ್ಮಗಳನ್ನು ಸ್ಥಾಪಿಸುವುದಕ್ಕೆ ಸ್ವತಃವಾಗಿ ಮಾರುವೇಷದಲ್ಲಿ ಭೂಮಿ ಮೇಲಕ್ಕೆ ಸಾಧಾರಣ ಮನುಷ್ಯನಹಾಗೆ ಬಂದು, ತನ್ನ ಧರ್ಮಗಳನ್ನು ತನ್ನ ಜ್ಞಾನದ ಮೂಲಕ ತಿಳಿಸುವನು. ಹಾಗೆ ಮನುಷ್ಯನ ಹಾಗೆ ಬಂದಾಗ ಬೋಧಿಸುವ ಜ್ಞಾನವು ಸಂಪೂರ್ಣ ಜ್ಞಾನವಾಗಿರುತ್ತದೆ. ದೈವಗ್ರಂಥಗಳಲ್ಲಿ ಜ್ಞಾನವಿದ್ದರೂ ಭಗವಂತನ ವೇಷದಲ್ಲಿ ಬಂದಿರುವ ದೇವರು ಗ್ರಂಥಗಳಲ್ಲಿ ಅಲ್ಲಿಯವರೆಗು ಅರ್ಥವಾಗದ ವಿಷಯಗಳನ್ನು ಸುಲಭವಾಗಿ ವಿವರವಾಗಿ ತಿಳಿಸುವನು. ಹಾಗೆ ತಿಳಿಸುವಾಗ ಎಷ್ಟೋಜನ ಮನುಷ್ಯರು ಜ್ಞಾನವನ್ನು ಭಗವಂತನ ಮೂಲಕ

ತಿಳಿದುಕೊಂಡರೂ, ಆ ಸಮಯಕ್ಕಾಗಲೆ ಬೋಧಕರಾಗಿರುವ ಕೆಲವರು ಹಿರಿಯರು ಭಗವಂತನು ಹೇಳುವ ಬೋಧನೆಗಳನ್ನು ನೋಡಿ ಅಸೂಯೆಪಟ್ಟು, ತಮ್ಮಲ್ಲಿ ಗರ್ವ ಹುಕ್ಕಿಹೋಗುತ್ತಿರುವಾಗ, ತಮಗಿಂತಲೂ ಮೀರಿದವರು ಇಲ್ಲವೆಂದು ಹೇಳಿಕೊಳ್ಳುತ್ತಿರುತ್ತಾರೆ. ಹೊರಗೆ ಹೇಳದೇ ಹೋದರೂ ಒಳಗೆ ಅದೇ ಭಾವನೆಯನ್ನು ಹೊಂದಿರುತ್ತಾರೆ. ಆಗ ನಿಮಗಾಗಲೀ ನಿಮ್ಮ ಹಿರಿಯರಾದ ಬೋಧಕರಿಗಾಗಲೀ ತಿಳಿಯದ ಎಷ್ಟೋ ವಿಷಯಗಳನ್ನು ಭಗವಂತನು ತಿಳಿಸುವನು. ಅಲ್ಲಿಯವರೆಗು ದೈವಗ್ರಂಥಗಳಲ್ಲಿ ಹಿರಿಯರಾದ ಬೋಧಕರಿಂದ ಮುಚ್ಚಿಡಲಾದ ಎಷ್ಟೋ ವಿಷಯಗಳನ್ನು ಭಗವಂತನು ಹೊರಗೆಳೆಯುತ್ತಾನೆ. ಹಾಗೆ ಗ್ರಂಥದಲ್ಲಿನ ಸಮಸ್ತ ಜ್ಞಾನ ವಿಷಯಗಳನ್ನು ಭಗವಂತನ ವೇಷದಲ್ಲಿ ಬಂದ ದೇವರು ಹೇಳಿದರೇ ಭೂಮಿಮೇಲೆ ಸಂಪೂರ್ಣ ಜ್ಞಾನ ತಿಳಿಯುವುದು. ಹಾಗೆ ತಿಳಿದರೂ ಕೆಲವರು ತಮಗೆ ತಿಳಿದಿರುವ ವ್ಯರ್ಥ ಪ್ರಶ್ನೆಗಳಿಗೆ ಉತ್ತರಗಳಿಲ್ಲ ವೆಂದು ಜ್ಞಾನವನ್ನು ಬೋಧಿಸಿರುವ ಭಗವಂತನನ್ನೇ ತಪ್ಪುಹಿಡಿ ಯುತ್ತಿರುತ್ತಾರೆ.

ಪ್ರಥಮ ದೈವಗ್ರಂಥವು ಸುಮಾರು ಐದು ಸಾವಿರ (5000) ವರ್ಷಗಳ ಸಮಯದಲ್ಲಿ ತಯಾರಾಗಿದೆಯೆಂದು ಭಗವಂತನು ಹೇಳಿದ್ದಾನೆಂದುಕೋ, ಅದಕ್ಕೆ ಅಸೂಯೆ ಪಡುವ ಹಿರಿಯರು ಆತನು ಹೇಳಿರುವುದು ಸರಿಯಾದು ದಲ್ಲವೆಂದೂ, ಪ್ರಥಮ ದೈವಗ್ರಂಥ ಭಗವದ್ಗೀತೆ ತಯಾರಾಗಿ (5160) ವರ್ಷಗಳಾಗಿದೆಯೆಂದೂ, ಈ ವಿಷಯವನ್ನು ಇದಕ್ಕು ಮೊದಲು ಆತನೇ 5160 ವರ್ಷಗಳೆಂದು ಹೇಳಿದ್ದಾನೆ. ಈಗ 5000 ವರ್ಷಗಳೆಂದು ಹೇಳುತ್ತಿದ್ದಾನೆ. ಯಾವ ಮಾತನ್ನು ನಂಬಬೇಕು? ಹಾಗೆಯೇ ಈತ ಹೇಳುವ ಜ್ಞಾನವನ್ನು ಹೇಗೆ ನಂಬಬೇಕು? ಎಂದು ತಪ್ಪನ್ನು ತೋರಿಸಿ ಹೇಳುತ್ತಿರುತ್ತಾರೆ. ಅಂತಿಮ ದೈವಗ್ರಂಥದಲ್ಲಿನ 6–91 ಆಯತ್‌ನಲ್ಲಿ ಕೊನೆಯದಾಗಿ ಹೇಳಿದ ಮಾತು **'ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿ ಆಡಿಕೊಳ್ಳಲುಬಿಡು'** ಎಂದು ಇದೆ. ಇಲ್ಲಿ ವ್ಯರ್ಥ ವಿಷಯಗಳೇನೆಂದರೇ! ಪ್ರಥಮ ದೈವಗ್ರಂಥ ಭಗವದ್ಗೀತೆ ಯಾವಾಗ ತಯಾರಾಗಿದೆಯೆಂಬ ವಿಷಯವು ವ್ಯರ್ಥ ವಿಷಯವು. ಆ ಗ್ರಂಥದಲ್ಲಿ ಯಾವ

ಜ್ಞಾನವಿದೆಯೋ ಅದನ್ನು ಕುರಿತು ಮಾತನಾಡುವುದು ಸಾರಾಂಶವಾದ ವಿಷಯ. ಆದರೇ ವ್ಯರ್ಥ ವಿಷಯಗಳನ್ನು ಆಧಾರ ಮಾಡಿಕೊಂಡು ಭಗವಂತನನ್ನೇ ತಪ್ಪು ಹಿಡಿದು ತಾವು ಅತನಿಗಿಂತ ದೊಡ್ಡವರೆಂದೆನಿಸಿಕೊಳ್ಳಬೇಕೆನ್ನುವುದೇ ಅವರ ಉದ್ದೇಶ. ಗ್ರಂಥದಲ್ಲಿನ ಜ್ಞಾನ ವಿಷಯಗಳು ಮನುಷ್ಯನಿಗೆ ಅಗತ್ಯ. ಗ್ರಂಥವು ಯಾವಾಗ ಹುಟ್ಟಿದರೂ ಅದರ ಹುಟ್ಟುವಿಕೆಯ ಮೂಲಕ ಮನುಷ್ಯನಿಗೆ ಎಂತಹ ಪ್ರಯೋಜನೆ ಇರುವುದಿಲ್ಲ. ಆದ್ದರಿಂದ ವ್ಯರ್ಥ ವಿಷಯಗಳಲ್ಲಿ ಕೆಲವರು ಮುಳುಗಿ ತೇಲುತ್ತಾ ಸಾರಾಂಶ ವಿಷಯಗಳನ್ನು ವ್ಯರ್ಥಗಳಾಗಿ, ವ್ಯರ್ಥಗಳನ್ನು ಸಾರಾಂಶವಾದ ಮುಖ್ಯ ವಿಷಯಗಳಾಗಿ ತಿಳಿಯುತ್ತಿರುತ್ತಾರೆ. ಅಂಥವರಿಗೆ ದೇವರೇ ಇಳಿದುಬಂದು ಹೇಳಿದರೂ ಅವರು ಸಾರಾಂಶವಾದ ಜ್ಞಾನ ವಿಷಯಗಳನ್ನು ನೋಡದೆ ವ್ಯರ್ಥವಾದ ಕೆಲಸಕ್ಕೆ ಬಾರದ ವಿಷಯಗಳನ್ನೇ ಹಿಡಿದುಕೊಂಡು ಪ್ರಶ್ನಿಸುತ್ತಿರುತ್ತಾರೆ. ಆದ್ದರಿಂದ ಅಂಥವರನ್ನು (6–91) ವಾಕ್ಯದಲ್ಲಿ **"ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿಯೇ ಆಡಿಕೊಳ್ಳಲು ಬಿಡು"** ಎಂದು ದೇವರು ಹೇಳಿರುವುದಾಗಿದೆ. ಆ ಮಾತನ್ನು ಅನುಸರಿಸಿ ಅಂಥವನಿಗೆ ಎಂದಿಗೂ ಜ್ಞಾನವು ತಿಳಿಯದು. ಅವನ ಜನ್ಮವು ವ್ಯರ್ಥವೆಂದು ದೇವರು ಹೇಳಿದಂತಾಗಿದೆ. ಆದ್ದರಿಂದ ನಾವು ಜ್ಞಾನಿಗಳೆಂದು ಗರ್ವಪಡುವ ಕೆಲವರಿಗೆ ನಾವು ಹೇಳುವುದು ಏನೆಂದರೇ! ನಿನಗು, ನಿನ್ನ ಜನ್ಮಕ್ಕು ಅಗತ್ಯವಾದ ಜ್ಞಾನ ವಿಷಯಗಳನ್ನು ಮುಖ್ಯವಾಗಿ ತೆಗೆದುಕೋ, ಜನ್ಮ ಕರ್ಮಗಳಿಂದ ಸಂಬಂಧವಿಲ್ಲದ ವಿಷಯಗಳನ್ನು ಹಿಡಿದುಕೊಂಡು ನೇತಾಡಬೇಡಿರಿ.

**ಪ್ರಶ್ನೆ :– ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಕೃಷ್ಣನು ಹೇಳಿದ್ದಾನೆಂದು ಅರ್ಜುನನ ಮೂಲಕ ತಿಳಿದುಕೊಂಡ ವ್ಯಾಸನು ಗ್ರಂಥವಾಗಿ ಬರೆದಿದ್ದಾನೆ. ಕೃಷ್ಣನು ಅರ್ಜುನನಿಗೆ ಯುದ್ಧರಂಗದಲ್ಲಿ ಸಮಯಾನುಕೂಲವಾಗಿ ಕೆಲವು ನಿಮಿಷಗಳಲ್ಲಿಯೇ ಭಗವದ್ಗೀತೆಯನ್ನು ಹೇಳಿದ್ದಾನೆಂದೂ, ಆತನು ತನ್ನ ವಯಸ್ಸು ಸುಮಾರು 90 ವರ್ಷಗಳಿರುವಾಗ ಭಗವದ್ಗೀತೆಯನ್ನು ಅರ್ಜುನನಿಗೆ ಹೇಳಿದ್ದಾನೆಂದೂ, ನಂತರ ಎರಡು ವರ್ಷಗಳಿಗೆ ಗ್ರಂಥವಾಗಿ ಬರೆಯಲಾಗಿದೆಯೆಂದೂ, ಬರೆಯಲಾದ ಗ್ರಂಥವು**

ಹೊರಗಿನ ಪ್ರಜೆಗಳಿಗೆ ತಿಳಿಯುವುದಕ್ಕೆ ಸುಮಾರು ನಾಲಕ್ಕು ವರ್ಷಗಳು ಹಿಡಿದಿದೆ ಎಂದೂ, ಕೃಷ್ಣನು 96 ವರ್ಷಗಳ ವಯಸ್ಸಿನಲ್ಲಿ ಭಗವದ್ಗೀತೆಯನ್ನು ಹೇಳಿದ್ದಾನೆಂದೂ ನೀವು ಒಂದು ಗ್ರಂಥದಲ್ಲಿ ಹೇಳಿದ್ದೀರಿ. ನಂತರ ಮತ್ತೊಂದು ಗ್ರಂಥದಲ್ಲಿ ಕೃಷ್ಣನಿಗೆ 90 ವರ್ಷಗಳ ವಯಸ್ಸಿನಲ್ಲಿ ಭಗವದ್ಗೀತೆಯನ್ನು ಹೇಳಿದ್ದಾನೆಂದು ಹೇಳಿದ್ದೀರ. ಎರಡು ಗ್ರಂಥಗಳಲ್ಲಿ ಆರು ವರ್ಷಗಳ ವ್ಯತ್ಯಾಸ ಬಂದಿದೆಯೆಂದು ನಿಮ್ಮ ಮಾತನ್ನು ಹೇಗೆ ನಂಬಬೇಕೆಂದು ವ್ಯರ್ಥ ವಿಷಯವಾದುದನ್ನು ಜ್ಞಾನ ವಿಷಯವಲ್ಲದಿರುವುದನ್ನು ಕೇಳುತ್ತಿರುವಾಗ, ಅದಕ್ಕೆ ಸಮಾಧಾನವಾಗಿ ನೀವು ಕೃಷ್ಣನು ಭಗವದ್ಗೀತೆಯನ್ನು ಹೇಳಿರುವುದು 90 ವರ್ಷಗಳಿಗೇ ಆದರೇ ಅದು ಮನುಷ್ಯರಿಗೆ ತಿಳಿದಿರುವುದು 96 ವರ್ಷಗಳಿಗಾಗಿರುವುದರಿಂದ ಅದು ಕಾಣಿಸಿರುವ ಸಮಯವನ್ನು ಅನುಸರಿಸಿ 96 ವರ್ಷಗಳಿಗೆ ಕೃಷ್ಣನು ಭಗವದ್ಗೀತೆಯನ್ನು ಹೇಳಿದಂತೆ ಬರೆದಿದ್ದೇವೆಂದು ವಿವರ ನೀಡಿದ್ದಾರೆ. ಆದರೇ ಇದು ವ್ಯರ್ಥ ವಿಷಯವೆಂದು ಭಗವದ್ಗೀತೆಯಲ್ಲಿರುವ ಜ್ಞಾನವು ಮುಖ್ಯವಾದುದು ಆದರೇ, ಭಗವದ್ಗೀತೆ ತಯಾರಾದ ಸಮಯ, ತಿಂಗಳು, ವರ್ಷ ಮುಖ್ಯವಲ್ಲವೆಂದು ಕೂಡಾ ಹೇಳಿದ್ದೀರಿ. ಆದ್ದರಿಂದಲೇ ಅಂತಿಮ ದೈವಗ್ರಂಥದಲ್ಲಿ 6–91ರಲ್ಲಿ ವ್ಯರ್ಥ ವಿಷಯಗಳಲ್ಲಿ ಆಡಿಕೊಳ್ಳುವವರನ್ನು ಅನವಶ್ಯಕ ವಿಷಯಗಳನ್ನು ಪ್ರಾಧಾನ್ಯವಾಗಿ ತೆಗೆದುಕೊಳ್ಳುವವರನ್ನು ಕುರಿತು ಹೇಳಿದ್ದಾರೆಂದು ನೀವೇ ಹೇಳಿದ್ದೀರಿ.

ಈಗ ಕೆಲವರು ಕೃಷ್ಣನು ಭಗವದ್ಗೀತೆಯನ್ನು ಹೇಳಲಿಲ್ಲ. ಕೃಷ್ಣನಿಗೆ ಜ್ಞಾನವೇ ತಿಳಿದಿಲ್ಲ. ಕೃಷ್ಣನು ಬುದ್ಧಿವಂತನು, ಧನವಿರುವವನು ಆಗಿರುವುದರಿಂದ ಧನವನ್ನು ವ್ಯಾಸನಿಗೆ ಕೊಟ್ಟು ತಾನು ಹೇಳಿದಂತೆ ಭಗವದ್ಗೀತೆಯನ್ನು ಗ್ರಂಥವಾಗಿ ಬರೆಯಿಸಿ ಕೊಂಡಿದ್ದಾನೆ. ವ್ಯಾಸನೇ ಭಗವದ್ಗೀತೆಯನ್ನು ಸ್ವತಃವಾಗಿ ಬರೆದು ಹಣಕ್ಕಾಗಿ ಕೃಷ್ಣನು ಹೇಳಿದಂತೆ ಅರ್ಜುನನನ್ನು ಅಡ್ಡವಿಟ್ಟುಕೊಂಡು ಪ್ರಕಟಿಸಿದ್ದಾನೆಂದು ಕೆಲವರು ವ್ಯಕ್ತಿಗಳು ಆರೋಪಣೆ ಮಾಡುತ್ತಿದ್ದಾರೆ. ವಾಸ್ತವವಾಗಿ ಕೃಷ್ಣನು ಅರ್ಜುನನಿಗೆ ಹೇಳಿರುವುದು ಕೂಡಾ ಯಾರೂ ಕೇಳಿಸಿಕೊಳ್ಳಲಿಲ್ಲ, ಯಾರೂ ನೋಡಲಿಲ್ಲ. ಅರ್ಜುನನು ವ್ಯಾಸನ ಹತ್ತಿರಕ್ಕೆ ಹೋಗಿ ಕೃಷ್ಣನು ಈ ವಿಧವಾಗಿ ಹೇಳಿದ್ದಾನೆಂದು ವ್ಯಾಸನೊಂದಿಗೆ ಹೇಳಿರುವುದು ಕೂಡಾ ಯಾರೂ ನೋಡಲಿಲ್ಲ. ಕೃಷ್ಣನು

**ಅರ್ಜುನನಿಗೆ ಹೇಳಿರುವ ಸಾಕ್ಷ್ಯವಾಗಲಿ, ಅರ್ಜುನನು ವ್ಯಾಸನೊಂದಿಗೆ ಹೇಳಿರುವ ಸಾಕ್ಷ್ಯವಾಗಲಿ ಇಲ್ಲ. ಹಾಗಿರುವಾಗ ಕೃಷ್ಣನೇ ಭಗವದ್ಗೀತೆ ಹೇಳಿದ್ದಾನೆಂದು ಏನು ಆಧಾರವೆಂದು ಕೆಲವರು ಕೇಳುತ್ತಿದ್ದಾರೆ. ಅಷ್ಟೇಅಲ್ಲದೇ ಕೃಷ್ಣನ ಜೀವನದಲ್ಲಿ ಕೃಷ್ಣನು ಭಗವದ್ಗೀತೆಯನ್ನು ಹೇಳಿದಂತೆ, ಅದರ ಜ್ಞಾನದ ಪ್ರಕಾರ ನಡೆದುಕೊಂಡಹಾಗೆ ಎಲ್ಲೂ ಕಾಣಿಸಲಿಲ್ಲ. ಜ್ಞಾನವು ಆತನ ಪ್ರವರ್ತನೆಯಲ್ಲಿ ಎಲ್ಲೂ ಕಾಣಿಸಲಿಲ್ಲ. ಆತನ ಆಚರಣೆಯಲ್ಲಿ ಯಾವ ಆರಾಧನೆಯಾಗಲೀ, ಯಾವ ಧ್ಯಾನವಾಗಲೀ ಮಾಡಲಿಲ್ಲ. ನಾಸ್ತಿಕನಹಾಗೆ ಬದುಕಿದ ಕೃಷ್ಣನು ಭಗವದ್ಗೀತೆಯನ್ನು ಹೇಳಿದ್ದಾನೆಂದರೇ ನಂಬುವಂತಹ ವಿಷಯವಲ್ಲವೆಂದು ಕೆಲವರು ಹೇತುವಾದಿಗಳು, ಭೌತಿಕವಾದಿಗಳು ಹೇಳುತ್ತಿದ್ದಾರೆ. ಇದಕ್ಕೆ ನೀವೇನು ಹೇಳುತ್ತೀರಿ?**

**ಉತ್ತರ :–** ಇದು ವ್ಯರ್ಥ ಪ್ರಸ್ತಾವನೆಯೇ ಎಂದು ಹೇಳಬಹುದು. ಮನುಷ್ಯನಿಗೆ ಬೇಕಾಗಿರುವುದು ಭಗವದ್ಗೀತೆ ಗ್ರಂಥದಲ್ಲಿನ ಜ್ಞಾನವು ಮಾತ್ರವೇ ಹೊರತು, ಬರೆದ ರಚನೆಕಾರನಲ್ಲ. ಬರೆದಿರುವ ರಚನೆಕಾರನದ್ದು ಕಳೆದು ಹೋಗಿರುವ ಕಾಲ. ಪ್ರಸ್ತುತ ನಮ್ಮ ಮುಂದಿರುವುದು ಭಗವದ್ಗೀತೆ. ಮುಂದಿರುವ ಗ್ರಂಥವನ್ನು ನೋಡದೇ ಹೋದ ರಚನೆಕಾರನನ್ನು ಕುರಿತು ಮಾತನಾಡುವುದು ವ್ಯರ್ಥ ಪ್ರಲಾಪ, ಅನವಶ್ಯಕ ವಿಷಯವಾಗುವುದು. ಗ್ರಂಥಕರ್ತನಿಂದ ಮನುಷ್ಯನಿಗೆ ಬರುವ ಲಾಭವು ಏನೂ ಇಲ್ಲ. ಗ್ರಂಥಗಳಲ್ಲಿನ ವಿಷಯಗಳಿಂದಲೇ ಮನುಷ್ಯನಿಗೆ ಲಾಭವು ಕೈಗೂಡುವುದು. ಕೃಷ್ಣನು ತಾನು ಭಗವದ್ಗೀತೆಯನ್ನು ಹೇಳಿದಂತೆ ತಿಳಿಯಬಾರದೆಂಬ ಉದ್ದೇಶದಿಂದಲೇ ಆ ವಿಧವಾಗಿ ರಹಸ್ಯವಾಗಿ ಭಗವದ್ಗೀತೆ ಯನ್ನು ಯಾರೂ ಕೇಳದಂತೆ, ಯುದ್ಧರಂಗ ಮಧ್ಯದಲ್ಲಿ ಯುದ್ಧ ಪ್ರಾರಂಭವಾಗುವ ಮುನ್ನ ಕೆಲವು ನಿಮಿಷಗಳ ಕಾಲದಲ್ಲಿ ಹೇಳಿದ್ದಾನೆಂದು ನಂತರ ಸ್ವಲ್ಪ ಕಾಲಕ್ಕೆ ತಿಳಿಯಿತು. ಭಗವಂತನೇ ಹೇಳಿದ್ದಾನೆಂದು ಸ್ವತಃವಾಗಿ ವ್ಯಾಸನು ತನ್ನ ಗ್ರಂಥದಲ್ಲಿ **'ಭಗವಾನುವಾಚ'** ಎಂದು ಬರೆದಿದ್ದಾನೆ. ಅದರಿಂದ ಕೃಷ್ಣನು ಹೇಳಿದ್ದಾನೆಂದು ತಿಳಿದಿದೆ ಹೊರತು ಕೃಷ್ಣನು ಹೇಳುವಾಗ ಯಾರೂ ಕೇಳಿಸಿಕೊಂಡಿಲ್ಲ, ಯಾರೂ ನೋಡಿಲ್ಲ.

ವ್ಯಾಸನಿಂದ ಬರೆಯಲಾದ ಭಗವದ್ಗೀತೆ ಕೃಷ್ಣನು ಹೇಳಿದ್ದಾನೆಂದು ವ್ಯಾಸನು ಬರೆದರೂ, ಕೃಷ್ಣನ ಉದ್ದೇಶದಲ್ಲಿ ತಾನು ಭಗವದ್ಗೀತೆ ಜ್ಞಾನವನ್ನು ಹೇಳಿದಂತೆ ತಿಳಿಯಬಾರದೆಂದೇ ಇತ್ತು. ಅಷ್ಟೇಅಲ್ಲದೇ ತನ್ನ ಜ್ಞಾನವು ಐದುಸಾವಿರ ವರ್ಷಗಳವರೆಗು ಹೊರಗೆ ತಿಳಿಯಬಾರದೆನ್ನುವುದೇ ಆತನ ಉದ್ದೇಶ. ಆತನು ಅಂದುಕೊಂಡಹಾಗೆಯೇ ಕೃಷ್ಣನು ಭಗವದ್ಗೀತೆಯನ್ನು ಹೇಳಿರುವಹಾಗೆ ಕೆಲವರು ನಂಬಲಿಲ್ಲವೆಂದು ಮೇಲಿನ ಪ್ರಶ್ನೆಯನ್ನು ಅನುಸರಿಸಿ ತಿಳಿಯುತ್ತಿದೆ. ಇದೆಲ್ಲದಕ್ಕು ಒಂದು ಕಾರಣವಿದೆ. ದೇವರು ಭೂಮಿಮೇಲೆ ಮೂರುಸಲ ಭಗವಂತನಾಗಿ ಅವತರಿಸಿದರೇ, ಒಂದುಸಲ ದೇವರ ಅವತಾರವಾಗಿ ಲೆಕ್ಕಿಸಲ್ಪಡುವುದು. ದೇವರಿಂದ ಒಂದುಸಲ ಧರ್ಮಸಂಸ್ಥಾಪನೆ ನಡೆದಹಾಗೆ ಲೆಕ್ಕಿಸಲ್ಪಡುವುದು. ದೇವರು ಮೂರುಸಲ ಭಗವಂತನಾಗಿ ಬರಬೇಕು. ಹಾಗೆಯೇ ತನ್ನ ಜ್ಞಾನವು ಕೂಡಾ ಮೂರು ಗ್ರಂಥಗಳಾಗಿ ಇರಬೇಕೆಂದು ಆತನ (ದೇವರ) ಅಭಿಪ್ರಾಯ. ಅದಕ್ಕೆ ಬೇಕಾಗಿರುವ ಪ್ರಣಾಳಿಕೆ ಪ್ರಕಾರ ಇಂದಿಗೆ ಆತನ ಬೋಧನೆಗಳು ಮೂರು ದೈವಗ್ರಂಥಗಳಾಗಿ ಬಂದಿವೆ. ಆದರೂ ಇಲ್ಲಿಗೆ ಆತನು ಎರಡುಬಾರಿಯೇ ಬಂದಿದ್ದಾನೆ. ಮತ್ತೊಂದುಸಲ ಬರಬೇಕಾಗಿದೆ.

ಇಲ್ಲಿಯವರೆಗೂ ಎರಡುಸಲ ಬಂದಿರುವ ಅವತಾರಗಳಲ್ಲಿ ಒಂದು ಶ್ರೀಕೃಷ್ಣನು. ಎರಡು ಯೇಸು ಎಂಬ ಹೆಸರುಗಳಿಂದ ಬಂದಿದ್ದಾನೆ. ಮೊದಲು ಕೃಷ್ಣನಾಗಿ ಬಂದಾಗ ಆತನನ್ನು ದೇವರ ಅವತಾರವೆಂದು, ಆತನು ಸಾಧಾರಣ ಮನುಷ್ಯನಲ್ಲವೆಂದೂ, ಸಾಮಾನ್ಯ ಮನುಷ್ಯನಹಾಗಿರುವ ಭಗವಂತನೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಕೃಷ್ಣನು ಭಗವಂತನೆಂದು ತಿಳಿಯದಂತೆ ಜನ್ಮವನ್ನು ಕಳೆದುಹೋಗಿದ್ದಾನೆ. ಭಗವದ್ಗೀತೆ ಜ್ಞಾನವನ್ನು ಹೇಳಿದರೂ, ಅದನ್ನು ಯಾರಿಗೂ ತಿಳಿಯದಂತೆ ರಹಸ್ಯವಾಗಿ ಹೇಳುವುದರಿಂದ, ಅರ್ಜುನನಿಗೆ ಒಬ್ಬನಿಗೇ ಹೇಳುವುದರಿಂದ, ಕೃಷ್ಣನು ಭಗವದ್ಗೀತೆ ಹೇಳಿದಹಾಗೆ ನಿರೂಪಣೆ ಕೂಡಾ ಇಲ್ಲದೇ ಹೋಗಿದೆ. ನಂತರ ಮೂರುಸಾವಿರ ವರ್ಷಗಳಿಗೆ ಯೇಸು ಬಂದು ಹೇಳಿರುವ ಬೋಧನೆಗಳು ನಾಲ್ಕು ಸುವಾರ್ತೆಗಳ ರೂಪದಲ್ಲಿ ಬಂದಿವೆ.

ಎರಡನೆಯ ಅವತಾರವಾಗಿ ಬಂದ ಯೇಸುನನ್ನು ಯಾರೂ ಆತನನ್ನು ಭಗವಂತನೆನ್ನುವುದಕ್ಕೆ ಅವಕಾಶವಿಲ್ಲದೇ ಜೀವನವನ್ನು ಕಳೆದಿದ್ದಾನೆ. ತನ್ನನ್ನು ಭಗವಂತನೆನ್ನುವುದಕ್ಕೆ ಅವಕಾಶವಿಲ್ಲವಾದ್ದರಿಂದ, ಯೇಸು ಭಗವಂತನಾಗಿ ಯಾರಿಗೂ ತಿಳಿಯದಿರುವುದರಿಂದ ಮೂರು ವರ್ಷಗಳು ತನ್ನ ಜ್ಞಾನವನ್ನು ಬೋಧನೆಗಳ ರೂಪದಲ್ಲಿ ಹೇಳಿದ್ದಾನೆ. ಹಾಗೆ ಹೇಳಿರುವ ಮಾತುಗಳು ನಾಲ್ಕು ಸುವಾರ್ತೆಗಳಾಗಿ ರೂಪಗೊಂಡಿವೆ. ಆದರೂ ಎರಡನೆಯಸಲ ತಯಾರಾದ ದ್ವಿತೀಯ ದೈವಗ್ರಂಥದಲ್ಲಿ ಅರವತ್ತಾರು (66) ಭಾಗಗಳಿರುವಾಗ ಅದರಲ್ಲಿ ನಾಲ್ಕು ಸುವಾರ್ತೆಗಳು ಮಧ್ಯದಲ್ಲಿ ಉಳಿದುಹೋಗಿವೆ. ಮೊದಲು 39 ಭಾಗಗಳಿದ್ದರೇ ಹಿಂದೆ 23 ಭಾಗಗಳಿರುವಾಗ ಮಧ್ಯದಲ್ಲಿ 4 ಸುವಾರ್ತೆಗಳಿವೆ. ಒಟ್ಟು 66 ಭಾಗಗಳ ಬೈಬಲ್‌ನಲ್ಲಿ ಮೊದಲು 39 ಭಾಗಗಳು (ಪಾಠಗಳು) ಹಳೆಯ ನಿಬಂಧನವಾಗಿ, ಹಿಂದೆ 27 ಭಾಗಗಳನ್ನು ಹೊಸ ನಿಬಂಧನವಾಗಿ ಹೇಳುತ್ತಿದ್ದಾರೆ.

ಹೊಸ ನಿಬಂಧನೆ 27 ಪಾಠಗಳಲ್ಲಿ ಮೊದಲ ನಾಲ್ಕು ಪಾಠಗಳು ನಾಲ್ಕು ಸುವಾರ್ತೆಗಳಾಗಿವೆ. ನಾಲ್ಕು ಸುವಾರ್ತೆಗಳು ಮುಂದೆ ಸ್ವಲ್ಪ, ಹಿಂದೆ ಸ್ವಲ್ಪ ಬೈಬಲ್ ಇರುವಾಗ ಸುಮಾರು ಬೈಬಲ್ ಮಧ್ಯದಲ್ಲಿ ನಾಲ್ಕು ಸುವಾರ್ತೆಗಳಿವೆ. ನಾಲ್ಕು ಸುವಾರ್ತೆಗಳಿಗೆ ಮೊದಲಿರುವ 39 ಪಾಠಗಳಲ್ಲಿ, ಹಿಂದೆ ಇರುವ 23 ಪಾಠಗಳಲ್ಲಿ ಸ್ವತಃವಾಗಿ ಯೇಸು ಹೇಳಿರುವ ಬೋಧನೆಗಳಿಲ್ಲ. ಉಳಿದವರು ಬರೆದಿರುವ ಜ್ಞಾನವಿದೆ. ಹಿಂದೆ ಮುಂದಿರುವ ಎಲ್ಲಾ ಪಾಠಗಳಲ್ಲಿ ಕೆಲವು ಸತ್ಯಗಳಿರುವಾಗ ಕೆಲವು ಅಸತ್ಯಗಳು ಕೂಡಾ ಇವೆ. ನಾಲ್ಕು ಸುವಾರ್ತೆಗಳಲ್ಲದೇ ಉಳಿದ 62 ಪಾಠಗಳಲ್ಲಿ ಜ್ಞಾನ, ಮಾಯೆ ಎರಡು ಮಿಶ್ರಣವಾಗಿರುವುದರಿಂದ ಯಾವುದು ಜ್ಞಾನವೋ, ಯಾವುದು ಮಾಯೆ (ಸಾತಾನ್) ಎಂದು ತಿಳಿಯದ ಸ್ಥಿತಿಯಾಗಿದೆ. ಆದ್ದರಿಂದ ನಮ್ಮ ಸಲಹೆಮೇರೆಗೆ ಬಹಳಜನ ನಾಲಕ್ಕು ಸುವಾರ್ತೆಗಳನ್ನೇ ಓದುತ್ತಿದ್ದಾರೆ. ಉಳಿದ 62 ಪಾಠಗಳಲ್ಲಿ ಕೆಲವು ಸತ್ಯಗಳಾಗಿ ಇರುವುದರಿಂದ ಉಳಿದ ಪಾಠಗಳನ್ನು ಓದುವವರಿಗೆಲ್ಲರಿಗೂ **"ಸತ್ಯವನ್ನೇ ಗ್ರಹಿಸಿರಿ,**

**ಅಸತ್ಯ ವಾಕ್ಯಗಳನ್ನು ಬಿಟ್ಟು ಹಾಕಿರೆಂದು"** ಹೇಳುತ್ತಿರುತ್ತೇವೆ. **"ಸತ್ಯಾಸತ್ಯ ವಾಕ್ಯಗಳನ್ನು ಗುರುತಿಸಲಾರದವರು ಕೇವಲ ನಾಲ್ಕು ಸುವಾರ್ತೆಗಳನ್ನು ಓದಿದರೂ, ಅದರಲ್ಲಿನ ಪ್ರಭು ಜ್ಞಾನದಿಂದ ಮುಕ್ತಿ ಹೊಂದಬಹುದು"** ಎಂದು ಕೂಡಾ ಹೇಳಿದ್ದೇವೆ. ನಾಲ್ಕು ಸುವಾರ್ತೆಗಳಲ್ಲಿ ಅತ್ಯುನ್ನತವಾದ ಜ್ಞಾನ ಯೋಹಾನ್ ಸುವಾರ್ತೆಯದಲ್ಲಿ ಇದೆಯೆಂದು ಹೇಳುತ್ತಿದ್ದೇವೆ. ಈ ವಿಧವಾಗಿ ತಯಾರಾದ ಬೈಬಲ್ ಗ್ರಂಥವನ್ನು ದ್ವಿತೀಯ ದೈವಗ್ರಂಥವೆಂದು ಹೇಳುವುದಾಗಿದೆ. ಅದೇ ಈದಿನ ಕ್ರೈಸ್ತ ಮತ ಗ್ರಂಥವಾಗಿ ಲೆಕ್ಕಿಸಲ್ಪಡುತ್ತಿದೆ.

ದ್ವಿತೀಯ ದೈವಗ್ರಂಥ ತಯಾರಾದ ನಂತರ ಸುಮಾರು ಆರು ನೂರು ವರ್ಷಗಳಿಗೆ ಅಂದರೇ ಇಲ್ಲಿಗೆ 14ನೂರು ವರ್ಷಗಳ ಪೂರ್ವವು ಅಂತಿಮ ದೈವಗ್ರಂಥವು ತಯಾರಾಗಿದೆ. ದೈವಗ್ರಂಥಗಳು ಮೂರೇ ಎಂದು ಹೇಳುತ್ತಾ ಭಗವದ್ಗೀತೆ ಪ್ರಥಮ ದೈವಗ್ರಂಥವೆಂದೂ, ಬೈಬಲ್ ದ್ವಿತೀಯ ದೈವಗ್ರಂಥವೆಂದು, ಖುರಾನ್ ಕೊನೆಯ ದೈವಗ್ರಂಥವೆಂದು ಹೇಳುವುದಕ್ಕೆ ಕಾರಣವಿದೆ. ಮೂರು ಗ್ರಂಥಗಳು ಮೊದಲೇ ದೇವರು ಹೇಳಿರುವ ವಿಧಾನದ ಪ್ರಕಾರ ತಯಾರಾಗಿವೆ. ಅವು ತಯಾರಾದ ವಿಧಾನವನ್ನು ಅನುಸರಿಸಿ ಅವುಗಳಿಗೆ ಪ್ರಥಮ, ಮಧ್ಯಮ, ಅಂತಿಮ ದೈವ ಗ್ರಂಥಗಳೆಂದು ಹೆಸರು ಬರುವುದು ನಡೆದಿದೆ. ಹಾಗೆ ಒಂದುಸಲ ಬಂದಿರುವ ಹೆಸರನ್ನು ಯಾರೂ ತೆಗೆದುಹಾಕುವುದಕ್ಕೆ ಸಾಧ್ಯವಿಲ್ಲ. ಅಂತಿಮ ದೈವಗ್ರಂಥದಲ್ಲಿ ಸೂರಾ 42, ಆಯತ್ 51ರಲ್ಲಿ ಹೀಗಿದೆ. (42–51) **"ದೇವರು ಪ್ರತ್ಯಕ್ಷವಾಗಿ ಯಾವ ಮಾನವನೊಂದಿಗೂ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾದ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ ಮೂಲಕ (ವಹೀ ಮೂಲಕ) ಅಥವಾ ತೆರೆಹಿಂಬದಿಯಿಂದಲೋ ಮನುಷ್ಯನಿಗೆ ಸೇರಿಸುತ್ತಾನೆ. ಅಥವಾ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಾನೆ. ಆತನು ಮಹೋನ್ನತನು, ಎಷ್ಟೋ ವಿವೇಕವಂತನು"**. ಈ ವಾಕ್ಯದ ಪ್ರಕಾರ ಮೊದಲು ವಾಣಿ ಮೂಲಕ ಹುಟ್ಟಿರುವ ಭಗವದ್ಗೀತೆ ಬಂದಿರುವಾಗ ಅದು ಮೊದಲ ದೈವಗ್ರಂಥವಾಗಿದೆ.

ನಂತರ ಇಂಜೀಲು ಗ್ರಂಥ ತನ್ನ ಪ್ರತಿನಿಧಿ ಮೂಲಕ ಹೇಳಲ್ಪಟ್ಟಿದೆ. ಆದ್ದರಿಂದ ಬೈಬಲ್‌ಗೆ ದ್ವಿತೀಯ ದೈವಗ್ರಂಥವೆಂದು ಹೆಸರು ಬಂದಿದೆ. ದೇವರು ಹೇಳಿರುವ ಮೂರು ವಿಧಾನಗಳಲ್ಲಿ ಮೊದಲನೆಯದು, ಎರಡನೆಯದು ಕಳೆದುಹೋಗಿರುವಾಗ ಕೊನೆಯದಾಗಿ ತೆರೆಹಿಂಬದಿಯಿಂದ ಜ್ಞಾನ ಹೇಳಲ್ಪಟ್ಟಾಗ ಅದೇ ಕೊನೆಯ ಗ್ರಂಥವೆಂಬ ಹೆಸರಿನಿಂದ ಹೊರಗೆ ಬಂದಿದೆ. ಈ ವಿಧವಾಗಿ ದೇವರು ಭೂಮಿಮೇಲೆ ಹೇಳಿರುವ ಮೂರು ವಿಧಾನಗಳನ್ನು ಅನುಸರಿಸಿ, ಮುಂದೆ ಹಿಂದೆಯನ್ನು ಅನುಸರಿಸಿ ಪ್ರಥಮ, ದ್ವಿತೀಯ, ಅಂತಿಮ ಎಂಬ ಹೆಸರುಗಳಿಂದ ಗ್ರಂಥಗಳು ತಯಾರಾಗಿವೆ. ಹಾಗೆ ಬಂದಿರುವ ಹೆಸರುಗಳನ್ನು ಯಾರೂ ಬದಲಿಸಲಾರರು.

**ಪ್ರಶ್ನೆ :– ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಕೃಷ್ಣನು ಹೇಳಿದ್ದಾನಲ್ಲ! ಕೃಷ್ಣನು ಹೇಳಿರುವಾಗ ಅರ್ಜುನನು ಕೇಳಿದ್ದಾನೆ ಎಂದೂ, ಅರ್ಜುನನ ಮೂಲಕ ವ್ಯಾಸನಿಗೆ ಸೇರಿಸಲಾದ ಜ್ಞಾನವು ವ್ಯಾಸನ ಮೂಲಕ ಗ್ರಂಥವಾಗಿದೆ ಎಂದು ಕೇಳಿದ್ದೇವೆ. ಹಾಗೆ ನಡೆದಾಗ ದೇವರು ತನ್ನ ಪ್ರತಿನಿಧಿಯಾದ ಕೃಷ್ಣನ ಮೂಲಕ ಜ್ಞಾನವನ್ನು ಹೇಳಿಸಿದಂತೆಯೇ ಅಲ್ಲವೆ! ಎರಡುಸಲ ದೇವರು ಅವತರಿಸಿದ್ದಾನೆಂದೂ, ಒಂದುಸಲ ಕೃಷ್ಣನಾಗಿ ಅವತರಿಸಿದರೇ, ಎರಡನೆಯಸಲ ಯೇಸುವಾಗಿ ಬಂದಿದ್ದಾನೆಂದೂ, ಅವರಿಬ್ಬರು ದೇವರ ಪ್ರತಿನಿಧಿಗಳಾಗಿಯೇ ಲೆಕ್ಕಿಸಲ್ಪಟ್ಟಿದ್ದಾರೆಂದು, ಇಬ್ಬರು ಭಗವಂತನಾಗಿ ಬಂದಿರುವವರೇ ಎಂದು ಹೇಳಿದ್ದಾರೆ. ಹಾಗೆ ಇಬ್ಬರು ಭಗವಂತರೇ ಆಗಿರುವಾಗ ಇಬ್ಬರು ಹೇಳಿರುವ ಗ್ರಂಥಗಳು ಎರಡು ದ್ವಿತೀಯ ದೈವಗ್ರಂಥಗಳಾಗಿಯೇ ಲೆಕ್ಕಿಸಬೇಕು ಆದರೇ ಹಾಗಲ್ಲದೇ ಭಗವಂತನಾದ ಕೃಷ್ಣನು ಹೇಳಿರುವ ಗ್ರಂಥವನ್ನು ಪ್ರಥಮ ದೈವಗ್ರಂಥವಾಗಿ ಲೆಕ್ಕಿಸುವುದು ತಪ್ಪಾಗುತ್ತದಲ್ಲವೇ! ದೇವರು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ (41–52ರಲ್ಲಿ) ಹೇಳಿದಂತೆ ಮೂರು ವಿಧಾನಗಳಿಗೆ ವರಸೆ ಕ್ರಮವಾಗಿ ಮೂರು ಹೆಸರುಗಳನ್ನಿಡಬಹುದು. ಹಾಗಲ್ಲದೇ ಎರಡನೆಯ ವಿಧಾನದಲ್ಲಿ ದೇವರ ಪ್ರತಿನಿಧಿಯಾಗಿ ಇರುವಾಗ, ಹೇಳಿದಾಗ ಎರಡು ಗ್ರಂಥಗಳು ತಯಾರಾದರೂ ಅವು ಎರಡು ವರಸೆ ಕ್ರಮದಲ್ಲಿ ದ್ವಿತೀಯ ದೈವ**

**ಗ್ರಂಥಗಳೇ ಆಗುತ್ತವೆ ಹೊರತು, ಅದರಲ್ಲಿ ಒಂದು ಪ್ರಥಮ ದೈವ ಗ್ರಂಥವು ಹೇಗಾಗಿದೆ ಎಂದು ಪ್ರಶ್ನಿಸುತ್ತಿದ್ದೇವೆ. ಇದಕ್ಕೆ ನಿಮ್ಮ ಉತ್ತರ ಯಾವ ವಿಧವಾಗಿ ಇರುತ್ತದೋ ಹೇಳಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :–** ದೇವರು ತನ್ನ ಮೂರು ಗ್ರಂಥಗಳಲ್ಲಿ ಸಂಪೂರ್ಣ ಜ್ಞಾನವನ್ನು ಹೇಳಿದ್ದಾನೆ. ಆದರೇ ತನ್ನ ಜ್ಞಾನ ಗ್ರಂಥಗಳು ಮೂರು ವಿಧಾನಗಳ ಪ್ರಕಾರ ಬಂದಿವೆ ಎಂದು, ಆ ವಿಧಾನಗಳ ಪ್ರಕಾರ ಮುಂದೆ ಹಿಂದೆ ನಡೆದಿರುವ ಪ್ರಕಾರ ದೈವಗ್ರಂಥಗಳಿಗೆ ವರಸೆಕ್ರಮವಾಗಿ ಹೆಸರುಗಳು ಇಡಲಾಗಿವೆ ಎಂದು ಕೂಡಾ ಹೇಳಿಕೊಂಡಿದ್ದೇವೆ. ಆದರೇ ಇಲ್ಲಿ ಪ್ರಥಮ ದೈವಗ್ರಂಥ ವಿಷಯದಲ್ಲಿ ಸಂಶಯ ಏರ್ಪಟ್ಟಿದೆ. ದೇವರು ಹೇಳಿರುವುದು ಶಾಸ್ತ್ರಬದ್ಧವಾದ ವಿಧಾನವು, ಆದ್ದರಿಂದ ಆತನ ಮಾತಿಗೆ ಲೋಪವಿರುವುದಿಲ್ಲ. ಏನಾದರೂ ಲೋಪವಿದ್ದರೇ ನಮ್ಮ ಅವಗಾಹನೆಯಲ್ಲಿ ಇರಬಹುದು ಆದರೇ ದೇವರು ಹೇಳಿರುವ ವಿಧಾನದಲ್ಲಿರುವುದಿಲ್ಲ. ಮೂರನೆಯಸಲ ಕೊನೆಯದಾಗಿ **'ತೆರೆಹಿಂಬದಿಯಿಂದ ಹೇಳುವುದು'** ಎಂಬ ವಿಧಾನವು ನಡೆದಿದೆ. ಆದ್ದರಿಂದ ತೆರೆಹಿಂಬದಿಯಿಂದ ಹೇಳಲಾದ ಜ್ಞಾನವು ಗ್ರಂಥರೂಪವಾದಾಗ ಅದನ್ನು ಕೊನೆಯ ಗ್ರಂಥವಾಗಿ ಹೇಳುತ್ತಾ **"ಅಂತಿಮ ದೈವಗ್ರಂಥ"** ಎಂದು ಹೇಳಿದ್ದೇವೆ. ಎರಡನೆಯ ವಿಧಾನದ ಪ್ರಕಾರ ತನ್ನ ಪ್ರತಿನಿಧಿಯಾದ ಯೇಸು ಹೇಳಿರುವ ಜ್ಞಾನವು ಗ್ರಂಥರೂಪವಾದಾಗ ಅದನ್ನು ದ್ವಿತೀಯ ದೈವಗ್ರಂಥವೆಂದು ಹೇಳಿದ್ದೇವೆ. ಕೃಷ್ಣನು ಸಹ ಯೇಸುವಿನಹಾಗೆ ಭಗವಂತನಾದ್ದರಿಂದ ಕೃಷ್ಣನು ಹೇಳಿರುವ ಭಗವದ್ಗೀತೆ ಕೂಡಾ ದ್ವಿತೀಯ ದೈವಗ್ರಂಥವೇ. ಪ್ರಥಮ ದೈವಗ್ರಂಥವೆಂದು ಹೆಸರು ಯಾಕೆ ಇಟ್ಟಿದ್ದಾರೆ? ಎನ್ನುವುದು ಪ್ರಶ್ನೆಯಾಗಿದೆ. ಅದಕ್ಕೆ ನಾನು ಹೇಳುವ ಉತ್ತರ ಈ ವಿಧವಾಗಿದೆ. ಭಗವದ್ಗೀತೆಯನ್ನು ದ್ವಿತೀಯ ದೈವಗ್ರಂಥವೆಂದು ಹೇಳಬಾರದು. ಪ್ರಥಮ ದೈವಗ್ರಂಥವೆಂದೇ ಹೇಳಬೇಕು, ಏಕೆಂದರೇ!

ಭಗವದ್ಗೀತೆ, ಖುರಾನ್ ಗ್ರಂಥದಲ್ಲಿ ಅಲ್ಲಾಹ್ (ದೇವರು) ಹೇಳಿರುವ ಮೂರು ವಿಧಾನಗಳಲ್ಲಿ ಮೊದಲ ವಿಧಾನದ ಪ್ರಕಾರವೇ ತಯಾರಾಗಿರುವುದರಿಂದ

ಅದನ್ನು ಪ್ರಥಮ ದೈವಗ್ರಂಥವೆಂದು ಹೇಳುವುದು ನ್ಯಾಯವಾದ ಪದ್ಧತಿ. ದೇವರು ಹೇಳಿರುವುದು, ಮಾಡಿರುವುದು ಗ್ರಹಿಸಿಕೊಳ್ಳಲಾರದ ನಾವು ತಪ್ಪಾಗಿ ಮಾತನಾಡುತ್ತಿರುತ್ತೇವೆ ಆದರೇ, ದೇವರ ಮಾತಿನಲ್ಲಿ ಯಾವ ಲೋಪವೂ ಇಲ್ಲ. ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ದೇವರ ಬೋಧನೆ ವಿಧಾನವು, ಹಾಗೆಯೇ ಗ್ರಂಥಗಳ ವರಸೆ ವಿಧಾನ ಇರುವಂತೆ ಹೇಳಿದ್ದಾರೆ. ಅದರ ಪ್ರಕಾರ ಭಗವದ್ಗೀತೆ ಪ್ರಥಮ ದೈವಗ್ರಂಥವಾಗುತ್ತದೆ. ಆಕಾಶವಾಣಿ ಹೇಳಿರುವ ಜ್ಞಾನವು ಗ್ರಂಥವಾದರೇ ಪದ್ಧತಿ ಪ್ರಕಾರ ಪ್ರಥಮ ಗ್ರಂಥವಾಗಿ ತಯಾರಾಗುವುದು. ದೇವರು ಭಗವಂತನಾದ ಕೃಷ್ಣನಾಗಿ ಬಂದರೂ, ಆತನು ಭಗವಂತನೆಂಬ ವಿಷಯವು ಯಾರಿಗೂ ತಿಳಿದಂತೆ ಮಾಡಿದ್ದಾನೆ. ಅಷ್ಟೇಅಲ್ಲದೇ ಕೃಷ್ಣನು ಅರ್ಜುನನಿಗೆ ಹೇಳುವಾಗ **"ಇದು ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಸೂರ್ಯನಿಗೆ ಹೇಳಿರುವ ಜ್ಞಾನವನ್ನು ನಿನಗೆ ಹೇಳುತ್ತಿದ್ದೇನೆಂದು"** ಕೃಷ್ಣನು ಅರ್ಜುನನಿಗೆ ಹೇಳಿದನು. ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ ಎಂದು ಅನ್ನುತ್ತಿದ್ದೇವೆ ಹೊರತು ಕೃಷ್ಣನು ಅರ್ಜುನನಿಗೆ ಏನು ಹೇಳಿದ್ದಾನೋ, ಹೇಗೆ ಹೇಳಿದ್ದಾನೋ, ಎಷ್ಟುಹೊತ್ತು ಹೇಳಿದ್ದಾನೋ ತಿಳಿಯದ ಸ್ಥಿತಿಯಲ್ಲಿದ್ದೇವೆ. ಕೃಷ್ಣನು ತಾನು ಭಗವದ್ಗೀತೆಯನ್ನು ಹೇಳಿದಂತೆ ಎಲ್ಲೂ ಪ್ರಕಟಿಸಿಕೊಳ್ಳಲಿಲ್ಲ. ವ್ಯಾಸನು ಹೇಳಿರುವುದನ್ನು ಅನುಸರಿಸಿ ಆಕಾಶವಾಣಿ ಸೂರ್ಯನಿಗೆ ಹೇಳಿರುವ ಬೋಧನೆಯನ್ನೇ ಕೃಷ್ಣನು ಹೇಳಿದ್ದಾನೆಂದು ಇರುವುದರಿಂದ, ಕೃಷ್ಣನು ಭಗವಂತನೆಂದು ತಿಳಿಯದೆ ಹೋಗಿರುವುದರಿಂದ, ಕೃಷ್ಣನು ಕೂಡಾ ತಾನು ಜ್ಞಾನವನ್ನು ಹೇಳುವ ಸಮಯದಲ್ಲಿ ತಾನು ಹೇಳುವ ಜ್ಞಾನವೆಲ್ಲವೂ ಆಕಾಶ ವಾಣಿ ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಹೇಳಿದೆಯೆಂದು ಹೇಳಿರುವುದರಿಂದ, ಭಗವದ್ಗೀತೆಯೆಲ್ಲವೂ ಆಕಾಶವಾಣಿ ಬೋಧನೆಯಾಗಿ ಪರಿಗಣಿಸಲ್ಪಡುತ್ತಿದೆ. ಭಗವದ್ಗೀತೆ ಜ್ಞಾನವೆಲ್ಲವೂ ಆಕಾಶವಾಣಿ ಬೋಧನೆಯಾಗಿ ಲೆಕ್ಕಿಸಬೇಕಾಗಿರುವುದೇ ಆಗಿರುವುದರಿಂದ, ಭಗವದ್ಗೀತೆಯನ್ನು ವರಸೆ ಕ್ರಮದಲ್ಲಿ ಪ್ರಥಮ ದೈವಗ್ರಂಥವಾಗಿ ಹೇಳಬೇಕಾಗಿ ಬಂದಿದೆ.

ಕೃಷ್ಣನ ಜೀವನದಲ್ಲಿ ತಾನು ಸ್ವತಃವಾಗಿ ಜ್ಞಾನ ಹೇಳಿದಂತೆ ಪ್ರವರ್ತಿಸಲಿಲ್ಲ. ಕೃಷ್ಣನು ಅರ್ಜುನನಿಗೆ ಜ್ಞಾನ ಹೇಳಿರುವುದು ಕೂಡಾ ಯಾರಿಗೂ ತಿಳಿಯದೆ ಇರುವುದರಿಂದ ಭಗವದ್ಗೀತೆ ಆಕಾಶವಾಣಿ ಲೆಕ್ಕದೊಳಗೆ ಹೋಗಿದೆ. ಆದ್ದರಿಂದ ವ್ಯಾಸನು ಭಗವದ್ಗೀತೆಯನ್ನು ಬರೆದಾಗ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಮೊದಲಿಗೇ ಈ ಜ್ಞಾನವೆಲ್ಲವೂ ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಮೂಲಕ ನಾನೇ ಸೂರ್ಯನಿಗೆ ಹೇಳಿದ್ದೇನೆ ಎಂದು ಹೇಳುವುದರಿಂದ, ಅದು ಪ್ರಥಮ ದೈವಗ್ರಂಥವಾಗಿ ಹೇಳಲಾಗುವುದಕ್ಕೆ ಎಲ್ಲಾ ಅರ್ಹತೆಗಳು ಪಡೆದಿದೆ. ದ್ವಾಪರಯುಗದಲ್ಲಿ ಕೃಷ್ಣನು ಅರ್ಜುನನಿಗೆ ಹೇಳುತ್ತಾ ಜ್ಞಾನಯೋಗ ಮೊದಲ ಶ್ಲೋಕದಲ್ಲಿಯೇ ಹೀಗೆ ಹೇಳಿದ್ದಾನೆ ನೋಡಿ.

**ಶ್ಲೋ॥ ಇಮಂ ವಿವಸ್ವತೇ ಯೋಗಂ ಪ್ರೋಕ್ತವಾ ನಹ ಮವ್ಯಯಮ್।**
**ವಿವಸ್ವಾ ನ್ಮನವೇ ಪ್ರಾಹ ಮನು ರಿಕ್ಷ್ವಾಕವೇ ಬ್ರವೀತ್॥**

**ಭಾವಾರ್ಥ :– "ಇದು ನಾಶವಿಲ್ಲದ ಯೋಗ. ಇದನ್ನು ಸೂರ್ಯನಿಗೆ ಹೇಳಿದ್ದೆನು. ಸೂರ್ಯನು ಮನುವಿಗೆ ಹೇಳಿದಾಗ, ಮನುವಿನಿಂದ ಇಕ್ಷ್ವಾಕನು ಎಂಬ ರಾಜನಿಗೆ ತಿಳಿದಿದೆ."** ಎಂದು ಇದೆ. ಈ ಶ್ಲೋಕದಲ್ಲಿ ನಾನೇ ಸೂರ್ಯನಿಗೆ ಹೇಳಿದ್ದೆನು ಎಂದು ಕೃಷ್ಣನು ಹೇಳಿದ್ದಾನೆ. ಮೊದಲು ಪಂಚಭೂತಗಳಲ್ಲಿ ಮೊದಲನೆಯದಾದ ಆಕಾಶದಿಂದ ತಿಳಿದ ಜ್ಞಾನವನ್ನು ನಾನೇ ಹೇಳಿದ್ದೇನೆಂದು ಕೃಷ್ಣನು ಹೇಳುವುದರಲ್ಲಿ ಆಧ್ಯಾತ್ಮಿಕ ಅರ್ಥವಿದೆ. ಆಕಾಶದಲ್ಲಿ ಕೂಡಾ ಆತ್ಮವಿದೆ. ಆತ್ಮ ಸರ್ವಜೀವಿಗಳ ಶರೀರಗಳಲ್ಲಿದೆ. ಜೀವಿಗಳನ್ನು ಭೂತಗಳೆಂಬ ಹೆಸರಿನಿಂದ ಕೂಡಾ ಕರೆಯಬಹುದು. ಭಗವಂತನಾದ ಕೃಷ್ಣನು ಎಲ್ಲಾ ಶರೀರಗಳಲ್ಲಿ ಆತ್ಮವಾಗಿರುವಂತೆ ಹೇಳುತ್ತಾ, ಆ ದಿನವು ಆಕಾಶವೊಂದರ ಆತ್ಮವಾಗಿ ಕೂಡಾ ಆತನೇ ಇರುವಂತೆ ಹೇಳುತ್ತಾ, ಆತ್ಮನಾದ ಆತನೇ ಆಕಾಶ ಭೂತದಿಂದ ಹೇಳುವುದು ನಡೆದಿದೆ. ಆದ್ದರಿಂದ ಶ್ಲೋಕದಲ್ಲಿ 'ಒಂದು ಸಮಯದಲ್ಲಿ ನಾನೇ ಸೂರ್ಯನಿಗೆ ಹೇಳಿರುವೆನೆಂದು' ಹೇಳಿದ್ದಾನೆ. ಹಾಗೆ ಹೇಳುವುದರಿಂದ ಆಕಾಶ ಭೂತವು ಸೂರ್ಯನಿಗೆ ಜ್ಞಾನ ಹೇಳಿದಂತಾಗಿದೆ. ಆದ್ದರಿಂದ ಮೊದಲು ಆಕಾಶದಲ್ಲಿರುವ

ಸೂರ್ಯನಿಗೆ ಆಕಾಶದಲ್ಲಿನ ಆತ್ಮ ಬೋಧಿಸಿರುವ ಬೋಧನೆ ಭಗವದ್ಗೀತೆಯಾಗಿ ದ್ವಾಪರ ಯುಗದಲ್ಲಿ ಬರೆಯಲಾದರೂ, ಅದು ಪ್ರಥಮ ದೈವಗ್ರಂಥವಾಗಿ ಲೆಕ್ಕಿಸಲ್ಪಡುತ್ತಿದೆ. ಕಾಣಿಸದ ಆತ್ಮ ಜ್ಞಾನವು ತಿಳಿಯದವರಿಗೆ ಈ ವಿಷಯವು ಅರ್ಥವಾಗುವುದಿಲ್ಲ. ಆತ್ಮ ಜ್ಞಾನವು ಸ್ವಲ್ಪವಾದರೂ ತಿಳಿದವರಿಗೆ ಸ್ವಲ್ಪಮಟ್ಟಿಗೆ ಅರ್ಥವಾಗಬಲ್ಲದು.

ಪಂಚ ಮಹಾಭೂತಗಳಲ್ಲಿನ ಆಕಾಶವು ಮನುಷ್ಯರಹಾಗೆ ಮಾತ ನಾಡುವುದಿಲ್ಲ. ಆಕಾಶವು ತನ್ನ ಶಬ್ದದಿಂದ ಜ್ಞಾನವನ್ನು ತಿಳಿಸಬೇಕಾದ್ದೇ! ಆಕಾಶವು ತನ್ನ ಶಬ್ದವಾದ ಗುಡುಗುಗಳಿಂದ ಜ್ಞಾನವನ್ನು ತಿಳಿಸಿದೆ. ಆಕಾಶದಿಂದ ಗುಡುಗುಗಳ ಶಬ್ದವು ಬಂದರೂ, ಆ ಶಬ್ದದಲ್ಲಿ ಜ್ಞಾನವನ್ನು ಅಳವಡಿಸಿದೆ. ಶಬ್ದ ಮಾಡಿರುವುದು ಆಕಾಶದಲ್ಲಿನ ಆತ್ಮವೇ ಎಂದು ತಿಳಿಯಬೇಕು. ಆಕಾಶದಲ್ಲಿನ ಆತ್ಮ ಗುಡಿಗಿನ ರೂಪದಲ್ಲಿ ಜ್ಞಾನವನ್ನು ಬೋಧಿಸಿದರೇ, ಆ ಗುಡಿಗಿನ ಶಬ್ದವನ್ನು ಆಕಾಶದಲ್ಲಿನ ಸೂರ್ಯನು ಗ್ರಹಿಸಿದ್ದಾನೆ. ಆ ವಿಧವಾಗಿ ಮೊದಲು ದೈವಜ್ಞಾನವು ತಿಳಿಯಲ್ಪಟ್ಟರೂ, ಅದು ಸೂರ್ಯನವರೆಗೇ ಪರಿಮಿತವಾದ್ದರಿಂದ ಅದನ್ನು ಪ್ರಜೆಗಳಿಗೆ ತಿಳಿಸುವ ನಿಮಿತ್ತ, ಮನುಷ್ಯನಾಗಿ ಬಂದಿರುವ ಕೃಷ್ಣನೊಳಗಿನಿಂದ ಆತ್ಮ ಮೊದಲು ಸೂರ್ಯನಿಗೆ ಹೇಳಿರುವ ಜ್ಞಾನವನ್ನೇ ಹೇಳುವುದು ಮಾಡಿದೆ. ಎರಡನೆಯಸಲ ಮನುಷ್ಯನಾಗಿ ಬಂದ ಕೃಷ್ಣನು ಹೇಳಿದರೂ, ಆಗಲೂ ಕೂಡ ಕೃಷ್ಣನ ಶರೀರದಲ್ಲಿನ ಆತ್ಮವೇ ಹೇಳುವುದರಿಂದ, ಸೂರ್ಯನಿಗೆ ಹೇಳಿರುವ ಜ್ಞಾನವನ್ನೇ ಹೇಳುತ್ತಿದ್ದೇನೆಂದು ಹೇಳುವುದರಿಂದ, ಆಗ ಹೊಸದಾಗಿ ಹೇಳಿರುವ ಜ್ಞಾನವಲ್ಲವೆಂದು, ಮೊದಲು ಮೇಘಗಳ ಗರ್ಜನೆ ರೂಪದಲ್ಲಿ ಬಂದ ಜ್ಞಾನವನ್ನೇ ಪುನಃ ಹೇಳುವುದಾಗಿದೆಯೆಂದು, ಆದ್ದರಿಂದ ಅದು ಮೊದಲ ಜ್ಞಾನವಾಗಿಯೇ ಲೆಕ್ಕಿಸಲ್ಪಡುತ್ತಿದೆ ಎಂದು ಹೇಳಬಹುದು. ಮೊದಲ ಜ್ಞಾನವನ್ನು ತೆಲುಗು ಭಾಷೆಯಲ್ಲಿ, ಮನುಷ್ಯರ ಭಾವನೆಯಲ್ಲಿ ಹೇಳುವುದರಿಂದ ಆಗ ಅದು ಹೊಸದಾಗಿ ಕಾಣಿಸಿದರೂ, ಮೊದಲು ಸೂರ್ಯನಿಗೆ ಹೇಳಿರುವುದೇ ಎಂದು ಮೊದಲಿಗೇ ಹೇಳುವುದರಿಂದ, ಅದನ್ನು ಆಕಾಶವು ಹೇಳಿರುವ ಹಳೆಯ ಜ್ಞಾನದ ಕೆಳಗೇ

ಜಮಕಟ್ಟಲಾಗಿದೆ. ನಂತರ ಅದು ಗ್ರಂಥರೂಪವಾದರೂ ಅದನ್ನು ಪ್ರಥಮ ದೈವಗ್ರಂಥವೆಂದೇ ಹೇಳಿದ್ದೇವೆ. ಆಕಾಶ ಗುಡುಗುಗಳಿಂದ ಆರಂಭವಾದ ಮೊದಲ ಜ್ಞಾನವು ಮನುಷ್ಯರು ಮಾತನಾಡುವ ಬೋಧನೆಯಾಗಿ ಬದಲಾಗಿ ಕೊನೆಗೆ ಗ್ರಂಥರೂಪವಾಗಿದೆ. ಹಾಗೆ ತಯಾರಾದ ಗ್ರಂಥವು ಮೊದಲು ಸಂಸ್ಕೃತ ಭಾಷೆಯಲ್ಲಿದ್ದರೂ ಅದು ಮೊದಲು ಸೂರ್ಯನು ಕೇಳಿರುವ ಜ್ಞಾನ, ಆಕಾಶವು ಗುಡಿಗಿನ ರೂಪದಲ್ಲಿ ಹೇಳಿರುವ ಜ್ಞಾನವಾದ್ದರಿಂದ ಅದನ್ನು ಪ್ರಥಮ ದೈವಗ್ರಂಥವೆಂದೇ ಹೇಳುತ್ತಿದ್ದೇವೆ.

ನಾನು ತೆಲುಗು ಭಾಷೆಯಲ್ಲಿ ಬರೆದ ಗ್ರಂಥವನ್ನು ಇಂಗ್ಲಾಂಡ್ ದೇಶದಲ್ಲಿ ಆಂಗ್ಲ ಭಾಷೆಯೊಳಗೆ ಬೇರೆಯೊಬ್ಬ ವ್ಯಕ್ತಿ ಬರೆದಿದ್ದಾನೆ ಎಂದುಕೊಳ್ಳಿ. ಹಾಗೆ ಬರೆಯುವ ವ್ಯಕ್ತಿ ಇದು ತೆಲುಗು ಭಾಷೆಯಲ್ಲಿನ ಗ್ರಂಥ, ಈ ಗ್ರಂಥವನ್ನು ಇಂತಹ ವ್ಯಕ್ತಿಯಾದ ನಾನು ಆಂಗ್ಲ ಭಾಷೆಯೊಳಗೆ ಬದಲಾಯಿಸಿ ಬರೆಯುತ್ತಿದ್ದೇನೆಂದು ಹೇಳಿ ಬರೆದಿದ್ದಾನೆ ಎಂದುಕೊಳ್ಳಿ. ಆಗ ಅದು ಇಂಗ್ಲಾಂಡ್ ದೇಶದಲ್ಲಿ ಕೂಡಾ ನಾನು ಹೇಳಿರುವ ಗ್ರಂಥವಾಗಿಯೇ ಅಲ್ಲಿನ ಪ್ರಜೆಗಳಿಗೆ ಪರಿಚಯವಾಗುವುದು. ಹಾಗೆ ಹೇಳಿ ಬರೆಯದೆ ಹೋದರೇ ಅಲ್ಲಿನ ಮನುಷ್ಯನೇ, ಆಂಗ್ಲ ಭಾಷೆಯಲ್ಲಿ ಬರೆದಿರುವ ಮನುಷ್ಯನೇ ಆ ಗ್ರಂಥವನ್ನು ಸ್ವತಃವಾಗಿ ಬರೆದಂತೆ ಲೆಕ್ಕಿಸಲ್ಪಡುವುದು. ಅದೇ ವಿಧವಾಗಿ ಆಕಾಶವು ಹೇಳಿದಾಗ ಸೂರ್ಯನು ಕೇಳಿರುವ ಜ್ಞಾನವನ್ನು, ಆಕಾಶ ಗುಡುಗುಗಳ ಶಬ್ದದಿಂದ ಕೂಡಿಕೊಂಡಿರುವ ಜ್ಞಾನವನ್ನು ಕೃಷ್ಣನು ಮನುಷ್ಯರು ಮಾತನಾಡುವ ಭಾಷೆಯಲ್ಲಿ ಬದಲಾಯಿಸಿ ಹೇಳಿದರೂ, ಕೃಷ್ಣನು ಹೇಳಿದಾಗ ಇದು ಮೊದಲು ಸೂರ್ಯನಿಗೆ ಹೇಳಿರುವ ಜ್ಞಾನವೆಂದು ಹೇಳಿದಾಗ, ಭಾರತ ದೇಶದಲ್ಲಿ ಭಾರತೀಯರ ಭಾಷೆಯಲ್ಲಿ ಕೃಷ್ಣನು ಹೇಳಿದರೂ, ಅದು ಮೊದಲು ಸೂರ್ಯನಿಗೆ ಹೇಳಿರುವ ಜ್ಞಾನವಾಗಿಯೇ ಲೆಕ್ಕಿಸಲ್ಪಡುವುದು ಆದರೇ, ನಂತರ ಕೃಷ್ಣನು ಹೇಳಿರುವ ಜ್ಞಾನವಾಗಿ ಲೆಕ್ಕಿಸಲ್ಪಡುವುದಿಲ್ಲ. ಆದ್ದರಿಂದ ಮೊದಲು ಸೂರ್ಯನಿಗೆ ಆಕಾಶ ಆತ್ಮ ಹೇಳಿರುವ ಜ್ಞಾನವು ಕೆಲವು ಲಕ್ಷಗಳ ವರ್ಷಗಳ ನಂತರ ಗ್ರಂಥರೂಪವಾಗಿ

ಬದಲಾದರೂ ಅದು ಪ್ರಥಮ ದೈವಗ್ರಂಥವಾಗಿಯೇ ಕರೆಯಲ್ಪಟ್ಟಿದೆ. ಗುಡುಗಿನ ಶಬ್ದದಿಂದ ಮನುಷ್ಯರು ಮಾತನಾಡುವ ಭಾಷೆಯೊಳಗೆ ಹೇಳಿರುವುದು ಭಗವಂತನಾದ್ದರಿಂದ, ಆಕಾಶದಲ್ಲಿ ಆತ್ಮವಾಗಿರುವುದು ಭಗವಂತನಲ್ಲಿನ ಆತ್ಮವೇ ಆಗಿರುವುದರಿಂದ, ಭಗವಂತನು ಮನುಷ್ಯನಾದರೂ ಎಲ್ಲ ಜನ್ಮಗಳ ಜ್ಞಾಪಕಗಳು ಆತನಿಗಿರುವುದರಿಂದ, ಆಕಾಶ ರೂಪದಲ್ಲಿ ಹೇಳಿರುವ ಆತ್ಮ ಕೃಷ್ಣನ ಆತ್ಮವೇ ಆಗಿರುವುದರಿಂದ, ಕೃತಯುಗ ಆರಂಭದಲ್ಲಿ ಹೇಳಿರುವುದೇ ನಂತರ ದ್ವಾಪರಯುಗದ ಕೊನೆಯಲ್ಲಿ ಸುಲಭವಾಗಿ ಹೇಳಿದ್ದಾನೆ. ಕೃಷ್ಣನು ದ್ವಾಪರಯುಗದ ಕೊನೆಯಲ್ಲಿ ಹೇಳಿದರೂ, ಆತನು ಭಗವಂತನಾದ್ದರಿಂದ, ಭಾಷೆ ಅನುವಾದ ಮಾಡಿ ಬರೆದವನು ಇಂಥವನೆನ್ನುವಂತೆ, ಭಗವಂತನು ಹೇಳಿರುವುದರಿಂದ ಅದನ್ನು ಭಗವದ್ಗೀತೆ ಎಂದು ದ್ವಾಪರ ಯುಗದಲ್ಲಿ ಹೆಸರು ಇಡಲಾಗಿದೆ. ಪ್ರಪಂಚದಲ್ಲಿ ದೇವರು ಹೇಳಿರುವ ಮೂರು ವಿಧಾನಗಳಲ್ಲಿ ಮೊದಲ ವಿಧಾನವಾಗಿ ಹೇಳಲ್ಪಟ್ಟ ಜ್ಞಾನವಾದ್ದರಿಂದ ಅದನ್ನು ನಂತರ ಭಗವಂತನು ಹೇಳಿದರೂ, ಭಗವದ್ಗೀತೆ ಎಂದು ಹೆಸರಿಟ್ಟರೂ, ಅದಕ್ಕೆ ಪ್ರತ್ಯೇಕವಾದ ಬಿರುದಿನಂತಹ ಹೆಸರು ಪ್ರಥಮ ದೈವಗ್ರಂಥವೆಂದು ಹೇಳುವುದೇ. ಮೊದಲು ತಯಾರಾದ ಭಗವದ್ಗೀತೆಗೆ ಪ್ರಥಮ ದೈವಗ್ರಂಥವೆನ್ನುವ ಬಿರುದನ್ನು ಯಾರೂ ತೆಗೆದುಹಾಕಲಾರರು. ಎಂದಿಗೂ ಶಾಶ್ವತವಾಗಿ ಅದು ಪ್ರಥಮ ದೈವಗ್ರಂಥವಾಗಿಯೇ ಇರುತ್ತದೆ.

**ಪ್ರಶ್ನೆ :– ಕಬ್ಬನ್ನು ಹಿಂಡಿದರೇ ರಸ ಬರುತ್ತದೆ. ಆ ರಸವು ಸಿಹಿಯಾಗಿ ಇರುವುದರಿಂದ ಕಬ್ಬು ಸಿಹಿಯಾಗಿ ಇರುತ್ತದೆ ಎಂದು ಹೆಸರುಪಡೆದಿದೆ. ಹಾಗೆಯೇ ಪ್ರಥಮ ದೈವಗ್ರಂಥದಲ್ಲಿ ಸಾರಾಂಶವೇನಿದೆ? ಕಬ್ಬಿನಲ್ಲಿ ಸಿಹಿಯು ಪ್ರಧಾನವಾದುದಾಗಿ ಇರುವಹಾಗೆ ಭಗವದ್ಗೀತೆಯಲ್ಲಿ ಯಾವುದು ಪ್ರಧಾನ ಸಾರಾಂಶವಾಗಿದೆ?**

**ಉತ್ತರ :–** ಪ್ರಪಂಚಕ್ಕೇ ಆತ್ಮ ಎನ್ನುವವನು ಮೊದಲು ಖಗೋಳದಲ್ಲಿ ಸೂರ್ಯಗ್ರಹ ಕೇಳುವಂತೆ ಆಕಾಶದಿಂದ ಶಬ್ದರೂಪದಲ್ಲಿ ದೊಡ್ಡದೊಡ್ಡ ಗುಡುಗಿನ ಗರ್ಜನೆಯಾಗಿ ಕೇಳಿಸುವ ಶಬ್ದದಿಂದ ಹೇಳಲ್ಪಟ್ಟ ವಿಷಯವು ನಂತರ ಮನುಷ್ಯರ ಭಾಷೆಯೊಳಗೆ ಕೃಷ್ಣನಿಂದ ಹೇಳುವಂತೆ ತರ್ಜುಮೆ ಮಾಡಲಾಗಿದೆ. ಕೃಷ್ಣನ

ಶರೀರದಲ್ಲಿನ ಆತ್ಮವೇ, ಆಕಾಶದಲ್ಲಿನ ಆತ್ಮವಾಗಿ ಇರುವುದರಿಂದ, ಆಕಾಶವಾಗಿ ಒಂದುಸಲ, ಮನುಷ್ಯನಾಗಿ ಒಂದೆರಡುಸಲ ಒಂದೇ ಆತ್ಮ ಹೇಳಿರುವುದರಿಂದ, ಸೃಷ್ಠಿ ಆದಿಯಲ್ಲಿ ಹೇಳಿರುವ ಜ್ಞಾನವೇ ದ್ವಾಪರಯುಗದ ಕೊನೆಯಲ್ಲಿ ಭಗವದ್ಗೀತೆಯಾಗಿ ಹೇಳಿರುವುದಾಗಿದೆ. **ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಸಾರಾಂಶವಾದುದು ದೈವಶಕ್ತಿಯೇ ಇದೆ.** ದೈವಶಕ್ತಿಯನ್ನೇ **"ಜ್ಞಾನಜ್ಯೋತಿ"** ಎಂದೂ, **"ಜ್ಞಾನಾಗ್ನಿ"** ಎಂದೂ ಹೇಳಬಹುದು. ಮನುಷ್ಯ ಕರ್ಮಬದ್ಧನಾಗಿ ಅಸ್ವತಂತ್ರತೆ ಹೊಂದಿ, ಸ್ವತಂತ್ರವಾಗಿ ನಡೆಯಲಾರದೆ ಇದ್ದಾನೆ. ಅಂಥವನು **"ಜ್ಞಾನಶಕ್ತಿ"** ಎಂಬ ಬಲದಿಂದ ಕರ್ಮವನ್ನು ಜಯಿಸಿ ಸ್ವತಃವಾಗಿ ನಡೆಯಬಲ್ಲನು. ಕರ್ಮದಿಂದ ಬಿಡುಗಡೆಯಾಗಿ ಸ್ವತಂತ್ರತೆ ಹೊಂದಿ ಸ್ವತಃವಾಗಿ ನಡೆಯಬಲ್ಲ ಶಕ್ತಿ ಗ್ರಂಥದಲ್ಲಿದೆ. ಆದ್ದರಿಂದ ಮನುಷ್ಯ ಕರ್ಮಬದ್ಧನಾಗದೇ ಹೇಗೆ ನಡೆಯಬೇಕೋ, ತಿಳಿಸುವುದು ಭಗವದ್ಗೀತೆ. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನವೆಂಬ ಜ್ಯೋತಿ ಇದೆಯೆಂದು, ಹಾಗೆಯೇ ಮನುಷ್ಯ ಸ್ವತಃವಾಗಿ ನಡೆಯಬಲ್ಲ ಮಾರ್ಗದರ್ಶಿನಿಯಾಗಿ ಪ್ರಥಮ ದೈವಗ್ರಂಥವಿದೆಯೆಂದು ಹೇಳಬಹುದು. ಜ್ಞಾನದ ಮೇಲೆ ಆಸಕ್ತಿ ಇರುವವನಿಗೇ ಇದು ಒಂದು ಜ್ಯೋತಿಯಾಗಿದ್ದು ಅಜ್ಞಾನ ಕತ್ತಲೆಯಲ್ಲಿ ಮಾರ್ಗವನ್ನು ಕಾಣಿಸುವಂತೆ ಮಾಡುತ್ತಿದೆ. ಆದ್ದರಿಂದ ಈ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು "ಜ್ಯೋತಿ" ಎಂದೂ, "ಮಾರ್ಗದರ್ಶಿನಿ" ಎಂದೂ ಜ್ಞಾನಿಗಳು ಹೇಳುತ್ತಿದ್ದಾರೆ. ಜ್ಞಾನಿಗಳೇ ಅಲ್ಲದೆ ದೈವಸ್ವರೂಪವಾದ ಪ್ರವಕ್ತರೆಲ್ಲರೂ ಕೂಡಾ ಅದೇ ಮಾತನ್ನು ಹೇಳುತ್ತಿದ್ದಾರೆ.

ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 5, ಆಯತ್ 44ರಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ. (5-44) **"ನಾವು ತೌರಾತ್ ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶಕವು, ಜ್ಯೋತಿ ಇವೆ. ಈ ತೌರಾತ್ ಗ್ರಂಥ ಆಧಾರವಾಗಿಯೇ ಮುಸ್ಲಿಮ್‌ರಾದ ಪ್ರವಕ್ತರು, ರಬ್ಬಾನೀಗಳು, ಧರ್ಮಜ್ಞರು ಯೂದರ ಸಮಸ್ಯೆಯನ್ನು ಪರಿಹರಿಸುತ್ತಿದ್ದರು."** ಅಷ್ಟೇ ಅಲ್ಲದೆ ತೌರಾತ್ ಗ್ರಂಥವನ್ನು ಕುರಿತು ಮತ್ತೊಂದುಕಡೆ ಈ ವಿಧವಾಗಿ ಹೇಳಿದ್ದಾರೆ

ನೋಡಿರಿ. (62-5) **"ತೌರಾತ್ ಗ್ರಂಥದ (ಭಗವದ್ಗೀತೆ ಗ್ರಂಥದ) ಪ್ರಕಾರ ಆಚರಿಸಬೇಕೆಂದು ಆದೇಶಿಸಿದ್ದರೂ, ಅದಕ್ಕೆ ಅನುಗುಣವಾಗಿ ಆಚರಿಸದವರು ಎಷ್ಟು ಗ್ರಂಥಗಳನ್ನು ಅನುಸರಿಸಿದರೂ, ಅಂಥವರನ್ನು ಎಷ್ಟೋ ಗ್ರಂಥಗಳನ್ನು ಬೆನ್ನಿನ ಮೇಲೆ ಹೊರುವ ಕತ್ತೆಯಂಥವರು ಎಂದು ಉಪಮಾನವಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ಅಲ್ಲಾಹ್ ಸನ್ಮಾರ್ಗ ತೋರಿಸುವುದಿಲ್ಲ."** ಈ ವಿಧವಾಗಿ ತೌರಾತ್ ಗ್ರಂಥವನ್ನು ಕುರಿತು ಹೇಳಿರುವುದಾಗಿದೆ. ತೌರಾತ್ (ಭಗವದ್ಗೀತೆ) ಗ್ರಂಥದಲ್ಲಿ ಜ್ಞಾನಜ್ಯೋತಿ ಇದೆಯೆಂದು, ಅದು ಪ್ರತಿ ಮಾನವನಿಗು ಮಾರ್ಗದರ್ಶಿನಿಯೆಂದು ಕೂಡಾ ಖುರಾನ್ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಭಗವದ್ಗೀತೆ (ತೌರಾತ್) ಗ್ರಂಥವನ್ನು ಕುರಿತು ಖುರಾನ್ ಗ್ರಂಥವು ಸತ್ಯವೆಂದು ದೃಢೀಕರಿಸುತ್ತಿದೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 5 ಆಯತ್ 48ರಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ. (5–48) **"ನಾವು ನಿನ್ನ ಸಲುವಾಗಿ ಈ ಖುರಾನ್ ಗ್ರಂಥವನ್ನು ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು (ತೌರಾತ್, ಇಂಜೀಲನ್ನು) ಸತ್ಯವೆಂದು ದೃಢೀಕರಿಸುತ್ತದೆ. ನಿನ್ನಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನಇಚ್ಛೆಯಂತೆ ಅನುಸರಿಸಬೇಡ"** ಎಂದು ಬರೆದಿದ್ದಾರೆ. ಇದನ್ನನುಸರಿಸಿ ಕೊನೆಯ ಗ್ರಂಥವಾದ ಖುರಾನ್ ಗ್ರಂಥವು ಕೂಡಾ ಭಗವದ್ಗೀತೆಯನ್ನು (ತೌರಾತ್‌ನ್ನು) ದೃಢೀ ಕರಿಸುತ್ತಿದೆಯೆಂದು ತಿಳಿಯುತ್ತಿದೆ.

**ಪ್ರಶ್ನೆ :– ತೌರಾತ್ ಗ್ರಂಥವು ಮೂಸಾ ಪ್ರವಕ್ತ ಮೂಲಕ ಬಂದಿದೆಯೆಂದು ಖುರಾನ್ ಗ್ರಂಥದಲ್ಲಿ ಅಲ್ಲಲ್ಲಿ ಹೇಳಲಾಗಿದೆ. ಮೂಸಾ ಪ್ರವಕ್ತ ಹೇಳಿರುವ ತೌರಾತ್ ಗ್ರಂಥವನ್ನೇ ಬೈಬಲ್‌ನಲ್ಲಿ 'ಧರ್ಮಶಾಸ್ತ್ರ' ಎಂದು ಕರೆದಿದ್ದಾರೆ. ಹಾಗೆಯೇ ಮೂಸಾನನ್ನು ಮೋಷೇ ಎಂದು ಹೇಳಿದ್ದಾರೆ. ಮೋಷೇ ಧರ್ಮಶಾಸ್ತ್ರ ಅಥವಾ ಮೂಸಾ ತೌರಾತ್ ಗ್ರಂಥವನ್ನು ನೀವು ಭಗವದ್ಗೀತೆಯಾಗಿ ಹೇಳುತ್ತಿದ್ದೀರ. ನೀವು ಹೇಳುವ ತೌರಾತ್, ಭಗವದ್ಗೀತೆ ಎರಡೂ ಒಂದೇ ಎನ್ನುತ್ತೀರಾ?**

**ಉತ್ತರ :–** ನಾನು ಹೇಳುವುದು ವಾಸ್ತವವೇ. ತೌರಾತ್ ಗ್ರಂಥವು, ಭಗವದ್ಗೀತೆ ಗ್ರಂಥವು ಎರಡೂ ಒಂದೇ ಎನ್ನುವ ಮಾತು ಹೊಸದಾಗಿದ್ದರೂ, ನಂಬಲು ಸಾಧ್ಯವಾಗದಿದ್ದರೂ ನನ್ನ ಮಾತು ಶೇಕಡ ನೂರರಷ್ಟು ವಾಸ್ತವವೇ ಎಂದು ಹೇಳಬಲ್ಲೆನು. ಭಗವದ್ಗೀತೆ ತೌರಾತ್ ಗ್ರಂಥವೆಂದು ತಿಳಿಯುವುದಕ್ಕೆ ತಕ್ಕ ಸಮಾಚಾರ ನಮ್ಮ ರಚನೆಗಳಲ್ಲಿನ **"ಕೃಷ್ಣ ಮೂಸ"** ಎಂಬ ಗ್ರಂಥದಲ್ಲಿ ಇದೆ. ಅಲ್ಲಿ ಏನು ಬರೆದಿದೆಯೋ ಈಗ ನೋಡೋಣ.

ತೌರಾತ್ ಗ್ರಂಥವು ಪಶ್ಚಿಮ ದೇಶವಾದ ಇಸ್ರಾಯೇಲ್ ದೇಶದಲ್ಲಿಯೇ ಹುಟ್ಟಿದೆಯೆಂದು ಖಚಿತವಾಗಿ ಹೇಳಲಾರೆವು ಆದರೇ, ಇಸ್ರಾಯೇಲ್ ಪರಿಸರ ಪ್ರಾಂತದಲ್ಲಿ ಹುಟ್ಟಿದೆ ಎಂದು ಹೇಳಬಹುದು. ತೌರಾತ್ ಗ್ರಂಥವು ಯಾವ ಭಾಷೆಯಲ್ಲಿ ಇತ್ತೋ ಇಂದಿಗೂ ಕೂಡಾ ಯಾರಿಗೂ ತಿಳಿದಿಲ್ಲ. ತೌರಾತ್ ಗ್ರಂಥದ ಭಾಷೆ ಹೇಗೆ ತಿಳಿದಿಲ್ಲವೋ ಹಾಗೆಯೇ ಆ ಗ್ರಂಥವನ್ನು ಯಾರು ಬರೆದಿದ್ದಾರೋ ಕೂಡಾ ತಿಳಿದಿಲ್ಲ. ಆದರೇ ಕೆಲವು ವಿಷಯಗಳನ್ನು ಮಾತ್ರ ಖಚಿತವಾಗಿ ಹೇಳಬಲ್ಲೆವು. ಭಾರತದೇಶದಲ್ಲಿ ಸುಮಾರು ಐದುಸಾವಿರ ವರ್ಷಗಳ ಸಮಯದಲ್ಲಿ ಭಗವದ್ಗೀತೆ ಗ್ರಂಥರೂಪವಾಗಿದೆ. ಸೃಷ್ಠಿ ಆದಿಯಲ್ಲಿ ದೇವರು ತನ್ನ ಆತ್ಮ ಮೂಲಕ ಆಕಾಶದಿಂದ ಹೇಳಿಸಿರುವ ಜ್ಞಾನವನ್ನು ಭಗವಂತನ ಮೂಲಕ ಮನುಷ್ಯರಿಗೆ ತಲುಪಿಸಿದ್ದಾನೆ. ಭಗವಂತನು ಹೇಳಿರುವ ಜ್ಞಾನ ಎನ್ನುವಂತೆ ಆಗ ಹೇಳಿರುವ ಜ್ಞಾನಕ್ಕೆ 'ಭಗವದ್ಗೀತೆ' ಎಂದು ಹೆಸರಿಟ್ಟು ಹೇಳಿರುವುದಾಗಿದೆ. ಭಗವದ್ಗೀತೆ ಗ್ರಂಥರೂಪ ಆಗದಿರುವಾಗ **"ಜಪರ"** ಎನ್ನುವ ಹೆಸರಿನಿಂದಿರುವ ಜ್ಞಾನವೇ ಮೊಟ್ಟಮೊದಲ ದೈವಗ್ರಂಥವಾಗಿ ಬದಲಾಗಿದೆ. ಮೊದಲು ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಭಗವದ್ಗೀತೆಯನ್ನು ನಂತರ ಯಾವ ಭಾಷೆಯಲ್ಲಿ ಬರೆದರೂ ಅದು ಪ್ರಥಮ ದೈವಗ್ರಂಥವಾಗಿಯೇ ಇರುತ್ತದೆ. ಭಗವದ್ಗೀತೆ ವ್ಯಾಸ ಮಹರ್ಷಿ ಮೂಲಕ ತಯಾರಾದರೂ ಭಾರತ ದೇಶಕ್ಕೆ ಪಶ್ಚಿಮ ದಿಕ್ಕಿನಲ್ಲಿರುವ ಇಸ್ರಾಯೇಲ್ ದೇಶ ಪ್ರಾಂತಕ್ಕೆ ಭಗವದ್ಗೀತೆ ಸೇರಿಸಲ್ಪಟ್ಟಿದೆ. ಆ ಪ್ರದೇಶದ ಭಾಷೆಯಲ್ಲಿಯೇ ಆ ಪ್ರದೇಶದಲ್ಲಿರುವ ವ್ಯಕ್ತಿ ಹತ್ತಿರಕ್ಕೆ

ಭಗವದ್ಗೀತೆಯನ್ನು ಸೇರಿಸುವುದಾಗಿದೆ. ಆಗ ಭಾರತದೇಶದಲ್ಲಿ ಸಂಸ್ಕೃತ ಭಾಷೆಯಲ್ಲಿ ಹೊರತು ಇತರ ಭಾಷೆಯಲ್ಲಿ ಭಗವದ್ಗೀತೆ ಇರಲಿಲ್ಲ. ಕೃಷ್ಣನು ಭಾರತ ಯುದ್ಧದಲ್ಲಿ ಹೇಳಿರುವ ಭಗವದ್ಗೀತಾ ಜ್ಞಾನವನ್ನು ಕೃಷ್ಣನ ವಯಸ್ಸು ಸುಮಾರು 90 ವರ್ಷಗಳಿದ್ದಾಗ ಅರ್ಜುನನಿಗೆ ಹೇಳುವುದಾಗಿದೆ.

ದೇವರು ಅಥವಾ ಅಲ್ಲಾಹ್ ಅಥವಾ ಪರಮಾತ್ಮ ರಚಿಸಿರುವ ನಕ್ಷೆ ಹೇಗಿರುತ್ತದೋ ಯಾರಿಗೂ ತಿಳಿದಿಲ್ಲ. ಆತನು ಮೊದಲೇ ನಿರ್ಣಯಿಸಿಕೊಂಡ ಪ್ರಣಾಳಿಕೆಯನ್ನನುಸರಿಸಿ ಎಲ್ಲವೂ ಅದಷ್ಟಕ್ಕದೇ ನಡೆಯುತ್ತಿರುತ್ತದೆ. ಕೃಷ್ಣನು ಒಟ್ಟು 126 ವರ್ಷಗಳು ಬದುಕುವುದು ನಡೆದಿದೆ. ಕೃಷ್ಣನು ಮರಣಿಸಿದಾಗ ತನ್ನ ಎದುರುಗಡೆ ಇದ್ದ ಬೇಟೆಗಾರನಿಗೆ ಮುಂಬರುವ ಕೆಲವು ವಿಷಯಗಳನ್ನು ಹೇಳಿ, ತನ್ನ ಎರಡನೆಯ ಜನ್ಮವನ್ನು ಕುರಿತು ಕೂಡಾ ಹೇಳಿ ಮರಣಿಸಿದ್ದಾನೆ. ಹಾಗೆ ಮರಣಿಸಿದ ಕೃಷ್ಣನು ಸಾಕ್ಷಾತ್ತು ದೇವರೇ ಆದರೂ ಮಾನವನಾಗಿಯೇ ಪ್ರವರ್ತಿಸಿದ್ದಾನೆ. ಮರಣಿಸಿದಾಗ ಪುನಃ ದೇವರಾಗಿ ಬದಲಾಗಬೇಕಾದ ಆತನು ಹಾಗೆ ಬದಲಾಗಲಿಲ್ಲ. ಇನ್ನೂ ಸ್ವಲ್ಪ ಕಾಲ ಮೂರು ಆತ್ಮಗಳೊಂದಿಗೇ ಕೆಲಸ ಮಾಡಬೇಕೆಂದುಕೊಂಡಿದ್ದಾನೆ. ತಾನು ಸೃಷ್ಠಿ ಆದಿಯಲ್ಲಿನ ಜ್ಞಾನವನ್ನು ಭಗವದ್ಗೀತೆಯಾಗಿ ಭಾರತದೇಶವನ್ನು ಆಯ್ಕೆಮಾಡಿಕೊಂಡು ಭಾರತ ದೇಶದಲ್ಲಿನ ಉತ್ತರ ಪ್ರದೇಶದಲ್ಲಿ ಹೇಳಿದ್ದಾನೆ. ಅಲ್ಲಿಯವರೆಗೂ ದೇವರ ಜ್ಞಾನಕ್ಕೆ ನಿಲಯವಾಗಿದ್ದು, ಇಂದೂ ದೇಶವೆಂದು ಹೆಸರುವಾಸಿಯಾದ ಭಾರತದೇಶದಲ್ಲಿ ಪ್ರಣಾಳಿಕೆ ಬದ್ಧವಾಗಿ ಜ್ಞಾನವನ್ನು ಹೇಳಿ, ಹಾಗೆಯೇ ವ್ಯಾಸನಿಂದ ಗ್ರಂಥರೂಪ ಮಾಡಿಸಿದ್ದಾನೆ. ಆದರೇ ಭಾರತದೇಶದಲ್ಲಿ ಹುಟ್ಟಿರುವ ಭಗವದ್ಗೀತೆ ಐದುಸಾವಿರ ವರ್ಷಗಳ ನಂತರ ಪ್ರಕಾಶಿಸುವಂತೆ ಆತನ ನಿರ್ಣಯ ನಡೆದಿದೆ. ಅಲ್ಲಿಯವರೆಗು ಸುರಕ್ಷಿತವಾಗಿರುವ ದೇಶವು ಭಾರತದೇಶವೆಂದು ತಿಳಿದು ಭಗವದ್ಗೀತೆಯನ್ನು ಭಾರತದೇಶದಲ್ಲಿಯೇ ಹೇಳಿರುವುದಾಗಿದೆ.

ಭಾರತದೇಶವು ದೈವಜ್ಞಾನಕ್ಕೆ ನಿಲಯವೆಂದು, ಹಾಗೆಯೇ ಅಜ್ಞಾನಕ್ಕೆ ಕೂಡಾ ನಿಲಯವೆಂದು ದೇವರಿಗೆ ಚೆನ್ನಾಗಿ ತಿಳಿದಿದೆ. ತಿಳಿದು ಪ್ರಪಂಚ ದೇಶಗಳು

ಎಷ್ಟಿದ್ದರೂ ಅವುಗಳಲ್ಲಿ ಅಲ್ಲದೇ ಭಾರತದೇಶದಲ್ಲಿಯೇ ಭಗವದ್ಗೀತೆಯನ್ನು ಹೇಳಿದ್ದಾನೆ. ಭಾರತದೇಶದಲ್ಲಿ ಭಗವದ್ಗೀತೆ ಮಸಿಬಟ್ಟೆಯಲ್ಲಿ ಸುತ್ತಿಟ್ಟಿರುವ ಮಾಣಿಕ್ಯದಂತೆ ಇರುತ್ತದೆಂದು, ಪುನಃ ತಾನು ಬಂದಾಗ ತನ್ನ ಭಗವದ್ಗೀತೆಯನ್ನು ಕುರಿತು ಹೇಳಿದರೂ ತನ್ನನ್ನು ಯಾರೂ ಗುರುತಿಸಲಾರರೆಂಬ ಉದ್ದೇಶದಿಂದ ಸೃಷ್ಠಿ ಆದಿ ಜ್ಞಾನವನ್ನು ಭಗವದ್ಗೀತೆಯಾಗಿ ಭಾರತದೇಶದಲ್ಲಿ ಇಟ್ಟು ಕೃಷ್ಣನು ಮರಣಿಸಿದ್ದಾನೆ. ಕೃಷ್ಣನು ಮರಣಿಸುತ್ತಾ ಬೇಟೆಗಾರನಿಗೆ ಹೇಳಿರುವ ವಿಷಯಗಳು ಬಹಳ ರಹಸ್ಯವಾದವು. ಇತರರಿಗೆ ತಿಳಿದರೂ ಯಾರೂ ನಂಬುವುದಿಲ್ಲವೆಂಬ ಧೈರ್ಯದಿಂದಲೇ ಬೇಟೆಗಾರನಿಗೆ ಹೇಳಿಹೋಗಿದ್ದಾನೆ. ಆತನು ಹೋಗುತ್ತಾ ಇಸ್ರಾಯೇಲ್ ದೇಶದಲ್ಲಿ ಮುಂಬರುವ ತನ್ನ ಜನ್ಮವನ್ನು ಕುರಿತು ತಿಳಿಸಿ ಹೋಗುವುದೇ ಅಲ್ಲದೇ, ಅದಕ್ಕೆ ತಕ್ಕ ಏರ್ಪಾಟುಗಳನ್ನು ಆಗಿನಿಂದಲೇ ಪ್ರಾರಂಭಿಸಿದಂತೆ ಸ್ವಲ್ಪ ತಿಳಿಯುತ್ತಿದೆ. ಕೃಷ್ಣನು ಮರಣಿಸಿದ ನಂತರ ಆತನು ಮೂರು ಆತ್ಮಗಳಾಗಿ ಇನ್ನೂ ಸ್ವಲ್ಪ ಕಾಲ ಇರಬೇಕೆಂದುಕೊಂಡಿದ್ದಾನೆಂದು ಅಂದುಕೊಂಡಿದ್ದೆವಲ್ಲ! ಅದೇ ವಿಧವಾಗಿ ಇಸ್ರಾಯೇಲ್ ದೇಶ ಸಮೀಪದಲ್ಲಿನ ಒಬ್ಬವ್ಯಕ್ತಿ ಶರೀರದಲ್ಲಿ ಪ್ರವೇಶಿಸಿ ಆ ಶರೀರದ ಮೂಲಕ ತನ್ನ ಭಾವನೆಗಳನ್ನು ಕೆಲವನ್ನು ಪ್ರದರ್ಶಿಸಿದನು. ಈಗ ಹೇಳುವ ಮಾತು ನಂಬಲಾಗದಂತಹ ಮಾತು. ಯಾರೂ ನಂಬುವುದಿಲ್ಲ ಎಂಬ ಧೈರ್ಯದಿಂದಲೇ ಆತ್ಮ ಸತ್ಯವನ್ನು ತಿಳಿಸುತ್ತಿದೆಯೆಂದು ತಿಳಿಯಬಲ್ಲೆವು. ಹಾಗೆ ಮಾನವ ಶರೀರದಲ್ಲಿ ಸೇರಿದ ಕೃಷ್ಣ ಪರಮಾತ್ಮ ಒಂಭತ್ತು ವರ್ಷಗಳು ಆ ಶರೀರದಲ್ಲಿ ಕಳೆದಿದ್ದಾನೆ. ನಂತರ ಆ ಶರೀರದಲ್ಲಿ 135 ವರ್ಷಗಳಿರುವಾಗ ಮರಣಿಸುವುದಾಗಿದೆ. ನಂತರ ಆ ಶರೀರದಲ್ಲಿ 135 ವರ್ಷಗಳು ಬದುಕಿದ್ದಾನೆಂದೂ, ಕೃಷ್ಣ ಶರೀರದಲ್ಲಿ 126 ವರ್ಷಗಳು ಜೀವಿಸಿದ್ದರೇ, ನಂತರ ಒಂಭತ್ತು ವರ್ಷಗಳು ಅಧಿಕವಾಗಿ ಇರುವುದರಿಂದ ಕೃಷ್ಣ ಜನ್ಮ ಒಟ್ಟು 135 ವರ್ಷಗಳು ಬದುಕಿದಂತಾಗಿದೆ. 1+2+6=9 ಆದಾಗ ಕೃಷ್ಣ ಭಗವಾನನು ಶರೀರವನ್ನು ಬಿಟ್ಟಿರುವಾಗ, ಅದೇ ಸಂಖ್ಯೆ ಒಂಭತ್ತು ಆದಾಗ ಅಂದರೇ 1+3+5=9 ಆದಾಗ ಕೃಷ್ಣನು ಸೇರಿರುವ ಎರಡನೆಯ ದೇಹವನ್ನು ಕೂಡಾ ಬಿಟ್ಟು ಹೋಗುವುದು ನಡೆದಿದೆ.

**ಪ್ರಶ್ನೆ :– ಕೃಷ್ಣನು ಮರಣಿಸಿ ಸೂಕ್ಷ್ಮ ಶರೀರದಿಂದ ಮತ್ತೊಂದು ಶರೀರದೊಳಗೆ ಸೇರುವುದು ನಂಬಲಾರದ ಮಾತಾಗಿದೆ. ಆತನು ಪೂರ್ತಿ ಮರಣವನ್ನು ಹೊಂದಲಿಲ್ಲವಾ? ಅಕಾಲಮರಣವನ್ನು ಹೊಂದಿದ್ದಾನಾ? ದೆವ್ವ ಇತರ ಮನುಷ್ಯರಲ್ಲಿ ಸೇರಿದಂತೆ ಸೇರಬೇಕಾದ ಅವಶ್ಯಕತೆ ಭಗವಂತನಾದ ಕೃಷ್ಣನಿಗೆ ಯಾಕೆ ಬಂದಿದೆ? ನಮ್ಮಲ್ಲಿರುವ ಆನೇಕ ಸಂಶಯಗಳಿಗೆ ನೀವು ಉತ್ತರ ಹೇಳಬೇಕು?**

**ಉತ್ತರ :–** ಕೃಷ್ಣನು ಸಾಧಾರಣವಾದ ಮನುಷ್ಯನಲ್ಲ. ಆತನು ಪ್ರತ್ಯೇಕವಾಗಿ ಬಂದಿರುವ ಭಗವಂತನು. ಭಗವಂತನ ಶರೀರದಲ್ಲಿ ಮೂರು ಆತ್ಮಗಳಿದ್ದರೂ, ಆತ್ಮ ತನ್ನ ಕೆಲಸವನ್ನು ತಾನು ಮಾಡಿದರೂ, ಜೀವಾತ್ಮ ಆದವನು ಕರ್ಮವಿಲ್ಲದವನು, ಪ್ರತ್ಯೇಕವಾದವನು. ಆತನಿಗೆ ಎಲ್ಲರಹಾಗೆ ಮರಣವಿರುವುದಿಲ್ಲ. **'ಜಗವನ್ನೇ ಅರಿತ ಬ್ರಾಹ್ಮಣನಿಗೆ ಜನಿವಾರವೇಕೆ'** ಎನ್ನುವಂತೆ ಆತನಿಗೆ ಮರಣಗಳು ಅನ್ವಯಿಸುವುದಿಲ್ಲ. ಹಾಗೆಯೇ ಎಲ್ಲರ ಹಾಗೆ ಜನ್ಮ ಕೂಡಾ ಅನ್ವಯಿಸುವುದಿಲ್ಲ. ತಂದೆ ವೀರ್ಯ ಕಣದಿಂದ ಸಂಬಂಧವಿಲ್ಲದೇ ಹುಟ್ಟಿರುವ ಆತನಿಗೆ ಎಲ್ಲರಹಾಗೆ **'ಹುಟ್ಟು(ಜನ್ಮ)' ಹೇಗಿಲ್ಲವೋ ಹಾಗೆಯೇ ಆತನಿಗೆ ಎಲ್ಲರಹಾಗೆ 'ಜೀವಿಯು ಶರೀರವನ್ನು ಬಿಟ್ಟು ಸಾಯುವುದಿಲ್ಲ'**. ಆತನು ಕರ್ಮದೊಂದಿಗೆ ಸಂಬಂಧ ವಿಲ್ಲದವನು. ಒಂದುಕಡೆ ಮರಣಿಸಿ ಮತ್ತೊಂದು ಕಡೆಗೆ ಹೋಗುವುದಕ್ಕೆ ಆತನಿಗೆ ಕರ್ಮವಿಲ್ಲ. ಆತನು ಸ್ವಯಂ ನಿರ್ಣಯದ ಪ್ರಕಾರ ಜನ್ಮವಿರುತ್ತದೆ ಮತ್ತು ಸಾವು ಇರುತ್ತದೆ. ಆತನ ಪ್ರಸ್ತುತ ಭಗವಂತನಾದರೂ ಆತನೇ ಮೂರನೆಯ ಶಕ್ತಿಯಾದ ಪರಮಾತ್ಮ (ದೇವರು). ಆದ್ದರಿಂದ ಆತನನ್ನು ಶಾಸಿಸುವ ಶಕ್ತಿ ಯಾವುದೂ ಇಲ್ಲ. ಆತನ ಧರ್ಮ ಸಂಸ್ಥಾಪನೆಗಾಗಿ ಸ್ವಯಂ ನಿರ್ಣಯವನ್ನು ತೆಗೆದುಕೊಳ್ಳುವನು. ಭವಿಷ್ಯತ್ತಿನ ಪ್ರಣಾಳಿಕೆಯನ್ನು ಅನುಸರಿಸಿ ಆತನು ಮಾಡುವ ಕೆಲಸವಿರುತ್ತದೆ. ತನ್ನ ಎರಡನೆಯ ಜನ್ಮವನ್ನು ಕುರಿತು ಬೇಟೆಗಾರನಿಗೆ ಸ್ವಲ್ಪ ಸಮಾಚಾರವನ್ನು ತಿಳಿಸಿದ ಕೃಷ್ಣನು, ಅದೇ ಸಮಾಚಾರ ನಿಮಿತ್ತ ಇಸ್ರಾಯೇಲ್ ದೇಶ ಸಮೀಪದಲ್ಲಿರುವ ಒಬ್ಬ ಪ್ರವಕ್ತ ಶರೀರದೊಳಗೆ ಪ್ರವೇಶಿಸಿದ್ದಾನೆ. ಅಂದಿನ ಕಾಲದಲ್ಲಿ ಜ್ಞಾನ ಸಮಾಚಾರವನ್ನು ತಿಳಿಸುವ ವ್ಯಕ್ತಿಯನ್ನು ಪ್ರವಕ್ತ ಎನ್ನುವುದು

ಸಹಜ. ಅದು ಸ್ವಲ್ಪ ಜ್ಞಾನವಾದರೂ ಆಗಬಹುದು ಅಥವಾ ಹೆಚ್ಚು ಜ್ಞಾನವಾದರೂ ಆಗಬಹುದು. ಒಟ್ಟಾರೆ ಜ್ಞಾನ ಸಮಾಚಾರವನ್ನು ತಿಳಿಸುವ ಪ್ರವಕ್ತನಾಗಿರುವ ವ್ಯಕ್ತಿಗೆ ಕೃಷ್ಣನ ಮರಣ ಸಮಯಕ್ಕೆ ಆತನ ಮರಣ ಕೂಡಾ ನಿರ್ಣಯಿಸಲ್ಪಟ್ಟಿರುತ್ತದೆ. ಆತನ ಹೆಸರು **"ಮೋಷೇ"** ಎಂದು ಹೇಳಲ್ಪಟ್ಟಿರುತ್ತದೆ. ಮೋಷೇ ಪ್ರವಕ್ತ ಆ ಸಮಯಕ್ಕೆ ಮರಣಿಸುವನೆಂಬ ವಿಷಯ ಕೃಷ್ಣನಿಗೆ ಹೊರತು ಯಾರಿಗೂ ತಿಳಿದಿಲ್ಲ. ಮೋಷೇಗೂ ಕೂಡಾ ತಿಳಿದಿಲ್ಲ. ಮೋಷೇ ಸಾಧಾರಣ ಮನುಷ್ಯನೇ ಆಗಿರುವುದರಿಂದ ತನ್ನ ಮರಣವನ್ನು ಕುರಿತು ಮೋಷೇಗೆ ತಿಳಿದಿಲ್ಲ.

ಸರ್ವ ಸೃಷ್ಠಿಕರ್ತನಾದ ಅಲ್ಲಾನೇ (ದೇವರೇ) ಮೋಷೇಯನ್ನು ಆ ಪ್ರಾಂತದಲ್ಲಿ ಹೆಸರು ಹೊಂದಿದ ಪ್ರವಕ್ತನಾಗಿ ಮಾಡಿ ಇಟ್ಟಿದ್ದಾನೆ. ಮೋಷೇ 54 ವರ್ಷಗಳು ಬದುಕಿದ್ದಾನೆ. ಮೋಷೇ 54 ವರ್ಷಗಳು ಬದುಕುವಂತೆ, ಮೋಷೇ ಮರಣಿಸುವ ಸಮಯಕ್ಕೆ ಕೃಷ್ಣನು ಮರಣಿಸುವಂತೆ ಮೊದಲೇ ನಿರ್ಣಯವಾಗಿರುವಂತೆ ಯಾರಿಗೂ ತಿಳಿದಿಲ್ಲ. ಕೃಷ್ಣನಿಗೆ ಮಾತ್ರ ಎಲ್ಲಾ ತಿಳಿದೇ ನಡೆದಿವೆ. ಆತನು ಸ್ವತಃವಾಗಿ ದೇವರೇ ಆಗಿರುವುದರಿಂದ ಆತನಿಗೆ ಎಲ್ಲಾ ತಿಳಿದಿವೆ. ಮೋಷೇ ಮರಣಿಸಿದ ಕ್ಷಣದಲ್ಲಿಯೇ ಕೃಷ್ಣನು ಮರಣಿಸಿ ಮೋಷೇ ಶರೀರದಲ್ಲಿ ಪ್ರವೇಶಿಸುವಂತೆ ನಿರ್ಣಯಿಸಿಕೊಂಡಿದ್ದಾನೆ. ಮೋಷೇ ಪ್ರವಕ್ತ ಮರಣಿಸುವುದು, ಕೃಷ್ಣ ಭಗವಾನ್ ಮರಣಿಸುವುದು ಒಂದೇ ಸಲ ನಡೆದಿದೆ. ಕೃಷ್ಣನು ತನ್ನ ಶರೀರದಲ್ಲಿ ಇಲ್ಲದಂತೆ ಹೋಗಿ ಮೋಷೇ ಶರೀರದಲ್ಲಿ ಪ್ರತ್ಯಕ್ಷವಾಗಿದ್ದಾನೆ. ಹಾಗೆ ಮೋಷೇ ಶರೀರದಲ್ಲಿ ಮರಣಿಸಿದಂತೆ ಯಾರೂ ಗುರುತಿಸಲಾರರು. ಮೋಷೇ ಮರಣಿಸಿದರೂ ಅದರಲ್ಲಿ ಕೃಷ್ಣನು ಇರುವುದರಿಂದ ಮೋಷೇ ಸಾಧಾರಣವಾಗಿ ಬದುಕೇ ಇದ್ದಾನೆಂದು ಎಲ್ಲರೂ ಅಂದುಕೊಂಡಿದ್ದಾರೆ. ಕೃಷ್ಣನು ಮೋಷೇಯ ಹಾಗೇ ಇದ್ದು ಜ್ಞಾನವನ್ನು ಹೇಳುತ್ತಿರುವುದರಿಂದ ಕೃಷ್ಣನನ್ನು ಯಾರೂ ಗುರುತಿಸಲಿಲ್ಲ, ಎಲ್ಲರೂ ಮೋಷೇನೇ ಮಾತನಾಡುತ್ತಿದ್ದಾನೆಂದು ಅಂದುಕೊಳ್ಳುವುದು ನಡೆದಿದೆ. ಕೃಷ್ಣನು ಮರಣಿಸಿದಂತೆ ಭಾರತದೇಶದಲ್ಲಿರುವವರಿಗೆ ತಿಳಿದರೂ, ಆತನು ಮೋಷೇಯಾಗಿ ಇತರ ದೇಶದಲ್ಲಿ ಇದ್ದಾನೆಂದು ಮಾತ್ರ ತಿಳಿದಿಲ್ಲ.

**ప్రశ్న :– ప్రపంచదల్లి ఎష్టోజన ప్రవక్తరిరువాగ మోషే ప్రవక్త శరీరవన్నే కృష్ణను యాకె ఆయ్కె మాడికొండిద్దానే?**

**ఉత్తర :–**ఇదు ఒళ్ళెయ ప్రశ్నెయే? సమయానుకూలవాగి కేళబేకాగిరువ ప్రశ్నెయె. ఇదక్కె నన్న ఉత్తర ఏనెందరే కృష్ణను భగవద్గీతెయన్ను హేళిద నంతర వ్యాస మహర్షి కృష్ణను హేళిరువ జ్ఞానవన్ను గ్రంథ రూపవాగి మాడువుదక్కె సుమారు ఎరడు వర్షగళ కాల హిడిదిదె. స్వచ్ఛవాద కలబెరకె ఇల్లద భగవద్గీతె ఆగ ఇత్తు. వ్యాసను మరణిసిద నంతర కెలవరు స్వార్థవరరు అవర స్వార్థదింద కెలవు శ్లోకగళన్ను సేరిసువుదు నడెదిదె. మొదలు తయారాగిరువుదు కాలుషిత శ్లోకగళిల్లద భగవద్గీతెయాగి ఇత్తు. కృష్ణను 90 వర్షగళ వయస్సినల్లి అర్జుననిగె సృష్టి ఆదియల్లిన జ్ఞానవన్ను హేళిదరే, నంతర ఎరడు వర్షగళ కాలదల్లి అదు గ్రంథరూపవాగి బదలాదాగ, అదర హెసరు 'భగవద్గీతె' ఎందు హేళికొండిద్దేవె. మోషే 54 వర్షగళు బదుకిదరే, కృష్ణనిగె 92 వర్షగళ వయస్సినల్లి భగవద్గీతె తయారాగిదె. భగవద్గీతె తయారాద సమయక్కె మోషే వయస్సు సరియాగి 20 వర్షగళిరుత్తవె. 20 వర్షగళ నంతర 34 వర్షగళు మోషే బదుకిద్దానె. హాగెయే కృష్ణను కూడా 92 వర్షగళ నంతర 34 వర్షగళే బదుకిద్దానె.

మోషేగె ఇప్పత్తు (20) వర్షగళ వయస్సినల్లి ఒందు శుభదిన ఏర్పట్టితు. అందినింద మోషే ఆగాగ స్వల్ప జ్ఞానవన్ను హేళుత్తా ఒళ్ళెయ వక్తనాగి బదలాగి హోదను. నంతర ఆతనన్ను 'ప్రవక్త' ఎందు ఎల్లరూ కరెదరు. 20 వర్షగళింద ఆతన జీవనదల్లి ఒందు హొస బెళకు బందిదె. 92నెయ వర్షదల్లి కృష్ణనల్లి కూడా ఒందు తృప్తి ఏర్పట్టిదె. ఆగ నడెద విశేష ఏనెందరే! మోషేగె 20 వర్షగళు కళెయువ కాలదల్లి ఒందు దిన భానువార రాత్రి మధ్యె రాత్రి కళెద

ಸಮಯದಲ್ಲಿ ಕನಸು ಕಾಣುವುದು ನಡೆದಿದೆ. ಆ ಕನಸಿನಲ್ಲಿ ಕೃಷ್ಣನು ಕಾಣಿಸಿ ಗ್ರಂಥವಾದ ತನ್ನ ಭಗವದ್ಗೀತೆಯನ್ನು ಮೋಷೇಗೆ ಕೊಡುವುದು ನಡೆದಿದೆ. ಮೋಷೇ ತನ್ನ ಕನಸಿನಲ್ಲಿ ಕೃಷ್ಣನನ್ನು ನೋಡಿದರೂ ಕೃಷ್ಣನು ಯಾರೋ ತನಗೆ ತಿಳಿದಿಲ್ಲ. ಆದರೇ ಕನಸಿನಲ್ಲಿ ಕಾಣಿಸಿದ ಕೃಷ್ಣನು ಎಷ್ಟೋ ತೇಜಸ್ಸು ಹೊಂದಿರುವುದನ್ನು ನೋಡಿರುವ ಮೋಷೇ ಆತನು ನಿಜವಾಗಿ ದೇವರೆಂದು ನಂಬಿದನು. ತೇಜಸ್ಸಿನಿಂದ ಕಾಣಿಸಿದ ಕೃಷ್ಣನು ಮೋಷೇಗೆ ಭಗವದ್ಗೀತೆ ಗ್ರಂಥವನ್ನು ಕೊಟ್ಟು ಇದು **'ತೌರಾತ್'** ಗ್ರಂಥವೆಂದು ಹೇಳುವುದಾಗಿದೆ. ಮೋಷೇ ಕನಸಿನಲ್ಲಿ ಗ್ರಂಥವನ್ನು ತೆಗೆದುಕೊಂಡು ಎದೆಗೆ ಅಪ್ಪಿಕೊಂಡನು. ಅಷ್ಟೇ! ಆತನ ಮೆದುಳಿನಲ್ಲಿ ಹೊಳಪು ಹೊಳೆದಂತಾಯಿತು. ಮೋಷೇಗೆ ಆಕಸ್ಮಿಕವಾಗಿ ಎಚ್ಚರಿಕೆ ಆಯಿತು. ಎಚ್ಚರಿಕೆಯಾದ ನಂತರ ಕೂಡಾ ಎದೆಬಡಿತ ವೇಗವಾಗಿ ಹೊಡೆದುಕೊಳ್ಳುತ್ತಿರುವಾಗ, ತಲೆಯಲ್ಲಿ ಯಾವುದೋ ಹೊಸ ಅನುಭೂತಿಯನ್ನು ಹೊಂದಿದ ಸಂತೋಷ ಉಂಟಾಯಿತು. ನಡೆದಿರುವುದೇನು? ಎಂದು ಕಣ್ತೆರೆದು ನೋಡಿದಾಗ ತನ್ನ ಕೈಗಳಲ್ಲಿ ಗ್ರಂಥ ಕಾಣಿಸಿತು. ಅದೇ ತೌರಾತ್ ಗ್ರಂಥ. ಅದರ ಮೇಲೆ ಅಂದಿನ ಭಾಷೆಯಲ್ಲಿ **'ತೌರಾತ್'** ಎಂದು ಇರುವುದನ್ನು ಮೋಷೇ ನೋಡಿದನು. ಆ ವಿಧವಾಗಿ ಮೋಷೇಗೆ ತೌರಾತ್ ಗ್ರಂಥ ಲಭ್ಯವಾಯಿತು. ಅಲ್ಲಿನ ತೌರಾತ್ ಗ್ರಂಥವೇ ಇಲ್ಲಿನ ಭಗವದ್ಗೀತೆ.

**'ತೌರಾತ್' ಎಂದರೇ ಮೂರು ಕತ್ತಲೆಯ ರಾತ್ರಿಗಳೆಂದು ಅರ್ಥ**. ಮೂರು ಕಾಣಿಸದ ಆತ್ಮಗಳ ಒಂದು ಜ್ಞಾನವಿರುವುದರಿಂದ, ಮೂರು ಆತ್ಮಗಳ ಜ್ಞಾನ ರಹಸ್ಯವಾದುದು ಆದ್ದರಿಂದ, ಮೂರು ಆತ್ಮಗಳನ್ನುದ್ದೇಶಿಸಿ ತೌರಾತ್ ಎಂದು ಭಗವದ್ಗೀತೆಗೆ ಕೃಷ್ಣನೇ ಹೆಸರು ಇಟ್ಟಿದ್ದಾನೆಂದು ತಿಳಿಯುತ್ತಿದೆ. ಇದೆಲ್ಲಾ ಓದುವವರಿಗೆ ಒಂದು ಕಥೆಯಾಗಿ ಇದ್ದರೂ, ನಂಬಲಾರದಂತಿದ್ದರೂ ಇದು ನೂರಕ್ಕೆ ನೂರರಷ್ಟು ನಡೆದ ಸತ್ಯ. ನಂಬಬೇಕೆಂದು ಯಾರನ್ನೂ ಬಲವಂತ ಮಾಡುತ್ತಿಲ್ಲ. ಸತ್ಯವನ್ನು ಹೇಳುವುದು ತಪ್ಪುತ್ತಿಲ್ಲ, ಆದ್ದರಿಂದ ಸಮಯ ಆಸನ್ನವಾದಾಗ ಹೇಳವುದು ತಪ್ಪಲಿಲ್ಲ. ಹಾಗೆಂದು ಮೇಲ್ನೋಟಕ್ಕೆ ಕಾಣಿಸುವ

ನನ್ನನ್ನು ಈ ವಿಷಯಕ್ಕೆ ಹೊಣೆ ಮಾಡಬೇಡಿ. ನಿಜವಾಗಿ ನಿಮಗೆ ಎಷ್ಟು ತಿಳಿದಿದೆಯೋ ನನಗೂ ಅಷ್ಟೇ ತಿಳಿದಿದೆ. ಈಗ ಇದು ನಿಮಗೇ ಅಲ್ಲ ನನಗು ಕೂಡ ಹೊಸ ವಿಷಯವೇ. ಹೀಗೆ ನಮಗೆ ತಿಳಿಯದ ಎಷ್ಟೋ ಹೊಸ ವಿಷಯಗಳು ಆತ್ಮಗೆ ತಿಳಿದಿವೆ. ಆತ್ಮ ತಿಳಿಸಿದರೇನೆ ಈಗ ನಮಗೆ ತಿಳಿಯುತ್ತಿದೆ.

ತೌರಾತ್ ಗ್ರಂಥವು ಮೋಷೇಗೆ ಲಭ್ಯವಾಗಿದೆ ಎಂದು ತಿಳಿದಿದೆಯಲ್ಲ! ಇಲ್ಲೇ ಇನ್ನೊಂದು ಹೊಸ ರಹಸ್ಯವಿದೆ. ಆದೇನೆಂದರೇ! ತೌರಾತ್ ಗ್ರಂಥವನ್ನು ಮೋಷೇ ಹೊರತು ಯಾರೂ ನೋಡಿಲ್ಲ. ತೌರಾತ್ ಗ್ರಂಥವು ಮೋಷೇಗೆ ಮಾತ್ರವೇ ಕಾಣಿಸುತ್ತಿತ್ತು, ಇತರರಿಗೆ ಕಾಣಿಸುತ್ತಿರಲಿಲ್ಲ. ಆ ವಿಧವಾಗಿ ತೌರಾತ್ (ಭಗವದ್ಗೀತೆ) ಗ್ರಂಥವು ಅಲ್ಲಿನ ಮನುಷ್ಯರಿಗೆ ರಹಸ್ಯ ಗ್ರಂಥವಾಗಿದೆ ಆ ವಿಷಯ ಮೋಷೇಗು ಕೂಡಾ ಅರ್ಥವಾಗಿದೆ. ಗ್ರಂಥದಲ್ಲಿನ ಜ್ಞಾನವನ್ನು ರಾತ್ರಿ ಹೊತ್ತು ಓದಿಕೊಂಡು ಹಗಲು ಇತರರಿಗೆ ಹೇಳುತ್ತಿದ್ದನು. ಹೇಳುವುದು ಭಗವದ್ಗೀತೆಯಲ್ಲಿನ ಜ್ಞಾನವಾದ್ದರಿಂದ ಶಾಸ್ತ್ರಬದ್ಧವಾಗಿ ಇರುತ್ತದೆ. ಜ್ಞಾನಕ್ಕೆ **'ಒರೆಕಲ್ಲು'** (ಸಾಣಿಕಲ್ಲು) ಆಗಿರುತ್ತದೆ. ತೌರಾತ್ ಜ್ಞಾನದಿಂದ ಯಾವುದು ಜ್ಞಾನವೋ ಯಾವುದು ಅಜ್ಞಾನವೋ ನಿರ್ಧಾರಿಸಿ ಹೇಳುವುದಕ್ಕೆ ಸಾಧ್ಯವಾಗುತ್ತಿತ್ತು. ಆದ್ದರಿಂದ ತೌರಾತ್ ಗ್ರಂಥಕ್ಕೆ **'ಒರೆಕಲ್ಲು'** ಎಂಬ ಹೆಸರು ಸಾರ್ಥಕವಾಯಿತು. ಅದೇ ಒರೆಕಲ್ಲೇ ನಮ್ಮಬಳಿ ಇರುವ ಭಗವದ್ಗೀತೆ. ಆ ದಿನಗಳಲ್ಲಿ ಮೋಷೇಗೆ ಮಾತ್ರ ಕಾಣಿಸಿ ಇತರರಿಗೆ ಕಾಣಿಸದ ಭಗವದ್ಗೀತೆ ಈದಿನ ನಮ್ಮಬಳಿ ಜ್ಞಾನಿಗಳಿಗು, ಅಜ್ಞಾನಿಗಳಿಗು ಕಾಣಿಸುತ್ತಿದೆ. ಈ ದಿನ ಗ್ರಂಥ ಕಾಣಿಸಿದರೂ ಅದರಲ್ಲಿನ ಜ್ಞಾನವು ಬಹಳಜನರಿಗೆ ಕಾಣಿಸುತ್ತಿಲ್ಲ. ಅಂದರೇ ಅರ್ಥವಾಗುತ್ತಿಲ್ಲ.

ಮೋಷೇ ಹೇಳುವ ಜ್ಞಾನಕ್ಕೆ ಬಹಳಜನ ಆಕರ್ಷಿತರಾಗಿ ಅತನು ಹೇಳುವ ಜ್ಞಾನವನ್ನು ತಿಳಿಯುತ್ತಿದ್ದರು. ಮೋಷೇ ತನಗೆ ತೌರಾತ್ ಗ್ರಂಥ ಲಭ್ಯವಾದಾಗಿನಿಂದ 34 ವರ್ಷಗಳು ಗ್ರಂಥದಲ್ಲಿನ ಜ್ಞಾನವನ್ನೇ ಹೇಳಿದ್ದಾನೆ. ಮೋಷೇ ಹೇಳುವ ಜ್ಞಾನವು ತೌರಾತ್ ಗ್ರಂಥದೊಳಗಿನದೆಂದು ಪ್ರಜೆಗಳಿಗೆ ತಿಳಿದಿಲ್ಲ. ಮೋಷೇಗೆ 54 ವರ್ಷಗಳು ಕಳೆದ ನಂತರ ಮೋಷೇ ಶರೀರದಲ್ಲಿ

ಇಲ್ಲದೇ ಹೋಗುವುದೂ, ಅದರಲ್ಲಿ ಸ್ವತಃವಾಗಿ ಕೃಷ್ಣನೇ ಇರುವುದು ಇತರರಿಗೆ ಯಾರಿಗೂ ತಿಳಿದಿಲ್ಲ. ಕೃಷ್ಣನು ಒಂಭತ್ತು ವರ್ಷಗಳು ಮೋಷೇ ಶರೀರದಲ್ಲಿ ಇದ್ದು, ಮೋಷೇ ಹೇಳಿದಂತೆಯೇ ನಟಿಸಿ ಮುಂಬರುವ ಯೇಸುನನ್ನು ಕುರಿತು ಆತನ ಜೀವನದಲ್ಲಿ ನಡೆಯುವ ಕೆಲವು ಸಂಘಟನೆಗಳನ್ನು ಕುರಿತು ಹೇಳುವುದು ನಡೆದಿದೆ. ಮೋಷೇ (ಕೃಷ್ಣನು) ಹೇಳಿರುವ ಸಂಘಟನೆಗಳು ಯೇಸು ಜೀವನದಲ್ಲಿ ನೆರವೇರಿದಂತೆ ನಾಲ್ಕು ಸುವಾರ್ತೆಗಳಲ್ಲಿ ತಿಳಿಯುತ್ತಿದೆ. ಮೋಷೇ ಯೇಸುನನ್ನು ಕುರಿತು ಹೇಳಿರುವ ಕೆಲವು ಸಂಘಟನೆಗಳನ್ನು ತಿಳಿದುಕೊಂಡ ಯೆಷಯಾ ಅವೇ ಸಂಘಟನೆಗಳನ್ನೇ ತನ್ನ ಲೇಖನೆಗಳಲ್ಲಿ ಬರೆದಿದ್ದಾರೆ. ಮೋಷೇ ತೌರಾತ್ ಗ್ರಂಥ ಜ್ಞಾನವನ್ನು ಹೇಳುವುದರಿಂದ ಆತನು ಧರ್ಮ ಶಾಸ್ತ್ರವನ್ನು ಹೇಳಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಮೋಷೇ ಸ್ವತಃವಾಗಿ ಧರ್ಮ ಶಾಸ್ತ್ರವನ್ನು ಹೇಳಿದ್ದಾನೆಂದು ಅಂದುಕೊಂಡಿದ್ದಾರೆ. ಮೋಷೇಗೆ ಒಬ್ಬನಿಗೇ ತಿಳಿದಿರುವ ತೌರಾತ್‌ನ್ನು ಮೋಷೇ ನಂತರ ಯಾರೂ ಅದನ್ನು ನೋಡಲಿಲ್ಲ. ಮೋಷೇ ಹೊರತು ತೌರಾತ್ ಗ್ರಂಥವನ್ನು ನೋಡಿರುವ ಎರಡನೆಯ ವ್ಯಕ್ತಿ ಇಲ್ಲವೆಂದೇ ಹೇಳಬಹುದು.

ಕೃಷ್ಣನು ಮೋಷೇ ಶರೀರದಲ್ಲಿ ಒಂಬತ್ತು ವರ್ಷಗಳಿಂದ ಯೇಸುನನ್ನು ಕುರಿತು ಮೊದಲೇ ಹೇಳುವುದು, ಆ ವಿಷಯಗಳನ್ನು ನಂತರ ತಿಳಿದ ಪ್ರವಕ್ತರು ಲೇಖನಗಳಾಗಿ ಬರೆಯುವುದು ನಡೆದಿದೆ. ಕೃಷ್ಣನು 34 ವರ್ಷಗಳ ಮೊದಲೇ ಭಗವದ್ಗೀತೆಯನ್ನು ಮೋಷೇಗೆ ಕೊಡುವುದರಿಂದ, ಆತನ ಶರೀರದೊಳಗೆ ಬಂದು ಮಾತನಾಡಬೇಕೆಂದು ನಿರ್ಣಯಿಸಿಕೊಂಡಿದ್ದಾನೆ. ಮೋಷೇಯಲ್ಲಿದ್ದ ಒಂಬತ್ತು ವರ್ಷಗಳ ನಂತರ ಕೃಷ್ಣನು ಶರೀರವನ್ನು ಬಿಟ್ಟು ಮೂರು ಆತ್ಮಗಳು ಏಕವಾಗಿ ದೇವರಾಗಿ ಬದಲಾಗಿದ್ದಾನೆ. ಅದೇ ದೇವರೇ ಮೂರು ಸಾವಿರ ವರ್ಷಗಳ ನಂತರ ಯೇಸುವಾಗಿ ಬರುವುದು ನಡೆದಿದೆ. ಆದರೇ ಆತನನ್ನು ಇಂಥವನೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಕೆಲವರು ದೇವರ ಕುಮಾರನೆಂದು ಹೇಳಿದ್ದಾರೆ. ಕೆಲವರು ದೇವರ ದೂತನೆಂದು ಹೇಳಿದ್ದಾರೆ.

ಅಷ್ಟು ಹೊರತುಪಡಿಸಿ ಶರೀರದಿಂದ ಬಂದವನೇ ದೇವರೆಂದು, ಯಾರೂ ತಿಳಿಯಲಾರದೆ ಹೋಗಿದ್ದಾರೆ. ಯೇಸು ನಂತರ ಯೇಸು ಹೇಳಿರುವ ಮಾತುಗಳನ್ನು ಅನುಸರಿಸಿ ತಯಾರಾದ ಗ್ರಂಥ ಇಂಜೀಲು. ಇಂಜೀಲು ಗ್ರಂಥವನ್ನು ಬೈಬಲ್ ಗ್ರಂಥವೆನ್ನುತ್ತಾರೆ. ಇಂಜೀಲು ಗ್ರಂಥವು ತೌರಾತ್ ಗ್ರಂಥವನ್ನು ಅನುಸರಿಸಿ ತಯಾರಾಗಿದೆ. ಇಂಜೀಲ್‌ನಲ್ಲಿನ ಜ್ಞಾನವು ತೌರಾತ್‌ನಲ್ಲಿನ ಜ್ಞಾನವೇ ಎಂದು ಹೇಳಬಹುದು. ಈ ವಿಷಯವನ್ನು ಅಂತಿಮ ದೈವಗ್ರಂಥ ಖುರಾನ್ ಸೂರಾ 5, ಆಯತ್ 46ರಲ್ಲಿ ಇದೆ. **(5-46) "ನಾವು ಮರ್ಯಮ್ ಕುಮಾರನು ಈಸಾನನ್ನು (ಯೇಸುನನ್ನು) ಕಳುಹಿಸಿದ್ದೇವೆ. ಆತನು ತನಗೆ ಪೂರ್ವ ಬಂದಿರುವ ತೌರಾತ್ ಗ್ರಂಥವನ್ನು ಸತ್ಯವೆಂದು ದೃಢಪಡಿಸುವವನು. ನಾವು ಆತನಿಗೆ ಇಂಜೀಲು (ಬೈಬಲ್) ಗ್ರಂಥವನ್ನು ಕೊಟ್ಟಿದ್ದೇವೆ. ಅದರಲ್ಲಿ ಮಾರ್ಗದರ್ಶಕ, ಜ್ಯೋತಿ ಇದ್ದವು. ಅದು ತನಗೆ ಮೊದಲಿರುವ ತೌರಾತ್ ಗ್ರಂಥವನ್ನು ದೃಢಪಡಿಸುವುದು. ಅಷ್ಟೇಅಲ್ಲದೇ ಅದು ದೈವಭೀತಿ ಇರುವವರಿಗೆ ಮಾರ್ಗದರ್ಶಿನಿಯಾಗಿ ಇರುತ್ತಿತ್ತು".**

ಭಾರತದೇಶದಲ್ಲಿ ಹುಟ್ಟಿರುವ ಭಗವದ್ಗೀತೆ ಇತರ ದೇಶದಲ್ಲಿ ತೌರಾತ್‌ಆಗಿ ಹೇಳಲ್ಪಟ್ಟಿದೆ. ಆದರೆ ಅದು ಮೋಷೇಗೆ ಒಬ್ಬಿನಿಗೆ ಹೊರತು ಎಲ್ಲರಿಗೂ ಸಿಗದ ಹಣ್ಣಾಗಿದೆ. ಆದ್ದರಿಂದ ತೌರಾತ್ ಗ್ರಂಥದ ಹೆಸರು ಕೇಳಿರುವವರೇ ಹೊರತು, ಅದನ್ನು ನೋಡಿರುವವರು ಯಾರೂ ಇಲ್ಲ. ಇಂಜೀಲು ಗ್ರಂಥದಲ್ಲಿ ತೌರಾತ್ ಜ್ಞಾನವಿದೆಯೆಂದು ಖುರಾನ್ ಗ್ರಂಥದಲ್ಲಿ ಬರೆಯಲಾಗಿರುವುದನ್ನು ನೋಡಿದ್ದೇವೆ. ಅಷ್ಟೇಅಲ್ಲದೇ ತೌರಾತ್ ಗ್ರಂಥದ ನಂತರ ಬಂದಿರುವ ಇಂಜೀಲ್‌ಗೆ ಅಲ್ಲದೇ ಖುರಾನ್‌ಗೆ ಕೂಡಾ ಆದರ್ಶವಾಗಿದೆ ಎಂಬ ವಿಷಯವು ಅಂತಿಮ ದೈವಗ್ರಂಥದಲ್ಲಿಯೇ ಇದೆ. ಸೂರಾ 5, ಆಯತ್ 44ನ್ನು ನೋಡಿರಿ **(5-44) "ನಾವು ತೌರಾತ್ ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶನ, ಜ್ಯೋತಿ ಇವೆ. ತೌರಾತ್ ಗ್ರಂಥ ಆಧಾರವಾಗಿಯೇ ಮುಸ್ಲಿಮ್‌ರಾದ ಪ್ರವಕ್ತರು, ರಬ್ಬಾನೀಗಳು, ಧರ್ಮಜ್ಞರು, ಯೂದರ ಸಮಸ್ಯೆಗಳನ್ನು ಪರಿಹರಿಸುತ್ತಿದ್ದರು." (5-48) "ನಾವು ನಿನ್ನ ಸಲುವಾಗಿ ಈ ಗ್ರಂಥವನ್ನು**

**(ಖುರಾನ್‌ನನ್ನು) ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತದೆ. ನಿನ್ನಬಳಿ ಬಂದಿರುವ ಸತ್ಯವನ್ನು ಬಿಟ್ಟು ಅವರ(ಮನುಷ್ಯರ) ಮನಇಚ್ಛೆಯನ್ನು ಅನುಸರಿಸಬೇಡ." (5-68) "ನೀವು ತೌರಾತ್‌ನ್ನು, ಇಂಜೀಲನ್ನು (ಭಗವದ್ಗೀತೆ, ಬೈಬಲ್) ನಿಮ್ಮ ಪ್ರಭುಕಡೆಯಿಂದ ನಿಮ್ಮಬಳಿಗೆ ಕಳುಹಿಸಲಾದ ಖುರಾನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಲ್ಲೂ ಇಲ್ಲದಂತೆಯೆ."**

'ಅಂತಿಮ ದೈವಗ್ರಂಥ ಖುರಾನ್' ನಲ್ಲಿ ಬರೆದಿರುವ ವಾಕ್ಯಗಳನ್ನು ಅನುಸರಿಸಿ ನಂತರ ಬಂದಿರುವ ಎರಡು ದೈವಗ್ರಂಥಗಳಲ್ಲಿ ಮೊದಲ ದೈವಗ್ರಂಥವೊಂದರ ಜ್ಞಾನವೇ ಇದೆಯೆಂದು ಅರ್ಥವಾಗುತ್ತಿದೆ. ಆದ್ದರಿಂದ ಮೂರು ದೈವಗ್ರಂಥಗಳನ್ನು ಓದದೆಯೇ ಯಾವ ಧರ್ಮದಲ್ಲೂ ಇಲ್ಲದಂತೆಯೇ ಎಂದು ಕೂಡಾ ಹೇಳಿದ್ದಾರೆ. ತೌರಾತ್ ಗ್ರಂಥವೊಂದರ ಹೆಸರನ್ನು ಮೋಷೇ ಕೂಡಾ ಹೊರಗೆ ಹೇಳಲಿಲ್ಲ ಅದು ರಹಸ್ಯವಾಗಿ ನಿಂತುಹೋಗಿರುವ ಗ್ರಂಥವೆಂದು ಹೇಳಿದ್ದಾನೆ. ತೌರಾತ್ ಗ್ರಂಥವನ್ನು ಮೋಷೇಗೆ ಕೊಟ್ಟಾಗ ಗ್ರಂಥದ ಹೆಸರು ತೌರಾತ್ ಎಂದು ಮೋಷೇ ಕೇಳಿಸಿಕೊಂಡನು. ಆ ಗ್ರಂಥವು ಸ್ವಪ್ನದಲ್ಲಿ ದೊರೆತ ಗ್ರಂಥವು. ಮೋಷೇಗೆ ಹೊರತು ಇತರರಿಗೆ ಕಾಣಿಸದ ಗ್ರಂಥ. 'ತೌರಾತ್'ನ್ನು ಕುರಿತು ಮೋಷೇ ಧರ್ಮ ಶಾಸ್ತ್ರವೆಂದು ಹೇಳಿದ್ದಾರೆ ಹೊರತು ಹೆಸರು ಹೇಳಲಿಲ್ಲ. ಅತಿ ರಹಸ್ಯವಾದ ತೌರಾತ್ ಗ್ರಂಥದ ಹೆಸರನ್ನು ಖುರಾನ್ ಗ್ರಂಥವು ಬಯಲ್ಪಡಿಸಿದೆ. ಖುರಾನ್ ಗ್ರಂಥವು ತೌರಾತ್ ಗ್ರಂಥದ ಹೆಸರನ್ನು ಹೇಳದೆ ಹೋದರೇ ಆ ಹೆಸರು ಪ್ರಪಂಚಕ್ಕೆ ತಿಳಿಯುತ್ತಿರಲಿಲ್ಲವೇನೋ! ಆದರೇ ತೌರಾತ್ ಗ್ರಂಥವೇ ಭಗವದ್ಗೀತೆ ಎಂದು ತಿಳಿಯದ ರಹಸ್ಯವಾಗಿದೆ. ಸಮಯ ಆಸನ್ನವಾದಂತೆಲ್ಲಾ ತಿಳಿಯದ ರಹಸ್ಯಗಳನ್ನು ಆತ್ಮವೇ ತಿಳಿಸಬೇಕಾಗಿದೆ.

ಈ ವಿಷಯಗಳೆಲ್ಲವೂ ಚೆನ್ನಾಗಿ ಗಮನಿಸಿದ ನಂತರ ತೌರಾತ್ ಗ್ರಂಥವೇ ಭಗವದ್ಗೀತೆಯೆಂದು, ಭಗವದ್ಗೀತೆಯೇ ತೌರಾತ್ ಎಂದು ತಿಳಿಯುವುದಾಗಿದೆ.

ಅಷ್ಟೇ ಅಲ್ಲದೇ ಕೃಷ್ಣನೇ ಮೋಷೇ ಎಂದು ಅಥವಾ ಮೂಸಾ ಎಂದೂ ತಿಳಿಯುವುದಾಗಿದೆ. ಕೃಷ್ಣನು 126 ವರ್ಷಗಳು 'ಕೃಷ್ಣ' ಎನ್ನುವ ಹೆಸರಿನಿಂದ ಇದ್ದು, ನಂತರ ಒಂಬತ್ತು ವರ್ಷಗಳು 'ಮೋಷೇ' ಎನ್ನುವ ಹೆಸರಿನಿಂದ ಚಲಾವಣೆ ಆದಂತೆ ಕೂಡಾ ತಿಳಿಯುತ್ತಿದೆ. ಕೃಷ್ಣನಾಗಿ ಇದ್ದಾಗಲೇ ತನ್ನ ಎರಡನೆಯ ಜನ್ಮವಾದ ಯೇಸು ಜನ್ಮಕ್ಕೆ ಬೇಕಾಗಿರುವ ಪ್ರಣಾಳಿಕೆಯನ್ನು ಸಿದ್ಧ ಮಾಡಿಕೊಂಡಿದ್ದಾನೆಂದು ತಿಳಿಯುತ್ತಿದೆ. ಮುಂಬರುವ ಯೇಸು ಜನ್ಮವನ್ನು ಕುರಿತು ಮೋಷೇಯಾಗಿರುವಾಗಲೇ ಹೇಳುವುದಲ್ಲದೆ, ಯೇಸು ಜೀವನದಲ್ಲಿ ಮುಂದೆ ನಡೆಯುವ ಸಂಘಟನೆಗಳನ್ನು ಕುರಿತು ಹೇಳಿದ್ದಾನೆ. ಕೃಷ್ಣನು ಮೋಷೇಯಾಗಿ ಇರುವಾಗ ತನ್ನ ಭಗವದ್ಗೀತೆಯನ್ನು ತೌರಾತ್‌ಆಗಿ ಹೇಳಿದ್ದಾನೆ. ಹಾಗೆ ಹೇಳುವುದಕ್ಕೆ ಕಾರಣ ನೋಡಿದರೇ ಭಗವದ್ಗೀತೆಯನ್ನು ತಾನು ಹೇಳಿದಂತೆ ತಿಳಿಯಬಾರದೆಂದೇ ತನ್ನ ಅಭಿಪ್ರಾಯವೆಂದು ತಿಳಿಯುತ್ತಿದೆ. ಭಗವದ್ಗೀತೆಯನ್ನು ಆಕಾಶ ಹೇಳಿದಂತೆಯೇ ಆಕಾಶಕ್ಕೆ ಗೌರವ ದಕ್ಕುವಂತೆ, ಆಕಾಶವು ಹೇಳಿದ್ದಕ್ಕೆ ದೇವರ ಮೊದಲ ವಿಧಾನದ ಪ್ರಕಾರ ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವೆನ್ನುವುದಕ್ಕೆ, ಅವಕಾಶವಿರುವಂತೆ ಮಾಡಿದ್ದಾನೆ. ಕೃಷ್ಣನು ಮೋಷೇಗೆ ಸ್ವಪ್ನದಲ್ಲಿ ಕೊಟ್ಟಿರುವ ಭಗವದ್ಗೀತೆಗೆ ತೌರಾತ್ ಎಂದು ಹೆಸರು ಬದಲಾಯಿಸಿ ಕೊಡುವುದಕ್ಕೆ ಕೂಡಾ ಹೆಚ್ಚಾಗಿ ಅದೇ ಕಾರಣ ಕಾಣಿಸುತ್ತಿದೆ. ತೌರಾತ್ ಗ್ರಂಥವು ಮೋಷೇ ಬಳಿ ಇತ್ತೆಂದು ಕೆಲವರಿಗೆ ಅಪರೂಪವಾಗಿ ತಿಳಿದಿದೆ ಆದರೇ ಅದನ್ನು ಯಾರೂ ನೋಡಲಿಲ್ಲ. ಆದ್ದರಿಂದ ತಾವು ನೋಡದ ಗ್ರಂಥಕ್ಕೆ ಪ್ರಜೆಗಳು ಧರ್ಮಶಾಸ್ತ್ರವೆಂದೂ, ಮೋಷೇ ಧರ್ಮಶಾಸ್ತ್ರವೆಂದೂ ಹೇಳಿರುವುದಾಗಿದೆ.

**ಪ್ರಶ್ನೆ :- ಕೃಷ್ಣನ ನಂತರ ಜೀವನ ಮೋಷೇಯಾಗಿ ಪ್ರಜೆಗಳಿಗೆ ಕಾಣಿಸಿದ್ದಾನೆ. ನಂತರ ಕೃಷ್ಣನು ಮೋಷೇ ಶರೀರವನ್ನು ಬಿಟ್ಟು ಮೂರು ಸಾವಿರ ವರ್ಷಗಳು ದೇವರಾಗಿ ಇದ್ದುಹೋಗಿದ್ದಾನೆ. ದೇವರಲ್ಲಿರುವ ಆತ್ಮ ಪುನಃ ಮೂರು ಸಾವಿರ ವರ್ಷಗಳ ನಂತರ ಯೇಸುವಾಗಿ ಬಂದಿದೆಯೆಂದು ನೀವು ಹೇಳಿದ್ದೀರಿ. ಕೃಷ್ಣನಾಗಿರುವ ಆತ್ಮವೇ, ಯೇಸುವಾಗಿ ಬಂದಿದೆಯೆಂದು ಹೇಳುವುದಕ್ಕೆ ಯಾವುದಾದರು ಆಧಾರಇದೆಯಾ ಎಂದು ಕೇಳುತ್ತಿದ್ದೇವೆ?**

**ಉತ್ತರ :–** ಪರಮಾತ್ಮ ತನ್ನ ಧರ್ಮಗಳಿಗೆ ಮುಪ್ಪು ಉಂಟಾದಾಗ ಅಧರ್ಮಗಳನ್ನು ಅಡಗಿಸಿ ಧರ್ಮಗಳನ್ನು ಸ್ಥಾಪಿಸುವುದಕ್ಕೆ ಆಗಾಗ ಭೂಮಿಮೇಲೆ ಮನುಷ್ಯನಹಾಗೆ ಅವತರಿಸಿ ಮನುಷ್ಯರಿಗೆ ತನ್ನ ಜ್ಞಾನವನ್ನು ಕುರಿತು ಹೇಳಿ ಧರ್ಮಗಳನ್ನು ಸ್ಥಾಪಿಸುವನು. ಹಾಗೆ ಬಂದಿರುವುದೇ ಕೃಷ್ಣನ ಜನ್ಮ ಮತ್ತು ಯೇಸು ಜನ್ಮಯೆಂದು ಹೇಳಬಹುದು. ಕೃಷ್ಣನಾಗಿ ಬಂದ ದೇವರೇ ಪುನಃ ಯೇಸುವಾಗಿ ಬಂದಿದ್ದಾನೆ. ಅಂದರೇ ಕೃಷ್ಣನಾಗಿ ಮೊದಲು ಬಂದಿರುವ ಆತ್ಮವೇ ಪುನಃ ಯೇಸುವಾಗಿ ಬಂದಿದೆ ಎಂದು ತಿಳಿಯಬೇಕು. ದೇವರು ಭಗವಂತನಾಗಿ ಮಾನವ ಶರೀರದೊಳಗೆ ಬಂದಾಗ ಕೂಡಾ ದೇವರು ದೇವರಾಗಿಯೇ ಇರುತ್ತಾನೆ ಆದರೆ ಆಗ ದೇವರ ಸ್ಥಾನ ಖಾಲಿಯಾಗುವುದಿಲ್ಲ. ದೇವರು ಮನುಷ್ಯನ ಆಕೃತಿಗೊಂಬೆ ಯನ್ನು ಮಾಡಿ ಅದರೊಳಗೆ ತನ್ನ ಆತ್ಮವನ್ನು ಊದಿ ಕಳುಹಿಸುತ್ತಿದ್ದಾನೆ. ಹಾಗೆ ಬಂದಿರುವವನು ದೇವರ ಪ್ರತಿನಿಧಿಯೆಂದು ಹೇಳಬಹುದು. ದೇವರ ಪ್ರತಿನಿಧಿಯಾದವನನ್ನೇ ಭಗವಂತನೆಂದೂ, ದೇವರ ಅವತಾರವೆಂದೂ ಹೇಳುತ್ತಿದ್ದೇವೆ. ದೇವರು ಮೊದಲು ಕೃಷ್ಣನಾಗಿ ಬಂದಿದ್ದಾನೆ. ಅದೇ ಕೃಷ್ಣನೇ ಮೋಷೇಯಾಗಿ ಕಾಣಿಸಿದ್ದಾನೆ. ಮೋಷೇಯಾಗಿ ಕಾಣಿಸಿರುವ ಕೃಷ್ಣನೇ ನಂತರ ಯೇಸುವಾಗಿ ಬಂದಿದ್ದಾನೆ. ಮಧ್ಯದಲ್ಲಿರುವ ಮೋಷೇಯೇ ಖುರಾನ್ ಗ್ರಂಥದಲ್ಲಿ ಮೂಸಾ ಆಗಿ ಹೇಳಲ್ಪಟ್ಟಿದ್ದಾನೆ. ಹಾಗೆಯೇ ಬೈಬಲ್‌ನಲ್ಲಿ ಮೋಷೇ ಖುರಾನ್‌ನಲ್ಲಿ ಮೂಸಾಆಗಿ ಹೇಳಲ್ಪಟ್ಟಂತೆ, ಬೈಬಲ್‌ನಲ್ಲಿ ಯೇಸುವಾಗಿ ಕರೆಯಲ್ಪಟ್ಟಿರುವವನು ಖುರಾನ್ ಗ್ರಂಥದಲ್ಲಿ ಈಸಾ ಎಂದು ಕರೆಯಲ್ಪಟ್ಟಿದ್ದಾನೆ. ಹಾಗೆಯೇ ಭಗವದ್ಗೀತೆಯಲ್ಲಿ ಕೃಷ್ಣನೇ ಖುರಾನ್‌ನಲ್ಲಿ ಮೂಸಾ, ಬೈಬಲ್‌ನಲ್ಲಿ ಮೋಷೇಯಾಗಿ ತಿಳಿಯಬೇಕು.

ಕಲಿಯುಗದಲ್ಲಿ ಯೇಸು ಶರೀರದಲ್ಲಿ ಬಂದಿದ್ದಾನೆ. ದ್ವಾಪರ ಯುಗದ ಕೊನೆಯಲ್ಲಿ ಕೃಷ್ಣನು, ಆತನ ನಂತರ ಜೀವನದಲ್ಲಿ ಮೋಷೇ ಒಂಬತ್ತು ವರ್ಷಗಳಿದ್ದಾನೆ. ಕೃಷ್ಣನು ಮೋಷೇ ಇಬ್ಬರು ಒಂದೇ ಆದರೇ, ನಂತರ ಮೋಷೇ ಯೇಸು ಇಬ್ಬರು ಒಂದೇ ಆಗಿದ್ದಾರೆ. ಆದ್ದರಿಂದ ನಾವು ಒಂದು ಕಡೆ **'ಕೃಷ್ಣ**

**ಮೂಸಾ, ಯೇಸು ಈಸಾ'** ಎಂದು ಹೇಳಿದ್ದೇವೆ. ಮೊದಲು ಕೃಷ್ಣನಾಗಿ ಬಂದಿರುವವನೇ ಮೋಷೇಯಾಗಿ ಕೆಲವು ದಿನಗಳು, ಯೇಸುವಾಗಿ ಕೆಲವುದಿನಗಳು ಇದ್ದಾನೆಂದು ಅರ್ಥವಾಗುತ್ತಿದೆ. ಕೃಷ್ಣನು ಮೋಷೇಯಾಗಿ (ಮೂಸಾಆಗಿ), ಮೋಷೇನೇ ಯೇಸುವಾಗಿ (ಈಸಾನಾಗಿ) ಇದ್ದಾನೆಂದು ಹೇಳುವುದಕ್ಕೆ ಬೈಬಲ್‌ನಲ್ಲಿ ಹೊಸ ನಿಬಂಧನದಲ್ಲಿ ಯೋಹಾನ್ ಸುವಾರ್ತೆ ಐದನೆಯ ಅಧ್ಯಾಯದಲ್ಲಿ 46, 47 ವಚನಗಳಲ್ಲಿ ಹೀಗಿದೆ ನೋಡಿ. (**ಯೋಹಾನ್ 5-46, 47**) **"ಆತನು ನನ್ನನ್ನು ಕುರಿತು ಬರೆಯುವನು ಆದ್ದರಿಂದ ನೀವು ಮೋಷೇನನ್ನು ನಂಬಿದಂತಾದರೆ ನನ್ನನ್ನು ನಂಬುತ್ತೀರಿ. ನೀವು ಆತನ ಲೇಖನಗಳನ್ನು ನಂಬದಿದ್ದರೇ ನನ್ನ ಮಾತುಗಳನ್ನು ಹೇಗೆ ನಂಬುತ್ತೀರಿ ಎಂದನು"**.

ಈ ವಾಕ್ಯಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದಂತಾದರೇ ಮೋಷೇ, ಯೇಸು ಇಬ್ಬರು ಒಂದೇ ಎಂದು ತಿಳಿಯುತ್ತಿದೆ. ಯೇಸು ತನ್ನನ್ನು ಮೋಷೇಯೊಂದಿಗೆ ಹೋಲಿಸಿ ಹೇಳಿಕೊಳ್ಳುವುದರಿಂದ ಯೇಸು ಮೋಷೇ ಇಬ್ಬರು ಒಂದೇ ಎಂದು ಧೃಢವಾಗಿ ಅರ್ಥವಾಗುತ್ತಿದೆ. ಮೋಷೇ ಯೇಸು ಇಬ್ಬರು ಒಂದೇಯೆಂದು ತಿಳಿಯುವುದರಿಂದ ಮೋಷೇಯಾಗಿರುವುದು ಕೃಷ್ಣನೇ ಆದ್ದರಿಂದ, ಕೃಷ್ಣನು ಮೋಷೇಯಾಗಿ ಇರುವಾಗಲೇ ಯೇಸುನನ್ನು ಕುರಿತಾದ ಲೇಖನಗಳನ್ನು ಬರೆದಿದ್ದಾನೆ ಆದ್ದರಿಂದ, ಯೇಸು 'ಮೋಷೇ' ಹೆಸರು ಹೇಳಿದರೂ ಅದು ಕೃಷ್ಣನಿಗೇ ಅನ್ವಯಿಸುತ್ತದೆ ಆದ್ದರಿಂದ, ಯೇಸು ಕೃಷ್ಣನು ಇಬ್ಬರು ಒಂದೇ ಎನ್ನುವಂತೆ ಯೇಸು ಮಾತುಗಳಲ್ಲಿಯೇ ತಿಳಿಯುತ್ತಿದೆ. ಕೃಷ್ಣನು ಯೇಸುವಾಗಿ ಬಂದಾಗ ಹೇಳಿರುವ ಬೋಧನೆಗಳು ಗ್ರಂಥರೂಪವಾಗಿವೆ. ಆ ಗ್ರಂಥವು ದೇವರು ಹೇಳಿರುವ ವಿಧಾನಗಳಲ್ಲಿ ತನ್ನ ಪ್ರತಿನಿಧಿಯಿಂದ ಹೇಳಿಸುತ್ತೇನೆಂದು ಹೇಳಿದಂತೆ, ತನ್ನ ಜ್ಞಾನವನ್ನು ಮನುಷ್ಯನಾಗಿರುವ ಯೇಸುನಿಂದ ಹೇಳಿಸುವುದರಿಂದ, ಅದು ಎರಡನೆಯ ವಿಧಾನವಾಗಿ ನೆರವೇರಿರುವುದರಿಂದ, ಬೈಬಲ್ ಗ್ರಂಥವನ್ನು 'ದ್ವಿತೀಯ ದೈವಗ್ರಂಥ'ವಾಗಿ ಹೇಳುತ್ತಿದ್ದೇವೆ. ದ್ವಿತೀಯ ದೈವಗ್ರಂಥದಲ್ಲಿ ನಾಲ್ಕು ಸುವಾರ್ತೆಗಳಲ್ಲಿ ಯೇಸು ಹೇಳಿರುವ ಜ್ಞಾನವಿರುವುದರಿಂದ, ನಾಲ್ಕು

ಸುವಾರ್ತೆಗಳನ್ನೇ ‘ದ್ವಿತೀಯ ದೈವಗ್ರಂಥ’ ಎಂದು ಹೇಳಬೇಕು. ಅರವತ್ತಾರು ಪಾಠಗಳಾಗಿರುವ ಬೈಬಲ್ ಗ್ರಂಥದಲ್ಲಿ ಯೇಸು ಹೇಳಿರುವುದು ನಾಲ್ಕು ಸುವಾರ್ತೆಗಳ ರೂಪದಲ್ಲಿ ಇರುವುದರಿಂದ, ಕೇವಲ ನಾಲ್ಕು ಸುವಾರ್ತೆಗಳನ್ನೇ ‘ದ್ವಿತೀಯ ದೈವಗ್ರಂಥ’ ಎನ್ನುವುದಕ್ಕೆ ಅರ್ಹತೆ ಹೊಂದಿದೆ. ನಾಲ್ಕು ಸುವಾರ್ತೆಗಳು ಹೊರತುಪಡಿಸಿ ಉಳಿದ 62 ಪಾಠಗಳನ್ನು ಬೈಬಲ್ ಎನ್ನಬಹುದು ಆದರೆ ದ್ವಿತೀಯ ದೈವಗ್ರಂಥವೆಂದು ಹೇಳಬಾರದು. ಬೈಬಲ್ ಗ್ರಂಥದಲ್ಲಿರುವ 62 ಪಾಠಗಳಿಗೆ ಎರಡನೆಯ ದೈವಗ್ರಂಥವೆನ್ನುವ ಮಾತು ಸರಿಹೋಗುವುದಿಲ್ಲವೆಂದು ಹೇಳಬಹುದು. ದೈವ ಪ್ರತಿನಿಧಿಯಾದವನು ಹೇಳಿರುವುದೇ ದೈವಗ್ರಂಥವಾಗುವುದು. ಮನುಷ್ಯರು ಹೇಳಿರುವುದು ದೈವಗ್ರಂಥವಾಗಲು ಸಾಧ್ಯವಿಲ್ಲ.

ಕೃಷ್ಣನು ಬಂದು ಆಕಾಶವು ಹೇಳಿರುವ ಜ್ಞಾನವನ್ನು ಆಕಾಶ ಭಾಷೆಯಿಂದ ಮನುಷ್ಯರ ಭಾಷೆಗೆ ಅನುವಾದ ಮಾಡಿ ಹೇಳಿದ್ದಾನೆ. ನಂತರ ಯೇಸುವಾಗಿ ಬಂದು ನಾಲ್ಕು ಸುವಾರ್ತೆಗಳ ಜ್ಞಾನವನ್ನು ಹೇಳಿದ್ದಾನೆ. ಅದು ದ್ವಿತೀಯ ದೈವಗ್ರಂಥವಾಗಿರುವಾಗ ನಂತರ ಆರುನೂರು ವರ್ಷಗಳಿಗೆ ಅಂದರೇ ಇಲ್ಲಿಗೆ 1400 ವರ್ಷಗಳಿಗೆ ಪೂರ್ವವು ಮನುವಿಗೆ ಹೇಳಿರುವ ಸೂರ್ಯನೇ, ಜಿಬ್ರಾಯೇಲ್ ಎಂಬ ಹೆಸರಿನಿಂದ ಪೂರ್ವವು ಮನುವಿಗೆ ಹೇಳಿರುವ ಜ್ಞಾನವನ್ನೇ ಆಗಸ್ವಲ್ಪ ಆಗಸ್ವಲ್ಪ ಮುಹಮ್ಮದ್ ಪ್ರವಕ್ತರವರಿಗೆ ಹೇಳುತ್ತಾ ಬಂದಿದ್ದಾನೆ. 23 ವರ್ಷಗಳು ಸೂರ್ಯನು (ಜಿಬ್ರಯೇಲ್) ಪ್ರವಕ್ತರವರಿಗೆ ಬೋಧಿಸಿದಾಗ ಅದು ಕೊನೆಗೆ ಗ್ರಂಥರೂಪವಾಗಿದೆ. ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಕಾಣಿಸದೆ ತೆರೆಹಿಂಬದಿಯಿಂದ ಬೋಧಿಸಿರುವುದರಿಂದ ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಬೋಧಿಸುವ ಮೂರು ವಿಧಾನಗಳಲ್ಲಿ ಎರಡು ವಿಧಾನಗಳ ಪ್ರಕಾರ ಮೊದಲೇ ಬೋಧಿಸಿರುವಾಗ, ನಂತರ ಉಳಿದ ಕೊನೆಯ ವಿಧಾನವಾದ ತೆರೆಹಿಂಬದಿಯಿಂದ ಬೋಧಿಸಿರುವುದರಿಂದ, ಆಗ ಜಿಬ್ರಯೇಲ್ ಮೂಲಕ ಹೇಳಲ್ಪಟ್ಟಿರುವ ಬೋಧನೆಗಳ ಗ್ರಂಥವನ್ನು ‘ಅಂತಿಮ ದೈವಗ್ರಂಥ’ ಎಂದು ಹೇಳಿರುವುದಾಗಿದೆ. ದೇವರು ಹೇಳಿರುವ ಮೂರು ವಿಧಾನಗಳ ಪ್ರಕಾರ ತಿಳಿಸಿರುವ

ಬೋಧನೆಗಳಿಗೆ ಮೂರು ದೈವಗ್ರಂಥಗಳೆಂದು ಹೇಳುವುದೇ ಅಲ್ಲದೆ ಮುಂದೆ ಹಿಂದೆ ಬೋಧಿಸಿರುವ ವಿಧಾನವನ್ನನುಸರಿಸಿ ಅವುಗಳಿಗೆ ಪ್ರಥಮ, ದ್ವಿತೀಯ, ಅಂತಿಮ ದೈವ ಗ್ರಂಥಗಳೆಂದು ಹೆಸರು ಬಂದಿದೆ.

**ಪ್ರಶ್ನೆ :– ಮೂರು ದೈವಗ್ರಂಥಗಳನ್ನು ಮೂರು ವಿಧಗಳಲ್ಲಿ ಬೋಧಿಸಿರುವುದಾಗಿದೆ, ಆದ್ದರಿಂದ ಮೂರು ದೈವಗ್ರಂಥಗಳಾಗಿ ಹೇಳುತ್ತಿದ್ದೇವೆ. ಆದರೇ ಮೂರು ದೈವಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯಾ? ಅಥವಾ ಸ್ವಲ್ಪ ವ್ಯತ್ಯಾಸದಿಂದ ಏನಾದರೂ ಇದೆಯಾ?**

**ಉತ್ತರ :–** ಮೂರು ದೈವಗ್ರಂಥಗಳಲ್ಲಿ ಇರುವುದು ಸೃಷ್ಠಿ ಆದಿಯಲ್ಲಿ ಮೊದಲು ಆಕಾಶವಾಣಿ ಹೇಳಿರುವ ಜ್ಞಾನವೇ ಇದೆ. ಆಕಾಶವಾಣಿ ತನ್ನ ಶಬ್ದವಾದ ಗುಡುಗುಗಳ ಮೂಲಕ ಹೇಳಿರುವ ಜ್ಞಾನವೇ ಮೊದಲು ಭಗವದ್ಗೀತೆಯಾಗಿ ತಯಾರಾಗಿದೆ. ಭಗವದ್ಗೀತೆಯನ್ನೇ ಉಳಿದ ಗ್ರಂಥಗಳಲ್ಲಿ ತೌರಾತ್ ಗ್ರಂಥ ಎನ್ನುತ್ತಿದ್ದೇವೆ. ತೌರಾತ್ ಗ್ರಂಥದ (ಭಗವದ್ಗೀತೆ) ಲ್ಲಿನ ಜ್ಞಾನವೇ ಇಂಜೀಲು (ಬೈಬಲ್) ಗ್ರಂಥದಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ಇರುವಂತೆ ಖುರಾನ್ ಗ್ರಂಥವೇ ಸಾಕ್ಷ್ಯವನ್ನು ಹೇಳುತ್ತಾ ಐದನೆಯ ಸೂರಾದಲ್ಲಿ 44, 46, 48, 68 ಆಯತ್‌ಗಳಲ್ಲಿ ಬರೆಯುವುದಾಗಿದೆ. ಆದ್ದರಿಂದ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯೆಂದು ಹೇಳಬಹುದು.

**ಪ್ರಶ್ನೆ :– ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು 'ತೌರಾತ್' ಎಂಬ ಹೆಸರಿನಿಂದ ಮೂಸಾಗೆ (ಮೋಷೇಗೆ) ಕೊಡುವುದು ನಡೆದಿದೆ. ಆದರೇ ಮಹಾಜ್ಞಾನಿಯಾದ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತಗೆ ಹೇಳಿರುವ ಬೋಧನೆಯಲ್ಲಿ ಸೂರಾ 2, ಆಯತ್ 53ರಲ್ಲಿ ಹೀಗೆ ಹೇಳಿದ್ದಾನೆ (2–53) "ಜ್ಞಾಪಕ ಮಾಡಿಕೊಳ್ಳಿ. ನೀವು ಸನ್ಮಾರ್ಗರಾಗುತ್ತೀರೆಂದು ನಾವು ಮೂಸಾಗೆ ಗ್ರಂಥವನ್ನು ಮತ್ತು ಸತ್ಯಾಸತ್ಯಗಳನ್ನು ಬೇರೆಮಾಡುವ ಒರೆಕಲ್ಲನ್ನು ಪ್ರಸಾದಿಸಿದ್ದೇವೆ." ಅಷ್ಟೇಅಲ್ಲದೇ ಮತ್ತೊಂದುಕಡೆ ಸೂರಾ 25, ಆಯತ್ 1ರಲ್ಲಿ ಹೀಗೆ ಹೇಳಿದ್ದಾನೆ. (25–1)**

**"ಸರ್ವಲೋಕಗಳಿಗೂ ಎಚ್ಚರಿಕೆ ಮಾಡುವುದಾಗಿ ಈ ಒರೆಕಲ್ಲನ್ನು ತನ್ನ ದಾಸನ ಮೇಲೆ ಕ್ರಮಕ್ರಮವಾಗಿ ಅವತರಿಸುವಂತೆ ಮಾಡಿದ ಆತನು ಎಷ್ಟೋ ಶುಭಕರನು" ಎಂದು ಕೂಡಾ ಇದೆ. ಇಲ್ಲಿ ಒರೆಕಲ್ಲು ಎನ್ನಲ್ಪಡುವ ತೌರತ್‌ನ್ನು ಮೂಸಾಗೆ ಕೊಟ್ಟಿರುವುದು ವಾಸ್ತವವೇ ಎಂದುಕೊಳ್ಳೋಣ. ಆದರೇ ಅದೇ ಒರೆಕಲ್ಲನ್ನು ಹಂತಹಂತವಾಗಿ ಮುಹಮ್ಮದ್ ಪ್ರವಕ್ತರವರಿಗೆ ಅಲ್ಲಾಹ್ ಕೊಟ್ಟಹಾಗೆ ಮುಸ್ಲಿಮ್‌ರು ಹೇಳುತ್ತಿದ್ದಾರೆ. ಅದನ್ನನುಸರಿಸಿ ಖುರಾನ್ ಗ್ರಂಥವೇ ಒರೆಕಲ್ಲೆಂದು ಅರ್ಥವಾಗುತ್ತಿದೆ. ಅಲ್ಲಿ ಮೂಸಾಗೆ ಕೊಟ್ಟಿರುವ ತೌರಾತ್ ಗ್ರಂಥವು ಒರೆಕಲ್ಲಾ ಅಥವಾ ಇಲ್ಲಿ ಮುಹಮ್ಮದ್ ಪ್ರವಕ್ತರವರಿಗೆ ಕೊಟ್ಟಿರುವ ಖುರಾನ್ ಒರೆಕಲ್ಲಾ ಎಂದು ಸಂಶಯ ಏರ್ಪಡುತ್ತಿದೆ. ಅಸಲಿಗೆ ಒರೆಕಲ್ಲು ಎಂದರೇ ಅರ್ಥವೇನು? ಮೂಸಾಗೆ ಕೊಟ್ಟಿರುವ ತೌರಾತ್, ಪ್ರವಕ್ತರಿಗೆ ಕೊಟ್ಟಿರುವ ಖುರಾನ್ ಎರಡೂ ಒಂದೇ ಗ್ರಂಥಗಳಲ್ಲದಿದ್ದರೂ ಎರಡಕ್ಕು ಒರೆಕಲ್ಲು ಎಂದು ಏಕೆ ಕರೆದಿದ್ದಾರೆ? ಸ್ವಲ್ಪ ನಮಗೆ ಅರ್ಥವಾಗುವ ವಿಧದಲ್ಲಿ ಹೇಳಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :–** ಸೃಷ್ಠಿ ಆದಿಯಲ್ಲಿ ಆಕಾಶವು ತನ್ನ ವಾಣಿ ಮೂಲಕ ಜ್ಞಾನವನ್ನು ತಿಳಿಸಿದೆ. ವಾಣಿ ಎಂದರೇ 'ಶಬ್ದ' ಎಂದು ಅರ್ಥ. ಆಕಾಶವೊಂದರ ವಾಣಿ ಮಾತುಗಳ ರೂಪದಲ್ಲಿ ಇರುವುದಿಲ್ಲ. ಮನುಷ್ಯರ ವಾಣಿ ಮಾತುಗಳ ರೂಪದಲ್ಲಿ ಇರುತ್ತದೆ. ಆಕಾಶವಾಣಿ ಗುಡುಗುಗಳ ರೂಪದಲ್ಲಿ ಇರುತ್ತದೆ. ಗರ್ಜಿಸಿ ಗುಡುಗಿದ ಗುಡುಗುಗಳ ಜ್ಞಾನವನ್ನು ಆಕಾಶದಲ್ಲಿರುವ ದೊಡ್ಡ ಗ್ರಹವಾದ ಸೂರ್ಯನು ಗ್ರಹಿಸಿದ್ದಾನೆ. ಸೂರ್ಯನಿಂದ ಇತ್ತ ಭೂಗೋಳದ ಮೇಲಿನ ಮನುಷ್ಯರಿಗೆ, ಆಕಡೆ ಖಗೋಳದಲ್ಲಿನ ಗ್ರಹಗಳಿಗು, ಭೂತಗಳಿಗು ಜ್ಞಾನವು ತಿಳಿದಿದೆ. ಸೂರ್ಯನು ನಿತ್ಯವು ಭೂಗೋಳವನ್ನು ಎಲ್ಲವನ್ನು, ಎಲ್ಲಾ ಪ್ರದೇಶಗಳನ್ನು, ಎಲ್ಲ ಪ್ರದೇಶಗಳಲ್ಲಿನ ಮನುಷ್ಯರನ್ನು ನೋಡುವುದರಿಂದ ಎಲ್ಲ ಪ್ರದೇಶಗಳಲ್ಲಿನ ಪ್ರಜೆಗಳು ಮಾತನಾಡುವ ಭಾಷೆಯನ್ನು ಗುರುತಿಸಿ ಕಲಿತಿದ್ದಾನೆ. ಯಾರಾದರೂ ಆರು ತಿಂಗಳು ಒಂದು ಪ್ರದೇಶದಲ್ಲಿದ್ದರೇ ಆ ಪ್ರದೇಶ ಭಾಷೆಯನ್ನು ಕಲಿಯಬಹುದು. ಸೂರ್ಯನು ಕೆಲವು ವರ್ಷಗಳವರೆಗು ಭೂಗೋಳದಲ್ಲಿ

ಎಲ್ಲ ಪ್ರದೇಶಗಳ ಮೇಲೆ ತನ್ನ ಬೆಳಕನ್ನು ಪ್ರಕಾಶಿಸಿದಾಗ ಅಲ್ಲಿನ ಭಾಷೆಯನ್ನು ಸುಲಭವಾಗಿ ಕಲಿತಿದ್ದಾನೆ.

ಭೂಮಿ ಮೇಲೆ ಮೊದಲು ಭಾರತದೇಶದಲ್ಲಿ ದಕ್ಷಿಣ ಭಾಗದಲ್ಲಿರುವ ಶ್ರೀಲಂಕ ಪ್ರದೇಶದಲ್ಲಿ ತೆಲುಗು ಭಾಷೆ ತಯಾರಾಗಿದೆ. ತೆಲುಗು ಭಾಷೆ ತಯಾರಾದಾಗಿನಿಂದ ಭಾಷೆಯನ್ನು ಮಾತನಾಡುವವರನ್ನು ಪ್ರತಿದಿನ ನೋಡಿ ನೋಡಿ ತಾನು ತೆಲುಗು ಭಾಷೆಯನ್ನು ಸುಲಭವಾಗಿ ಕಲಿತಿದ್ದಾನೆ. ಅದಕ್ಕು ಮೊದಲು ಆಕಾಶವು ತನ್ನ ಶಬ್ದದ ಮೂಲಕ ತಿಳಿಸಿರುವ ಜ್ಞಾನವನ್ನು ಗ್ರಹಿಸಿದ ಸೂರ್ಯನು ತನಗೆ ತಿಳಿದಿರುವ ಜ್ಞಾನವನ್ನು ಭೂಮಿಮೇಲೆ ತಿಳಿಸಬೇಕೆಂದು ಕೊಳ್ಳುವುದು ನಡೆದಿದೆ. ಆಗ ದಕ್ಷಿಣ ಭಾರತದೇಶದಲ್ಲಿ ಬೆರೆತಿರುವ ಲಂಕದಲ್ಲಿನ ಮನುವು ಎಂಬ ವ್ಯಕ್ತಿಗೆ ತನಗೆ ತಿಳಿದಿರುವ ಜ್ಞಾನವನ್ನು ತೆಲುಗು ಭಾಷೆಯಲ್ಲಿಯೇ ಹೇಳಿದ್ದಾನೆ. ಇಲ್ಲಿ ಒಂದು ಗಮನದ ಮೇರೆಗೆ ಸೂರ್ಯನು ಜ್ಞಾನವನ್ನು ಭೂಮಿಮೇಲೆ ಹೇಳಿದರೂ, ಸೂರ್ಯನಿಗೆ ಆಕಾಶವು ತನ್ನ ವಾಣಿ ಮೂಲಕ ಹೇಳಿದರೂ, ಇದೆಲ್ಲದಕ್ಕೂ ಕಾರಣ ಮತ್ತು ಇದೆಲ್ಲವೂ ಯಾರಿಗೂ ತಿಳಿಯದ ಹಾಗೆ ಮಾಡಿದವನು ಆತ್ಮವೇ ಎಂದು ಮರೆಯಬಾರದು. ಆತ್ಮ ಎಲ್ಲಾ ಮಾಡುತ್ತಿದ್ದರೂ ತನ್ನ ಪಾತ್ರವನ್ನು ಎಲ್ಲೂ ಹೊರಬೀಳದಂತೆ ಇರಬಲ್ಲದು. ಅದೇ ವಿಧವಾಗಿ ಒಂದುಕಡೆ ಆಕಾಶದಲ್ಲಿ ಆತ್ಮವಾಗಿದ್ದು ಜ್ಞಾನವನ್ನು ಹೇಳಿದೆ. ಹಾಗೆಯೇ ಮತ್ತೊಂದು ಕಡೆ ಸೂರ್ಯನಲ್ಲಿದ್ದು ಭೂಮಿಮೇಲೆ ಮನುವಿಗೆ ಜ್ಞಾನ ಹೇಳಿದೆ. ಸೃಷ್ಠಿಕರ್ತನಾದ ದೇವರು ಏನೂ ಮಾಡದೆ ಸಾಕ್ಷಿಯಾಗಿ ನೋಡುತ್ತಿರುತ್ತಾನೆ. ಆದರೇ ಪ್ರಪಂಚದಲ್ಲಿ ಎಲ್ಲ ಕಾರ್ಯಗಳನ್ನು ಮಾಡುವವನು ಆತ್ಮವೇ ಎಂದು ತಿಳಿಯಬೇಕು. ಮೂರು ಆತ್ಮಗಳಲ್ಲಿ ದೇವರು ಸೃಷ್ಠಿಕರ್ತನಾಗಿ ಇದ್ದರೆ, ಆತ್ಮ ಕಾರ್ಯಕರ್ತನಾಗಿದೆ. ಜೀವಾತ್ಮ ಜೀವನದಲ್ಲಿ ನಡೆಯುವ ಸುಖದುಃಖಗಳ ಭೋಕ್ತನಾಗಿದ್ದಾನೆ. ಅಂದರೇ ಭೋಗಿಯಾಗಿದ್ದಾನೆ. ಭೋಗಿಯಾಗಿರುವ ಜೀವಿಯು ಯೋಗಿಯಾಗಿ ಬದಲಾಗುವುದಕ್ಕೆ ದೈವಜ್ಞಾನವು ಅವಶ್ಯ. ಮೊದಲು ಆಕಾಶದಲ್ಲಿನ ಆತ್ಮ ಮೂಲಕ ದೇವರು (ಪರಮಾತ್ಮ ಅಥವಾ

ಅಲ್ಲಾಹ್) ಸೂರ್ಯನಿಗೆ ವಾಣಿಮೂಲಕ ಜ್ಞಾನವನ್ನು ತಿಳಿಸಿದರೇ, ಸೂರ್ಯನು ಭೂಮಿಮೇಲೆ ಒಬ್ಬ ಮನುಷ್ಯನಾದ ಮನುವಿಗೆ ಜ್ಞಾನವನ್ನು ತಿಳಿಸಿದ್ದಾನೆ.

ಎಂದಿಗೂ ಶಾಶ್ವತವಾಗಿ ದೇವರು ಬದಲಾಗುವವನಲ್ಲ. ದೇವರು ಎಂದಿಗೂ ಒಬ್ಬನೇ ಹಾಗೆಯೇ ದೇವರ ಜ್ಞಾನವು ಒಂದೇ. ಕಾಲವನ್ನನುಸರಿಸಿ ದೇವರಾಗಲೀ, ದೇವರ ಜ್ಞಾನವಾಗಲೀ ಬದಲಾಗುವುದಲ್ಲ. ಆದ್ದರಿಂದ ಸೃಷ್ಠಿ ಆದಿಯಲ್ಲಿ ಆಕಾಶದಿಂದ ಹೇಳಲ್ಪಟ್ಟಿರುವ ಜ್ಞಾನವೇ ಭೂಮಿಮೇಲೆ ಸ್ಥಿರಸ್ಥಾಯಿಯಾಗಿ ಇರುತ್ತದೆ. ಮೊದಲು ಹೇಳಿರುವ ಜ್ಞಾನವೇ ಈದಿನ ಅನೇಕ ಮತಗಳಾಗಿ ಸೀಳಿಹೋಗಿರುವ ಪ್ರಜೆಗಳಲ್ಲಿ, ಮೂರು ಮತಗಳಲ್ಲಿ ಇದೆಯೆಂದು ಹೇಳಬಹುದು. ಮೂರು ಮತಗಳವರದ್ದು ಬೇರೆಬೇರೆ ಜ್ಞಾನವೆಂದು ಬಹಳಜನ ಅಂದುಕೊಂಡಿರ ಬಹುದು. ಆಯಾ ಮತಸ್ಥರು ಕೂಡಾ 'ನಮ್ಮದು ಬೇರೆ ಜ್ಞಾನ ಇತರ ಮತಸ್ಥರದು ಬೇರೆ ಜ್ಞಾನ' ಎಂದು ಅಂದುಕೊಂಡಿರಬಹುದು. ಆದರೇ ಅದು ಅವರ ತಪ್ಪೇ ಹೊರತು ಎಲ್ಲ ಮತಗಳಲ್ಲಿನ ಜ್ಞಾನವು ಒಂದೇ ಎಂದು ಹೇಳಬಹುದು. **ಪ್ರಪಂಚದಲ್ಲಿ ದೇವರು ಒಬ್ಬನೇ, ದೇವರ ಜ್ಞಾನವು ಒಂದೇ**. ಎಷ್ಟು ಯುಗಗಳು ಬದಲಾದರೂ ದೇವರು ಬದಲಾಗುವವನಲ್ಲ, ಹಾಗೆಯೇ ದೇವರ ಜ್ಞಾನವೂ ಬದಲಾಗುವುದಲ್ಲ. ಆದರೇ ಕಾಲಾನುಗುಣವಾಗಿ ಮನುಷ್ಯ ಅನೇಕ ಬಣ್ಣಗಳ ವಸ್ತ್ರಗಳನ್ನು ಧರಿಸಿದಂತೆ, ಮನುಷ್ಯರು ದೇವರಿಗೆ ಅನೇಕ ಬಣ್ಣಗಳು ಬಳೆದು ತೋರಿಸುತ್ತಿದ್ದಾರೆ. ಎಷ್ಟು ಬಣ್ಣಗಳು ಬಳೆದರೂ ದೃಶ್ಯಗಳ ಭೇದ ಬಣ್ಣಗಳದ್ದೇ ಹೊರತು, ದೇವರದ್ದಲ್ಲವೆಂದು ತಿಳಿಯಬೇಕು. ಸೃಷ್ಠಿ ಆದಿಯಲ್ಲಿ ಹೇಳಿರುವ ಜ್ಞಾನವೇ ಈದಿನ ಮುಖ್ಯವಾದ ಹಿಂದೂ, ಕ್ರೈಸ್ತ, ಇಸ್ಲಾಮ್ ಎಂಬ ಮೂರು ಮತಗಳಲ್ಲಿ ಇದೆ. ಆದರೇ ಆ ವಿಷಯವು ಮನುಷ್ಯರು ತಿಳಿಯದೆ ಅಜ್ಞಾನದಿಂದ 'ನಮ್ಮ ದೇವರು ಬೇರೆ, ನಮ್ಮ ಜ್ಞಾನವು ಬೇರೆ' ಎಂದು ಹೇಳುತ್ತಿದ್ದಾರೆ. ಅದು ಪೂರ್ತಿ ತಪ್ಪೆಂದು ಹೇಳಬಹುದು.

ತೌರಾತ್ ಗ್ರಂಥವೆಂದರೇ ಭಗವದ್ಗೀತೆ ಎಂದು ತಿಳಿದುಕೊಂಡಿದ್ದೇವೆ. ಭಗವದ್ಗೀತೆ ಎಂದರೇ ಮೊದಲು ಆಕಾಶವಾಣಿ ಹೇಳಿರುವ ಜ್ಞಾನವೆಂದು

ತಿಳಿದುಕೊಂಡಿದ್ದೇವೆ. ಇದನ್ನನುಸರಿಸಿ ಆಕಾಶವು ಹೇಳಿರುವ ಒಂದೇ ಜ್ಞಾನವೇ ಭಗವದ್ಗೀತೆಯಾಗಿ ತೌರಾತಾಗಿ ಇದೆಯೆಂದು ತಿಳಿಯುತ್ತಿದೆ. ಇನ್ನೂ ವಿವರವಾಗಿ ತಿಳಿದರೇ ಸೂರ್ಯನು ಆಕಾಶವಾಣಿ ಜ್ಞಾನವನ್ನು ಮನುವಿಗೆ ಹೇಳಿದ್ದಾನೆ. ಅದೇ ಸೂರ್ಯನೇ ಹೆಸರು ಬದಲಾವಣೆಯಿಂದ ಜಿಬ್ರಯೇಲ್ಆಗಿ ಬಂದು ಮುಹಮ್ಮದ್ ಪ್ರವಕ್ತರವರಿಗೆ ಹೇಳಿದ್ದಾನೆ. ಕೃತಯುಗದಲ್ಲಿ ಸೂರ್ಯನು ಭೂಮಿಮೇಲೆ ಜ್ಞಾನವನ್ನು ಹೇಳಿದಾಗ **"ಮ"** ಎಂಬ ಅಕ್ಷರದಿಂದ ಹೆಸರಿರುವ ವ್ಯಕ್ತಿಯನ್ನೇ ಆಯ್ಕೆ ಮಾಡಿಕೊಂಡು ಮನುವಿಗೆ ಜ್ಞಾನ ಹೇಳಿದ್ದಾನೆ. ಹಾಗೆಯೇ ಜಿಬ್ರಯೇಲ್ ಎಂಬ ಹೆಸರಿನಿಂದ ಕಲಿಯುಗದಲ್ಲಿ ಕೂಡಾ **"ಮ"** ಎಂಬ ಅಕ್ಷರದಿಂದ ಹೆಸರಿರುವ ವ್ಯಕ್ತಿಯನ್ನು ಆಯ್ಕೆ ಮಾಡಿಕೊಂಡು ಮಹಮ್ಮದ್ (ಮುಹಮ್ಮದ್) ಪ್ರವಕ್ತರವರಿಗೇ ಜ್ಞಾನವನ್ನು ಹೇಳಿದ್ದಾನೆ. ಹೇಳಲ್ಪಡುವ ಜ್ಞಾನವು ಒಂದೇ ಎಂದು ತಿಳಿಯುವಂತೆ ಕೃತಯುಗದಲ್ಲಿಯೂ, ಕಲಿಯುಗದಲ್ಲಿಯೂ ಒಂದೇ ಅಕ್ಷರವಿರುವ ಹೆಸರಿರುವ ವ್ಯಕ್ತಿಯನ್ನೇ ಆಯ್ಕೆಮಾಡಿಕೊಂಡಿದ್ದಾನೆ. ಹೇಳಿರುವವನು ಒಬ್ಬನೇ ಆದರೂ ಕಲಿಯುಗದಲ್ಲಿ ಸೂರ್ಯನು ತನ್ನನ್ನು ಗುರುತಿಸದೆ ಜಿಬ್ರಯೇಲ್ ಎಂದು ಹೆಸರು ಇಟ್ಟುಕೊಂಡಿದ್ದಾನೆ. ಭಗವದ್ಗೀತೆಯನ್ನು ಹೇಳಿರುವವನು, ಖುರಾನ್‌ನನ್ನು ಹೇಳಿರುವವನು ಒಂದೇ ಸೂರ್ಯನೇ ಎಂದು ಯಾರಿಗೂ ತಿಳಿದಿಲ್ಲ. ಇತರರಿಗೆ ತಿಳಿದರೂ ತಿಳಿಯದೆ ಹೋದರೂ ಹೇಳಿರುವವನು ಒಬ್ಬ ಸೂರ್ಯನೇ, ಹೇಳಿರುವ ಜ್ಞಾನವು ಒಂದೇ. **ಪ್ರಪಂಚ ಇರುವವರೆಗು ದೇವರು, ದೇವರ ಜ್ಞಾನವು ಒಂದೇ ಇರುತ್ತದೆ.** ಎಂದಾದರೂ ಅಧರ್ಮಗಳು ಹೆಚ್ಚಾಗಿ ಧರ್ಮಗಳಿಗೆ ಮುಪ್ಪು ಉಂಟಾದರೇ, ದೇವರು ಪ್ರತ್ಯೇಕವಾಗಿ ಅವತರಿಸಿ ಪುನಃ ಧರ್ಮ ಸಂಸ್ಥಾಪನೆ ಮಾಡಿಹೋಗು ವನು. ಆಗಲೂ ಕೂಡಾ ಪುನಃ ಮೊದಲಿರುವ ಧರ್ಮಗಳನ್ನೇ ತಿಳಿಸಿಹೋಗುವನು. ಆದ್ದರಿಂದ ಸೃಷ್ಟಿ ಆದಿಯಿಂದ ಜ್ಞಾನ ಬದಲಾಗದೆ ಒಂದೇ ಜ್ಞಾನವಿದೆ.

**ಪ್ರಶ್ನೆ :- ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿನ ಜ್ಞಾನವು, ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿನ ಜ್ಞಾನವು ಒಂದೇ ಎನ್ನುತ್ತೀರಾ? ಒಂದೇ ಆದರೇ**

**ಬೇರೆಬೇರೆ ಮತಗಳು ಯಾಕೆ ಏರ್ಪಟ್ಟಿವೆ? ಭಗವದ್ಗೀತೆಯನ್ನು ಅನುಸರಿಸುವ ಹಿಂದೂಗಳು, ಖುರಾನ್ ಗ್ರಂಥವನ್ನು ಅನುಸರಿಸುವ ಮುಸ್ಲಿಮ್‌ರು ಬೇರೆ ಆಚರಣೆಗಳು ಬೇರೆ ಆರಾಧನೆಗಳು, ಬೇರೆಬೇರೆ ಅಲಂಕರಣೆಗಳು ಯಾಕೆ ಹೊಂದಿದ್ದಾರೆ? ಎರಡು ಮತಗಳಲ್ಲಿರುವ ಪದ್ಧತಿಗಳನ್ನನುಸರಿಸಿ ಎರಡು ಜ್ಞಾನಗಳು ಒಂದಲ್ಲವೆಂದು ತಿಳಿಯುತ್ತಿದೆ ಅಲ್ಲವೇ! ಪ್ರತ್ಯಕ್ಷವಾಗಿ ಕಾಣಿಸುವುದನ್ನು ನೋಡಿ ಕೂಡಾ ಇಬ್ಬರದು ಒಂದೇ ಜ್ಞಾನ ಎನ್ನುವುದು ಹೇಗೆ ಸಾಧ್ಯವಾಗುತ್ತದೆ?**

**ಉತ್ತರ :–** ಮೊದಲು ನೀನು ಹತ್ತಿರತ್ತಿರ ಇದೇ ಭಾವವಿರುವ ಪ್ರಶ್ನೆಯನ್ನು ಕೇಳಿದ್ದೀಯ. ಅದಕ್ಕೆ ನಾನು ಉತ್ತರವನ್ನು ಹೇಳುತ್ತಿದ್ದೇನೆ. ಅದು ಇನ್ನೂ ಪೂರ್ತಿಯಾಗಲಿಲ್ಲ. ಮಧ್ಯದಲ್ಲಿಯೇ ಅಂತಹ ಪ್ರಶ್ನೆ ಕೇಳಿರುವೆ, ಯಾವುದಕ್ಕಾದರೂ ಸ್ವಲ್ಪ ತಾಳ್ಮೆ ಅವಶ್ಯ. ಬೇಯಿಸಿರುವ ಕಡಲೇಬೇಳೆ ಒಳಕಲ್ಲಿನಲ್ಲಿ ರುಬ್ಬಿದರೇ ಹೂರಣವಾಗುವುದಕ್ಕೆ ಕನಿಷ್ಟ ಅರ್ಧಗಂಟೆಯಾದರೂ ಹಿಡಿಯುತ್ತದೆ. ಹಾಗೆಯೇ ನಿನ್ನ ಪ್ರಶ್ನೆಗೆ ಉತ್ತರ ಸಂಪೂರ್ಣವಾಗಬೇಕೆಂದರೇ ಕನಿಷ್ಟ ಅರ್ಧ ಗಂಟೆಯಾದರೂ ಹೇಳಬೇಕು. ಆದ್ದರಿಂದ ನನ್ನ ಉತ್ತರ ಮುಕ್ತಾಯವಾಗುವವರೆಗು ಸಹನೆಯಿಂದ ಕೇಳಬೇಕೆಂದು ಕೋರುತ್ತಿದ್ದೇವೆ. ಯಾವಾಗಾದರೇ ನೀನು ಕೇಳಿರುವ ಪ್ರಶ್ನೆಗಳಿಗೆ ಸಂಪೂರ್ಣವಾಗಿ ಉತ್ತರ ಬರುತ್ತದೋ ಆಗ ನನ್ನ ಉತ್ತರ ಮುಕ್ತಾಯವಾದಂತೆ ತಿಳಿಯಬೇಕು.

ಒಂದೇ ಸೂರ್ಯನೇ ಕೃತಯುಗದಲ್ಲಿ ಸೂರ್ಯನಾಗಿ, ಕಲಿಯುಗದಲ್ಲಿ ಜಿಬ್ರಯೇಲ್‌ಆಗಿ ಪೂರ್ವವು ಮನುವಿಗೆ ಹೇಳಿರುವ ಜ್ಞಾನವನ್ನೇ ಪುನಃ ಮುಹಮ್ಮದ್ ಪ್ರವಕ್ತರವರಿಗೆ ಹೇಳಿರುವುದಾಗಿದೆ. ಒಂದೇ ಸೂರ್ಯನೇ ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಮನುಷ್ಯರಿಗೆ ಒಂದೇ ಜ್ಞಾನವನ್ನೇ ಹೇಳಿದ್ದಾನೆ. ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಮನುಷ್ಯರಿಗೆ, ಬೇರೆಬೇರೆ ಹೆಸರುಗಳಿಂದ ಒಂದೇ ಸೂರ್ಯನು, ಒಂದೇ ಜ್ಞಾನವನ್ನು ಹೇಳಿದ್ದರೂ, ಅದು ಮನುಷ್ಯರ ಬುದ್ಧಿಗೆ ಒಂದೇ ವಿಧವಾದ ಗ್ರಹಿಸುವ ಶಕ್ತಿ ಇಲ್ಲದಿರುವುದರಿಂದ ಬೇರೆಬೇರೆ ವಿಧಗಳಾಗಿ ಅರ್ಥವಾಗಿದೆ. ಆದ್ದರಿಂದ ಒಂದೇ ಜ್ಞಾನವನ್ನೇ ಬೇರೆಬೇರೆ ವರ್ಗಗಳಾಗಿ

ಹೇಳಿಕೊಂಡು ಬೇರೆಬೇರೆ ಮತಗಳಾಗಿ, ಬೇರೆಬೇರೆ ಆಚರಣೆಗಳಾಗಿ ಹೇಳಿ ಕೊಳ್ಳುತ್ತಿದ್ದಾರೆ. ಮನುಷ್ಯನ ಬುದ್ಧಿಗೆ ಗ್ರಹಿಸುವ ಶಕ್ತಿ ಪ್ರಪಂಚ ವಿಷಯಗಳಾದರೇ ಕರ್ಮವನ್ನನುಸರಿಸಿ ಇರುತ್ತದೆ. ದೈವಿಕ ವಿಷಯಗಳಾದರೇ ಶ್ರದ್ಧೆಯನ್ನನುಸರಿಸಿ ಇರುತ್ತದೆ. **ಮನುಷ್ಯ ಬೇರೆಬೇರೆ ಶ್ರದ್ಧೆಗಳು ಹೊಂದಿರುವು ದರಿಂದ, ದೈವ ವಿಷಯಗಳ ಮೇಲೆ ಒಂದೇ ಶ್ರದ್ಧೆ ಇಲ್ಲದಿರುವುದರಿಂದ, ಮನುಷ್ಯನಿಗಿರುವ ಶ್ರದ್ಧೆ ಸ್ಥಾನವನ್ನನುಸರಿಸಿ ಜ್ಞಾನವು ಅವನ ಬುದ್ಧಿಗೆ ಅರ್ಥವಾಗುತ್ತದೆ.** ಆದ್ದರಿಂದ ದೇವರು ಒಬ್ಬನೇ ಆದರೂ, ಆತನ ಜ್ಞಾನವು ಒಂದೇ ಆದರೂ, ಮನುಷ್ಯರ ಶ್ರದ್ಧೆಯನ್ನನುಸರಿಸಿ ಮನುಷ್ಯರ ಬುದ್ಧಿಗೆ ಬೇರೆಬೇರೆ ವಿಧಗಳ ಗ್ರಾಹಿತವು ಉಂಟಾಗುತ್ತಿದೆ. ಒಂದೇ ವಾಕ್ಯವೇ ಅನೇಕಜನರಿಗೆ ಅನೇಕ ವಿಧಗಳಾಗಿ ಅರ್ಥವಾಗುವುದಕ್ಕೆ ಕಾರಣ ಅವನ ಬುದ್ಧಿಯೊಂದರ ಶ್ರದ್ಧಾ ಭೇದವೇ ಎಂದು ತಿಳಿಯಬೇಕು. ಒಂದೇ ಭಗವದ್ಗೀತೆ ಹಿಂದೂಗಳಿಗೆ ಒಂದು ವಿಧ, ಕ್ರೈಸ್ತರಿಗೆ ಇನ್ನೊಂದು ವಿಧ, ಮುಸ್ಲಿಮ್‌ರಿಗೆ ಮತ್ತೊಂದು ವಿಧವಾಗಿ ಅರ್ಥವಾಗಬಲ್ಲದು. ಹಾಗೆಯೇ ಒಂದೇ ಗ್ರಂಥಗಳಲ್ಲಿನ ವಾಕ್ಯವು ಮತವನ್ನನುಸರಿಸಿ, ಮನುಷ್ಯರನ್ನ ನುಸರಿಸಿ ಬೇರೆಬೇರೆ ವಿಧಗಳಾಗಿ ಅರ್ಥವಾಗುವುದಕ್ಕೆ ಅವಕಾಶವಿದೆ. ಈ ವ್ಯತ್ಯಾಸಗಳನ್ನು ಹೊರಗಿನ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ನೋಡಬಹುದು.

ಭಗವಂತನು ಹೇಳಿರುವುದು ಭಗವದ್ಗೀತೆಯೆಂದು ವ್ಯಾಸನು ಬರೆದಿರುವ ಗ್ರಂಥಕ್ಕೆ ಹೆಸರಿಡಲಾಗಿದೆ. ಆದರೇ ಅದನ್ನು ಭಗವಂತನು ಆಕಾಶ ಶಬ್ದದಿಂದ ಅನುವಾದ ಮಾಡಿ ಮನುಷ್ಯರ ಭಾಷೆಯಲ್ಲಿ ಹೇಳಿದ್ದಾನೆ. ಭಗವಂತನು ಆಕಾಶವಾಣಿ ಹೇಳಿರುವ ಜ್ಞಾನವನ್ನು ಆಕಾಶ ಭಾಷೆಯಿಂದ ಮನುಷ್ಯರ ಭಾಷೆಗೆ ಅನುವಾದಿಸಿ ಹೇಳಿದ್ದಾನೆ ಹೊರತು ಸ್ವತಃವಾಗಿ ಹೇಳಲಿಲ್ಲ. ಆದ್ದರಿಂದ ಭಗವದ್ಗೀತೆ ಎಂಬ ಹೆಸರು ಕೃಷ್ಣನಿಗೆ ಇಷ್ಟವಿಲ್ಲ. ಮೋಷೇಗೆ ಯುಕ್ತವಯಸ್ಸು ಬಂದಾಗ ಕೃಷ್ಣನೇ ಸ್ವತಃವಾಗಿ ಸ್ವಪ್ನದಲ್ಲಿ ಭಗವದ್ಗೀತಾ ಗ್ರಂಥವನ್ನು ಕೊಟ್ಟಿದ್ದಾನೆ. ಆಗ ಗ್ರಂಥದ ಹೆಸರು 'ಭಗವದ್ಗೀತೆ' ಎಂದು ಹೇಳದೆ 'ತೌರಾತ್' ಎಂದು ಹೇಳಿದ್ದಾನೆ. ಗ್ರಂಥದಲ್ಲಿ ಮುಖ್ಯವಾಗಿ ಮೂರು ಕಾಣಿಸದ ಆತ್ಮಗಳನ್ನು ಕುರಿತು

ಹೇಳಿರುವುದರಿಂದ ಮೂರು ಕತ್ತಲೆ ರಾತ್ರಿಗಳ ಹೆಸರನ್ನು ಭಗವದ್ಗೀತೆಗೆ ಇಟ್ಟು "ತೌರಾತ್" ಎಂದು ಹೇಳಿದ್ದಾರೆ. ತೌರಾತ್ ಎಂದರೆ 'ಮೂರು ರಾತ್ರಿಗಳೆಂದು' ತೆಲುಗು ಅರ್ಥವೇ ಎಂದು ತಿಳಿಯಬೇಕು. ಆಕಾಶವಾಣಿ ಮೂರು ಆತ್ಮಗಳ ಬೋಧನೆಯನ್ನು ಮೊದಲು ವಿಶ್ವದಲ್ಲಿ ಮೇಘಗಳ ಗರ್ಜನೆ ರೂಪದಲ್ಲಿ ಹೇಳಿರುವುದರಿಂದ, ಭಗವದ್ಗೀತೆ ಎಂಬ ಹೆಸರಿಗಿಂತಲೂ ತೌರಾತ್ ಎಂಬ ಹೆಸರೇ ಆ ಗ್ರಂಥಕ್ಕೆ ಯೋಗ್ಯವಾದುದೆಂದು ಕೃಷ್ಣನ ಅಭಿಪ್ರಾಯ. ಕೃಷ್ಣನು ಪ್ರತ್ಯಕ್ಷವಾಗಿ ಅಲ್ಲದೇ ಕನಸಿನಲ್ಲಿ ಮೋಷೇಗೆ ಕೊಟ್ಟಿರುವುದರಿಂದ ಅದು ಸೂಕ್ಷ್ಮ ಗ್ರಂಥವಾಗಿ ಇತರರಿಗೆ ಕಾಣಿಸದಿರುವುದಾಗಿ ಮೋಷೇಗೆ ಮಾತ್ರವೇ ಕಾಣಿಸುವುದಾಗಿದ್ದಿತ್ತು. ಮೋಷೇಗೆ ಕಣ್ಣು ತೆರೆದರೇ ಪ್ರಪಂಚ ಕಾಣಿಸಿದಂತೆಯೇ ರಾತ್ರಿಹೊತ್ತು ಕಣ್ಣು ಮುಚ್ಚಿದರೇ ತೌರಾತ್ ಗ್ರಂಥ ಕಾಣಿಸುತ್ತಿತ್ತು. ರಾತ್ರಿ ಹೊತ್ತು ನಿದ್ರೆ ಮಾಡುವವರೆಗು ತೌರಾತ್ ಗ್ರಂಥವನ್ನು ಮೋಷೇ ಓದುತ್ತಿದ್ದನು. ತಾನು ತೌರಾತ್ ಗ್ರಂಥದಲ್ಲಿ ಓದಿರುವುದನ್ನೇ ಹೊರಗೆ ಪ್ರಪಂಚದಲ್ಲಿನ ಮನುಷ್ಯರಿಗೆ ಹೇಳುತ್ತಿದ್ದನು. ಹಾಗೆ ಹೇಳುವುದರಿಂದ ಮೋಷೇಯಿಂದ ಜ್ಞಾನ ಕೇಳಿದವರೆಲ್ಲಾ ಮೋಷೇ ಹೇಳಿರುವುದನ್ನು ಮೋಷೇ ಧರ್ಮಶಾಸ್ತ್ರವೆನ್ನುತ್ತಿದ್ದರು. ಈ ವಿಧವಾಗಿ ಮೋಷೇ ಹೊರತು ಇತರರು ಯಾರೂ ತೌರಾತ್ ಗ್ರಂಥವನ್ನು ನೋಡಲಿಲ್ಲ. ಮೋಷೇಗೆ 54 ವರ್ಷಗಳು ಕಳೆದ ನಂತರ, ಒಂಬತ್ತು ವರ್ಷಗಳು ಮೋಷೇ ಶರೀರದಲ್ಲಿ ಕೃಷ್ಣನೇ ಸ್ವತಃವಾಗಿ ನಿವಾಸಿಸಿ, ತನ್ನ ಭಗವದ್ಗೀತೆ ಜ್ಞಾನವನ್ನು ಹೇಳುವುದೇ ಅಲ್ಲದೇ, ಮುಂಬರುವ ಯೇಸು ಜನ್ಮವನ್ನು ಕುರಿತಾದ ಸಂಘಟನೆಗಳನ್ನು ಕುರಿತು ಹೇಳುತ್ತಿದ್ದನು.

ಕಾಲಕಳೆದಂತೆ ಮೋಷೇ ಚರಿತ್ರೆ 63 ವರ್ಷಗಳಿಗೆ ನಿಂತುಹೋಯಿತು. ಆದರೂ ಆತನು ಹೇಳಿರುವ ಜ್ಞಾನ, ಬರೆದಿರುವ ಲೇಖನಗಳನ್ನು ಯೇಸು ಬರುವವರೆಗು ಇದ್ದವು. ನಂತರ ಯೇಸು ಜೀವನದಲ್ಲಿ ಲೇಖನಗಳು ನೆರವೇರಿವೆ. ಭಗವದ್ಗೀತೆಯನ್ನು ಹೇಳಿರುವ ಕೃಷ್ಣನೇ ಮೋಷೇಯಾಗಿ ಅದೇ ಜ್ಞಾನವನ್ನು ಹೇಳುವುದರಿಂದ, ನಂತರ ಯೇಸುವಾಗಿ ಬಂದಾಗ ಕೂಡಾ ಭಗವದ್ಗೀತೆಗೆ

ಸಂಬಂಧವಾಗಿರುವ ಜ್ಞಾನವನ್ನೇ ಹೇಳುವುದರಿಂದ, ಭಗವದ್ಗೀತೆ, ನಾಲ್ಕು ಸುವಾರ್ತೆಗಳ ಜ್ಞಾನ ಬೇರೆಯೆಂದು ಹೇಳುವುದಕ್ಕೆ ಅವಕಾಶವಿಲ್ಲ, ಎರಡೂ ಒಂದೇ ಎಂದು ಹೇಳಬಹುದು. ಅಷ್ಟೇಅಲ್ಲದೆ ಕೃತಯುಗದಲ್ಲಿ ಮನುವಿಗೆ ಹೇಳಿರುವ ಸೂರ್ಯನು, ಕಲಿಯುಗದಲ್ಲಿ ಮುಹಮ್ಮದ್ ಪ್ರವಕ್ತರಿಗೆ ಹೇಳಿರುವ ಜಿಬ್ರಯೇಲ್ ಎನ್ನುವಾತನು ಇಬ್ಬರು ಒಬ್ಬರೇ ಆಗಿರುವುದರಿಂದ, ಪ್ರಥಮ ದೈವಗ್ರಂಥವಾದ ತೌರಾತ್‌ನಲ್ಲಿರುವ ಜ್ಞಾನವೇ ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿದೆ. ಆಗ ಹೇಳಿದವನು, ನಂತರ ಹೇಳಿದವನು ಇಬ್ಬರು ಒಂದೇ ಜ್ಞಾನವನ್ನೇ ಬೋಧಿಸುವುದರಿಂದ, ಭಗವದ್ಗೀತೆ (ತೌರಾತ್) ಗ್ರಂಥದಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ಒಂದೇ ಜ್ಞಾನವಿದೆಯೆಂದು ಹೇಳಬಹುದು. ಭಗವದ್ಗೀತೆ (ತೌರಾತ್) ಗ್ರಂಥದಲ್ಲಿ ಶ್ಲೋಕಗಳಿದ್ದರೇ ಖುರಾನ್ ಗ್ರಂಥದಲ್ಲಿ ಆಯತ್‌ಗಳೆಂಬ ವಾಕ್ಯಗಳಿವೆ. ಹೇಳಿರುವ ವಾಕ್ಯಗಳಲ್ಲಿಯೂ, ಬರೆದಿರುವ ಭಾಷೆಯಲ್ಲಿಯೂ ವ್ಯತ್ಯಾಸ ಇರಬಹುದು ಆದರೇ, ಹೇಳಿರುವ ಜ್ಞಾನವು ಎರಡರಲ್ಲಿಯೂ ಒಂದೇ ಇದೆ. ಆಳವಾಗಿ ನೋಡಿದರೇ ಸ್ವಲ್ಪ ಕೂಡಾ ವ್ಯತ್ಯಾಸ ಕಾಣಿಸುವುದಿಲ್ಲ.

ಮನುಷ್ಯರು ಮೂರು ಗ್ರಂಥಗಳನ್ನು ಅವಗಾಹನೆ ಮಾಡಿಕೊಳ್ಳುವುದರಲ್ಲಿ ಅವಗಾಹನಾ ಲೋಪದಿಂದ ಗ್ರಹಿಸಿಕೊಳ್ಳುವ ಶಕ್ತಿ ಇಲ್ಲದೇ, ಬೇರೆಬೇರೆ ವಿಧವಾಗಿ ಅರ್ಥ ಮಾಡಿಕೊಂಡು ಬೇರೆಬೇರೆ ಗ್ರಂಥಗಳಾಗಿ, ಬೇರೆಬೇರೆ ಮತಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಪ್ರಥಮ ದೈವಗ್ರಂಥವನ್ನು ಹೇಳಿರುವ ಸೂರ್ಯನೇ ಅಂತಿಮ ದೈವಗ್ರಂಥವನ್ನು ಹೇಳಿದ್ದಾನೆ. ಅದರಿಂದ ತೌರಾತ್ (ಭಗವದ್ಗೀತೆ), ಖುರಾನ್ ಎರಡೂ ಒಂದೇ ಜ್ಞಾನವೆಂದು ಹೇಳಬಹುದು. ಪ್ರಥಮ ದೈವಗ್ರಂಥವಾದ ಆಕಾಶವಾಣಿ ಹೇಳಿರುವ ಗುಡುಗಿನ ಭಾಷೆಯನ್ನು ಮನುಷ್ಯರ ಭಾಷೆಯಲ್ಲಿ ಅನುವಾದಿಸಿ ಹೇಳಿರುವ ಕೃಷ್ಣನೇ ಕಲಿಯುಗದಲ್ಲಿ ಯೇಸುವಾಗಿ ಬಂದು ಪ್ರಥಮ ದೈವ ಗ್ರಂಥದಲ್ಲಿನ ಜ್ಞಾನವನ್ನೇ ಹೇಳಿರುವುದರಿಂದ, ಯೇಸು ಹೇಳಿರುವ ದ್ವಿತೀಯ ದೈವಗ್ರಂಥವಾದ ಬೈಬಲ್‌ನಲ್ಲಿಯೂ ತೌರಾತ್ (ಭಗವದ್ಗೀತೆ) ಬೈಬಲ್

ಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯೆಂದು ಹೇಳಬಹುದು. ಈ ವಿಧವಾಗಿ ಮೂರು ಗ್ರಂಥಗಳ ಪೂರ್ವಾಪರಗಳನ್ನು ವಿಷಧೀಕರಿ ನೋಡಿದರೇ ಒಂದರೊಂದಿಗೆ ಮತ್ತೊಂದು ಸಂಬಂಧಪಟ್ಟಿರುವುದರಿಂದ ಎಲ್ಲದರಲ್ಲೂ ಒಂದೇ ಜ್ಞಾನವಿದೆ ಯೆಂದು ತಿಳಿಯುತ್ತಿದೆ. ಮೂರು ಗ್ರಂಥಗಳಲ್ಲಿ ಮುಖ್ಯವಾಗಿ ಮೂರು ಆತ್ಮಗಳನ್ನು ಕುರಿತು ಹೇಳಿರುವ ಜ್ಞಾನವೇ ಇದೆ. ಆದರೇ 'ಮತ' ಎಂಬ ಅಧರ್ಮವು ಕಲಿಯುಗದಲ್ಲಿ ಪ್ರತ್ಯೇಕವಾಗಿ ಬಂದಿರುವುದರಿಂದ ಮೂರು ಗ್ರಂಥಗಳ ಜ್ಞಾನವು ಒಂದೇ ಎಂದು ತಿಳಿಯದೇ ಹೋಗಿದೆ.

ಅಂತಿಮ ದೈವಗ್ರಂಥ ಖುರಾನ್ ಗ್ರಂಥದಲ್ಲಿ ಎರಡನೆಯ ಸೂರಾ 53ನೇ ಆಯತ್‌ನಲ್ಲಿ 25ನೇ ಸೂರಾ 1ನೇ ಆಯತ್‌ನಲ್ಲಿ **'ಒರೆಕಲ್ಲು'** ಎಂಬ ಪದವನ್ನು ಉಪಯೋಗಿಸಿ ಒರೆಕಲ್ಲಾದ ಖುರಾನ್ ಗ್ರಂಥವನ್ನು ನಿಮಗೆ ಕೊಟ್ಟಿದ್ದೇನೆ ಎಂದು ಅಲ್ಲಾಹ್ (ದೇವರು) ಹೇಳಿದಂತೆ ಇದೆ. ಒರೆಕಲ್ಲು ಎಂದರೇ ಏನು? ಎಂಬ ಸಂಶಯವು ಬಹಳ ಜನರಲ್ಲಿ ಇದೆ. ಆದರೇ ಸೂರಾ ಎರಡು ಆಯತ್ 53ರ ರಲ್ಲಿ ಹೇಳಿದಾಗ ಇದು ಸತ್ಯಾಸತ್ಯಗಳನ್ನು ನಿರ್ಣಯಿಸಿ ಹೇಳುವುದೆಂದು ಒಂದುಮಾತು ಹೇಳಿದ್ದಾನೆ. ಅದನ್ನನುಸರಿಸಿ ಮನುಷ್ಯನ ಶರೀರದಲ್ಲಿರುವ ಷುಗರ್‌ನ್ನು ಅಳತೆಮಾಡುವುದಕ್ಕೆ (ತೋರಿಸುವುದಕ್ಕೆ) ಡಯಾಮೀಟರ್ ಇರುವಂತೆ, ಮನುಷ್ಯನ ಶರೀರದಲ್ಲಿ ಉಷ್ಣವನ್ನು ಅಳೆಯುವುದಕ್ಕೆ ಅಥವಾ ತಿಳಿಸುವುದಕ್ಕೆ ಥರ್ಮಾಮೀಟರ್ ಇರುವಂತೆ, ನೀರಿನಲ್ಲಿನ ಉಪ್ಪಿನಾಂಶವನ್ನು ತೋರಿಸುವುದಕ್ಕೆ ವಾಟರ್ ಮೀಟರ್ ಇರುವಂತೆ, ಒಂದು ವಾಕ್ಯದಲ್ಲಿನ ಜ್ಞಾನವನ್ನು ಅಳೆಯುವುದಕ್ಕೆ ಒಂದು ಒರೆಕಲ್ಲು ಎಂಬ ಸತ್ಯಾಸತ್ಯ ವೀವೇಕವುಳ್ಳದ್ದಾಗಿದೆ.

ವಾಸ್ತವವಾಗಿ ಬಂಗಾರದ ವಸ್ತುವಿನಲ್ಲಿ ಬಂಗಾರದ ಸಾಂಧ್ರತೆ ಎಷ್ಟಿದೆಯೆಂದು ನೋಡುವುದಕ್ಕೆ ಒರೆಕಲ್ಲನ್ನು ಉಪಯೋಗಿಸಿ ನೋಡುತ್ತಾರೆ. ಒರೆಕಲ್ಲನ್ನು ಸಾಣೆಕಲ್ಲು ಎಂದು ಕೂಡಾ ಕರೆಯುತ್ತಾರೆ. ಗರುಕುತನದಿಂದ ಕೂಡಿಕೊಂಡಿರುವ ಕಪ್ಪನೆಯ ಕಲ್ಲನ್ನು ಒರೆಕಲ್ಲು ಅಥವಾ ಸಾಣೆಕಲ್ಲು ಎಂದು

ಕರೆಯುತ್ತಾರೆ. ಮಸೆಯುವಕಲ್ಲು ಎಂದು ಕೂಡಾ ಕರೆಯುತ್ತಾರೆ. ಹೇಗೆ ಹೇಳಿದರೂ ಆ ಕಲ್ಲಿನಿಂದ ಬಂಗಾರವನ್ನು ಸ್ವಲ್ಪ ಉಜ್ಜಿನೋಡಿ ಉಜ್ಜಿದ ಬಂಗಾರದಲ್ಲಿ ಬಂಗಾರ ಶೇಕಡ ಎಷ್ಟು ಇದೆಯೆಂದು ನೋಡಿ ಹೇಳಬಲ್ಲರು. ಒರೆಕಲ್ಲಿನಿಂದ ಗೀಚಿ ನೋಡಿ ಹೇಳಬಲ್ಲ ನೈಪುಣ್ಯ ಅಕ್ಕಸಾಲಿಗ ಕೆಲಸಮಾಡುವವರಿಗೆ ಮಾತ್ರವಿರುತ್ತದೆ. ಅಕ್ಕಸಾಲಿಗ ಕೆಲಸ ಮಾಡುವವರು ಒರೆಕಲ್ಲಿನ ಆಧಾರದಿಂದಲೇ ಬಂಗಾರವನ್ನು ಗೀಚಿ ಹೇಳಬಲ್ಲರು. ಹಾಗೆ ಗೀಚುವುದರಿಂದ ಬಂಗಾರ ವಸ್ತುವಿನೊಳಗೆ ಅಡಗಿರುವ ಕಾಲುಷ್ಯ ಇಲ್ಲವೇ ಇತರ ಲೋಹಗಳ ಕಲಬೆರಕೆ ಹೊರಬೀಳುತ್ತದೆ. ಬಂಗಾರ ವಸ್ತುವಿನೊಳಗೆ ಅಡಗಿರುವ ಇತರ ಲೋಹಗಳನ್ನು ಗುರುತಿಸುವುದಕ್ಕೆ ಒರೆಕಲ್ಲಿನಿಂದ ಗೀಚಿ ನೋಡಬೇಕಾಗಿದೆ. ಬಂಗಾರವನ್ನು ಹೇಗೆ ಪರೀಕ್ಷಿಸುತ್ತಿದ್ದೇವೋ ಹಾಗೆಯೇ ಒಂದು ಗ್ರಂಥದಲ್ಲಿ ಎಷ್ಟು ಜ್ಞಾನವಿದೆ ಎಂದು ತಿಳಿಯುವುದಕ್ಕೆ ಒರೆಕಲ್ಲಿನಂತಹ ಶಾಸ್ತ್ರಬದ್ಧತೆ ಹೊಂದಿರುವ ಗ್ರಂಥದೊಂದಿಗೆ ನೋಡಬಹುದು. ಬ್ರಹ್ಮವಿದ್ಯಾ ಶಾಸ್ತ್ರವನ್ನನುಸರಿಸಿ ಯಾವ ಗ್ರಂಥದಲ್ಲಿ ಶಾಸ್ತ್ರೀಯವಾದ ಜ್ಞಾನವಿದೆಯೋ, ಯಾವ ಗ್ರಂಥದಲ್ಲಿ ಅಶಾಸ್ತ್ರೀಯ ವಾದ ಜ್ಞಾನವಿದೆಯೋ ಹೇಳಬಹುದು. ಶಾಸ್ತ್ರವನ್ನು **'ಒರೆಕಲ್ಲು'** ಎನ್ನುತ್ತಿದ್ದೇವೆ. ಒರೆಕಲ್ಲನ್ನು ಕುರಿತು ವಿವರವಾಗಿ ತಿಳಿದರೇ ಹೀಗಿದೆ.

ಭೂಮಿಮೇಲೆ ಷಟ್ ಶಾಸ್ತ್ರಗಳೆಂದು ಆರು ಶಾಸ್ತ್ರಗಳಿವೆ. ಆರು ಶಾಸ್ತ್ರಗಳು ಒರೆಕಲ್ಲಿನಂತಹುಗಳೇ ಆದರೂ ಅದರಲ್ಲಿ ಐದು ಶಾಸ್ತ್ರಗಳು ಪ್ರಪಂಚ ವಿಷಯಗಳಿಗೆ ಸಂಬಂಧಿಸಿರುವವು. ಅವುಗಳ ಹೆಸರುಗಳು ಗಣಿತ, ಖಗೋಳ, ರಸಾಯನ, ಭೌತ, ಜ್ಯೋತಿಷ್ಯ ಶಾಸ್ತ್ರಗಳೆಂದು ಹೇಳುತ್ತೇವೆ. ಕೊನೆಯಲ್ಲಿ ಆರನೆಯ ಶಾಸ್ತ್ರ ಎಲ್ಲದಕ್ಕಿಂತಲೂ ದೊಡ್ಡಶಾಸ್ತ್ರ. 'ದೊಡ್ಡ' ಎಂಬ ಮಾತನ್ನು 'ಬ್ರಹ್ಮ' ಎಂದು ಕರೆಯುತ್ತೇವೆ. ಆದ್ದರಿಂದ ಆ ಶಾಸ್ತ್ರವನ್ನು 'ಬ್ರಹ್ಮವಿದ್ಯಾ ಶಾಸ್ತ್ರ' ಎಂದು ಹೇಳಬಹುದು. ದೊಡ್ಡ ಶಾಸ್ತ್ರದ ಮೂಲಕ ಯಾವ ಗ್ರಂಥದಲ್ಲಿ ಎಷ್ಟು ಜ್ಞಾನವಿದೆಯೋ, ಯಾವ ಮಾತಿನಲ್ಲಿ ಎಷ್ಟು ಜ್ಞಾನವಿದೆಯೋ, ಯಾವ ವಾಕ್ಯದಲ್ಲಿ ಎಷ್ಟು ಜ್ಞಾನವಿದೆಯೋ ಹೇಳಬಹುದು. ಆದರೇ ಅಂತಿಮ ದೈವಗ್ರಂಥವಾದ

ಖುರಾನನ್ನು ದೇವರು 'ಒರೆಕಲ್ಲು' ಎಂದು ಹೇಳಿದ್ದಾನೆ, ಅಂದರೇ ಅದು ದೊಡ್ಡ ಶಾಸ್ತ್ರವೆಂದು ಅರ್ಥ. ದೊಡ್ಡ ಶಾಸ್ತ್ರವೆಂದರೇ ಬ್ರಹ್ಮವಿದ್ಯಾಶಾಸ್ತ್ರವೆಂದು ಅರ್ಥ. ಅದನ್ನೇ ಬ್ರಹ್ಮವಿದ್ಯಾಶಾಸ್ತ್ರವೆಂದು ಕೂಡಾ ಕರೆಯುತ್ತಿದ್ದೇವೆ. ಖುರಾನ್ ಬ್ರಹ್ಮವಿದ್ಯಾ ಶಾಸ್ತ್ರವಾದರೇ ಅದು ಆದಿಯಲ್ಲಿ ಹುಟ್ಟಿರುವ ಜ್ಞಾನವಾದ ಪ್ರಥಮ ದೈವಗ್ರಂಥದಲ್ಲಿನ ಜ್ಞಾನವೇ ಆಗಿರುವುದರಿಂದ ತೌರಾತ್ ಎನ್ನಲ್ಪಡುವ ಭಗವದ್ಗೀತೆ ಮೊದಲ ಬ್ರಹ್ಮಶಾಸ್ತ್ರ. ನಂತರ ಅದೇ ದ್ವಿತೀಯ ಗ್ರಂಥವಾಗಿ ಬಂದಿದೆ. ನಂತರ ಅದೇ ಜ್ಞಾನವೇ ತೃತೀಯ ಗ್ರಂಥವಾಗಿ ಬಂದಿದೆ. ತೃತೀಯ ದೈವಗ್ರಂಥವು ಒರೆಕಲ್ಲಾದಾಗ ಉಳಿದ ಎರಡು ಗ್ರಂಥಗಳು ಕೂಡಾ ಒರೆಕಲ್ಲಿನಹಾಗೆಯೇ ಇವೆಯೆಂದು ಹೇಳಬಹುದು. ಮೂರು ಗ್ರಂಥಗಳ ಶಾಸ್ತ್ರಬದ್ಧವಾದ ಜ್ಞಾನದಿಂದ ಮನುಷ್ಯರು ಆಚರಿಸುವ ಭಕ್ತಿ ವಿಧಾನಗಳು ಸರಿಯಾದವೋ ಅಲ್ಲವೋ ಹೇಳಬಹುದು. ಮನುಷ್ಯರಲ್ಲಿರುವ ಜ್ಞಾನವು ಸರಿಯಾದುದೋ ಅಲ್ಲವೋ ಹೇಳುವುದಕ್ಕೆ ಒರೆಕಲ್ಲಿನಂತಿರುವ ಮೂರು ದೈವಗ್ರಂಥಗಳು ಕೆಲಸಕ್ಕೆ ಬರುತ್ತವೆ. ಈ ಮೂರು ಗ್ರಂಥಗಳು ಮೂರು ಒರೆಕಲ್ಲುಗಳಂತೆ, ಮೂರು ಬ್ರಹ್ಮವಿದ್ಯಾ ಶಾಸ್ತ್ರಗಳಾಗಿ ಇವೆ. ಆದ್ದರಿಂದ ಅವುಗಳಿಂದಲೆ ಮನುಷ್ಯರ ಜ್ಞಾನವನ್ನು, ಮನುಷ್ಯರ ಆಚರಣೆಯನ್ನು, ಮನುಷ್ಯರ ಮತಗಳನ್ನು ಒರೆಕಲ್ಲಿನಿಂದ ಗೀಚಿ ಜ್ಞಾನವಿದೆಯೋ ಇಲ್ಲವೋ ನೋಡಿ ಹೇಳಬಹುದು. ಮೂರು ಗ್ರಂಥಗಳು ಶಾಸ್ತ್ರಬದ್ಧವಾದ ಜ್ಞಾನವೇಯೆಂದು ಹೇಳುತ್ತಾ, ಗ್ರಂಥಗಳಲ್ಲಿನ ಜ್ಞಾನವು ಅರ್ಥವಾಗದೆ ಅಜ್ಞಾನವಾಗಿ ನಡೆಯುವವರ ಆರಾಧನೆಗಳು, ಆಚಾರಗಳು ಜ್ಞಾನವಂತವಾದವೋ ಅಲ್ಲವೋ ತೂಕ ಹಾಕಿ ಹೇಳಬಹುದು.

ಮನುಷ್ಯರು ಮೂರು ಮತಗಳಲ್ಲಿ ಮೂರು ವಿಧಗಳ ಆರಾಧನೆಗಳು, ಪ್ರಾರ್ಥನೆಗಳು ಹೊಂದಿದ್ದಾರೆ. ಮೂರು ಮತಗಳವರು ಮಾಡುವ ಪ್ರಾರ್ಥನೆಗಳನ್ನು 'ಒರೆಕಲ್ಲು' ಎಂಬ ಮೂರು ಗ್ರಂಥಗಳನ್ನು ಅದರಲ್ಲಿನ ಶಾಸ್ತ್ರ ಸೂತ್ರಗಳನ್ನು ಅನುಸರಿಸಿ ಅವು ಸಕ್ರಮವಾದವೋ ಅಲ್ಲವೋ ನಿರ್ಣಯಿಸಿ ಹೇಳಬಹುದು. ಮೊದಲು ಹಿಂದೂಮತದಲ್ಲಿ ಸಾಧಾರಣ ಮನುಷ್ಯರಲ್ಲದೇ

ಉಳಿದ ಸ್ವಾಮೀಜಿಗಳು, ಸನ್ಯಾಸಿಗಳು, ಪಂಡಿತರು ಮೊದಲಾದವರು ಮಾಡುವ ಆರಾಧನೆಗಳನ್ನು ಕುರಿತು ಒರೆಕಲ್ಲಿನಿಂದ ಗೀಚಿ ಸಾಣೆಇಟ್ಟು ನೋಡೋಣ. ಹಿಂದೂಗಳಲ್ಲಿ 'ಜ್ಞಾನಿಗಳು' ಎಂದು ಹೆಸರುವಾಸಿಯಾಗಿರುವವರೇ ದೇವರ ಆರಾಧನೆಗಳು ಮಾಡುತ್ತಿರುವರು. ಅವರು ಮಾಡುವ ಆರಾಧನೆಗಳಲ್ಲಿ ಯಜ್ಞಗಳು ಮೊದಲನೆಯ ವಿಧ. ಯಜ್ಞಗಳು ಮಾಡುವುದಕ್ಕೆ ವೇದಪಠನೆ ಅವಶ್ಯ. ಯಜ್ಞಗಳು ಮಾಡುತ್ತಿರುವಾಗ ವೇದಗಳು ಓದುತ್ತಾ, ಸಂಸ್ಕೃತ ಭಾಷೆಯಲ್ಲಿನ ವೇದಮಂತ್ರಗಳು ಹೇಳುತ್ತಿರುತ್ತಾರೆ. ಅವುಗಳನ್ನು ದೇವರು ಖಂಡಿಸುತ್ತಿದ್ದಾನೆ. ಭಗವದ್ಗೀತೆ ಎಂಬ ಒರೆಕಲ್ಲನ್ನು ಉಪಯೋಗಿಸಿ ನೋಡಿದರೇ ಬಾಹ್ಯಯಜ್ಞಗಳು ಸ್ವಲ್ಪವಾದರೂ ಜ್ಞಾನವಲ್ಲವೆಂದು ತಿಳಿಯುತ್ತಿದೆ. ಈ ಗ್ರಂಥದ ಮೊದಲಿನಲ್ಲಿಯೇ ಪ್ರಾರ್ಥನೆ ಕುರಿತು ಸ್ವಲ್ಪ ಬರೆದಿದ್ದೇವೆ. ಆದರೇ ಹಾಗೆ ಎಷ್ಟು ವಿವರವಾಗಿ, ಎಷ್ಟು ಸತ್ಯವಾಗಿ ಹೇಳಿದರೂ ನಮ್ಮ ಮಾತು ಕೇಳದೇ ಅವರ ಅಭ್ಯಾಸದ ಪ್ರಕಾರ ಅವರು ಮಾಡುತ್ತಾ, ಅವರಿಗೆ ತಿಳಿದಿರುವುದೇ ಸತ್ಯವೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅವರು ಅಂದುಕೊಳ್ಳುವುದರಿಂದ ನಮಗೆ ಬಂದಿರುವ ನಷ್ಟ ಏನೂ ಇಲ್ಲ ಆದರೇ, ಅವರು ದೇವರ ಮಾತಿಗೆ ವಿರುದ್ಧವಾಗಿ ನಡೆದವರಾಗುತ್ತಾರೆ. ಅದರಿಂದ ದೇವರ ಮಾತಿಗೆ ಲೋಪ ಏರ್ಪಡುತ್ತಿದೆ. ದೇವರ ಗೌರವಕ್ಕೆ ಭಂಗ ಉಂಟಾಗುತ್ತಿರುವುದರಿಂದ ದೇವರೇ ಯಾವುದು ನಿಜವಾದ ಜ್ಞಾನವೋ, ಯಾವುದು ನಿಜವಾದ ಜ್ಞಾನವಲ್ಲವೋ ತಿಳಿಯುವಂತೆ, ಜ್ಞಾನದಲ್ಲಿ ಸತ್ಯಾಸತ್ಯಗಳನ್ನು ನಿರ್ಧಾರಿಸಿ ಹೇಳುವುದಕ್ಕೆ ಒರೆಕಲ್ಲನ್ನು ನೀಡಿದ್ದಾನೆ. ಅದೇ ತನ್ನ ಜ್ಞಾನದಲ್ಲಿನ ಶಾಸ್ತ್ರಬದ್ದತೆ, ಶಾಸ್ತ್ರ ಬದ್ಧತೆ ಹೊಂದಿರುವ ತನ್ನ ಗ್ರಂಥದ ಮೂಲಕವೇ ಸತ್ಯಾಸತ್ಯಗಳನ್ನು ತಿಳಿಯಬಹುದು.

ಈಗ ನಾವು ಸ್ವತಃವಾಗಿ ಏನೂ ಹೇಳದೇ ದೈವಗ್ರಂಥಗಳಲ್ಲಿನ ಒರೆಕಲ್ಲಿನಂತಹ ಜ್ಞಾನದೊಂದಿಗೆ ಜ್ಞಾನವೊಂದರ ಸತ್ಯಾಸತ್ಯಗಳನ್ನು ನಿರ್ಣಯಿಸಿ ಹೇಳುತ್ತಿದ್ದೇವೆ. ಪ್ರಜೆಗಳೆಲ್ಲರನ್ನು ದೇವರ ಭಾವದ ಪ್ರಕಾರ ನಡೆಸುವುದಕ್ಕೇ ಇಷ್ಟು ಪ್ರಯತ್ನ ಮಾಡುತ್ತಿದ್ದೇವೆ. ಮತಬೇಧವಿಲ್ಲದೇ ಸ್ವಚ್ಛವಾದ ಜ್ಞಾನವನ್ನು

ತಿಳಿಸುವುದೇ ನಮ್ಮ ಕರ್ತವ್ಯವಾಗಿ ತಿಳಿಯುತ್ತಿದ್ದೇವೆ. ಈದಿನ ಮತವೆಂಬ ರೋಗ ಪ್ರತಿ ಮನುಷ್ಯನಿಗೂ ಅಂಟಿಕೊಂಡಿದೆ. ಮತವೆಂಬ ರೋಗವು ಒಂದು ಜಾಢ್ಯದಂತೆ ತಯಾರಾಗಿ ಮನುಷ್ಯನಲ್ಲಿ ನರನರಗಳಲ್ಲಿಯೂ ಜೀರ್ಣಿಸಿಕೊಂಡು ಹೋಗಿದೆ. ಹೇಗೆ ಜೀರ್ಣಿಸಿದೆ ಎಂದು ತಿಳಿಯುವುದಕ್ಕೆ ಚಿಕ್ಕ ಉದಾಹರಣೆಯಾಗಿ ಒಂದು ವಿಷಯವನ್ನು ಪ್ರಸ್ತಾಪಿಸುತ್ತೇವೆ ನೋಡಿ. ಈ ವಿಷಯವನ್ನು ಗಮನಿಸಿದರೇ ಈದಿನ ಮತವೆನ್ನುವುದು ಮನುಷ್ಯರಲ್ಲಿ ಎಷ್ಟು ಆಳವಾಗಿ ಹೂತುಕೊಂಡು ಹೋಗಿದೆಯೋ ಅರ್ಥವಾಗಬಲ್ಲದು. ಈದಿನ ಮೂರು ಮತಗಳವರು ನಮ್ಮ ಗ್ರಂಥಗಳೆಂದು ಹೇಳುವ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳನ್ನು ನಾವು ದೈವಗ್ರಂಥಗಳಾಗಿ ಹೇಳುತ್ತಿದ್ದೇವೆ. ಮೂರು ದೈವಗ್ರಂಥಗಳು ಹೇಗೆ ತಯಾರಾಗಿವೆಯೋ ನಮಗೆ ಗೊತ್ತು. ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯೆಂದು, ಅದು ಸೃಷ್ಠಿ ಆದಿಯಲ್ಲಿ ದೇವರು ಹೇಳಿರುವ ಜ್ಞಾನವೇ ಎಂದು, ತಿಳಿಯುವುದರಿಂದ ಮೂರು ಗ್ರಂಥಗಳನ್ನು ಸಮಾನವಾಗಿ ಗೌರವಿಸುತ್ತಿದ್ದೇವೆ. ನಮ್ಮ ಉದ್ದೇಶಕ್ಕೆ ಸರಿಹೋಗುವ ವಿಧಾನವಾಗಿ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 5, ಆಯತ್ 68 ರಲ್ಲಿ ಅಲ್ಲಾಹ್ (ದೇವರು) ಈ ವಿಧವಾಗಿ ಹೇಳಿದ್ದಾನೆ. **(5–68) "ಓ ಗ್ರಂಥ ವಾಹಕರೇ! ನೀವು ತೌರಾತನ್ನು, ಇಂಜೀಲನ್ನು, ನಿಮ್ಮ ಪ್ರಭು ಕಡೆಯಿಂದ ನಿಮ್ಮ ಬಳಿಗೆ ಕಳುಹಿಸಲಾದ ಅದನ್ನು (ಖುರಾನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಲ್ಲೂ ಇಲ್ಲದಂತೆಯೇ"** ಎಂದು ಇರುವುದರಿಂದ ನಾವು ಎಲ್ಲರಿಗೂ ಮೂರು ಗ್ರಂಥಗಳನ್ನು ಓದಿರೆಂದು ಹೇಳುತ್ತಿದ್ದೇವೆ. ಮೂರು ಗ್ರಂಥಗಳಲ್ಲಿಯು ದೇವರ ವಿಷಯಗಳೇ ಇರುವುದರಿಂದ ಮತಭೇದವಿಲ್ಲದೇ ಯಾವ ಮತದವನಾದರೂ ಉಳಿದ ಎರಡು ಮತಗಳ ಗ್ರಂಥಗಳೆಂದು ಹೆಸರುವಾಸಿಯಾಗಿರುವವನ್ನು ಅಸೂಯೆ ಇಲ್ಲದೇ ಓದಿರೆಂದು ಹೇಳುತ್ತಿದ್ದೇವೆ. ನಾವು ಮೂರು ಗ್ರಂಥಗಳನ್ನು ಸಮಾನವಾಗಿ ಗೌರವಿಸುತ್ತಾ ಆ ಮಾತು ಹೇಳಿದ್ದೇವೆ.

ಮಾತು ಒಳ್ಳೆಯದೇ ಅಲ್ಲವೇ! ಎಂದು ಕೆಲವರು ಹಿಂದೂಗಳು ಭಗವದ್ಗೀತೆಯನ್ನು ಗೌರವದಿಂದ ಓದಿದಂತೆ ಬೈಬಲನ್ನು ಕೂಡಾ ಓದಿದ್ದಾರೆ. ಹಾಗೆಯೇ ಕೆಲವರು ಕ್ರೈಸ್ತರು ಅವರ ಬೈಬಲನ್ನು ಗೌರವಿಸಿದಂತೆಯೇ ಭಗವದ್ಗೀತೆಯನ್ನು ಸಹ ಗೌರವಿಸುತ್ತಾ ಭಕ್ತಿಯಿಂದ ಭಗವದ್ಗೀತೆಯನ್ನು ಓದಿದ್ದಾರೆ. ಇನ್ನು ಇಬ್ಬರೂ ಸೃಇ ಖುರಾನ್ ಗ್ರಂಥವನ್ನು ಓದಬೇಕೆಂದುಕೊಂಡಿದ್ದಾರೆ. ಖುರಾನ್ ಗ್ರಂಥವನ್ನು ಮುಸ್ಲಿಮ್‌ರೆಲ್ಲರೂ ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂದು ನಿಯಮವನ್ನು ಅವರು ಇಟ್ಟುಕೊಂಡಿರುವು ದರಿಂದ, ಖುರಾನ್ ಗ್ರಂಥಗಳು ಹೆಚ್ಚಾಗಿ ಅರಬ್ಬೀ ಭಾಷೆಯಲ್ಲಿಯೇ ತಯಾರಾಗಿರುತ್ತವೆ. ಆದರೇ ಈ ಮಧ್ಯೆ ಕಾಲದಲ್ಲಿ ಹಿಂದೂಗಳು ಕೂಡಾ ತಮ್ಮ ಖುರಾನ್ ಗ್ರಂಥವನ್ನು ಓದಬೇಕೆಂಬ ಉದ್ದೇಶದಿಂದ ಮುಸ್ಲಿಮ್‌ರು ತೆಲುಗು ಭಾಷೆಯಲ್ಲಿ ಖುರಾನ್ ಗ್ರಂಥವನ್ನು ತಯಾರು ಮಾಡಿ ಉಚಿತವಾಗಿ ಕೊಡುತ್ತೇವೆ ಎಂದು ಪ್ರಕಟಣೆಗಳು ಕೂಡಾ ಮಾಡಿದ್ದಾರೆ. ಆ ಪ್ರಕಟಣೆಗಳನ್ನು ನೋಡಿದ ನಾವು "ಖುರಾನ್ ಗ್ರಂಥವು ನಮಗೆ ಅವಶ್ಯ ನಾವು ಓದಬೇಕು ನಮಗೆ ಕೊಡಿ" ಎಂದು ಕೇಳಿದ್ದೇವೆ. ಆಗ ಅವರು ಮೊದಲು ಇಲ್ಲದ ನಿಯಮಗಳನ್ನು (ಕಂಡೀಷನ್‌ಗಳನ್ನು) ಹೇಳಿದರು. ಎಲ್ಲವನ್ನು ಇಲ್ಲಿ ಹೇಳುವುದು ಅನವಶ್ಯಕ ವಿಷಯವಾಗುತ್ತದೆ. ಅವರು ಹೇಳಿರುವಮುಖ್ಯವಾದ ಮಾತನ್ನು ಒಂದನ್ನು ಹೇಳಿದರೇ ಹೀಗಿದೆ. ಕೊನೆಯದಾಗಿ ಬಂದಿರುವ ಗ್ರಂಥವಾದ ಖುರಾನ್ ಗ್ರಂಥವೇ ಎಲ್ಲದಕ್ಕಿಂತಲೂ ಮುಖ್ಯವಾದುದು. ಇದು ಬಂದ ನಂತರ ಉಳಿದ ಗ್ರಂಥಗಳೊಂದಿಗೆ ಕೆಲಸವಿಲ್ಲ. ಆದ್ದರಿಂದ ಉಳಿದ ಗ್ರಂಥಗಳನ್ನು ಬಿಟ್ಟುಹಾಕಿ, ಖುರಾನ್ ಗ್ರಂಥವೇ ದೊಡ್ಡದೆಂದು ವಿಶ್ವಾಸಿಸಿದವರಿಗೆ ನಾವು ಗ್ರಂಥಗಳು ಉಚಿತವಾಗಿ ಕೊಡುತ್ತೇವೆಂದು ಹೇಳಿದರು. ಆಗ ನಾವು ಹಾಗಾದರೇ ಬೇಡ. ನಾವು ಎಲ್ಲ ಮತಗಳನ್ನು, ಎಲ್ಲ ಗ್ರಂಥಗಳನ್ನು ಸಮಾನವಾಗಿ ನೋಡುತ್ತಿದ್ದೇವೆ. ಹಾಗಲ್ಲದೇ ಒಂದು ಗ್ರಂಥವೇ ದೊಡ್ಡದು. ಉಳಿದ ಗ್ರಂಥಗಳು ದೊಡ್ಡವಲ್ಲ ಎಂದು ನಾವು ಹೇಳಲಾರೆವು. ಹಾಗೆ ಹೇಳಿದರೇ ಮತ ಬೋಧನೆಯಾಗುತ್ತದೆ ಹೊರತು, ಜ್ಞಾನ ಬೋಧನೆ ಎನಿಸಿಕೊಳ್ಳುವುದಿಲ್ಲ. ನಾವು ಮೂರು ಗ್ರಂಥಗಳನ್ನು ಓದಬೇಕೆಂದು ಖುರಾನ್ ಗ್ರಂಥದಲ್ಲಿನ ವಾಕ್ಯದ

ಪ್ರಕಾರವೇ ಹೇಳಿದ್ದೇವೆ ಹೊರತು ನಾವು ಸ್ವತಃವಾಗಿ ಹೇಳಲಿಲ್ಲ. ನಾವು ಖುರಾನ್ ಗ್ರಂಥಕ್ಕೇ, ಅಲ್ಲಾ ಮಾತಿಗೆ ಬೆಲೆಕೊಟ್ಟು ಅಲ್ಲಿ ಹೇಳಿರುವ (5–68) ಆಯತ್ ಪ್ರಕಾರ ಓದಬೇಕು ಎಂದುಕೊಂಡಿದ್ದೇವೆ ಆದರೆ, ಖುರಾನ್ ಗ್ರಂಥ ಮಾತ್ರ ದೊಡ್ಡದು ಉಳಿದ ಎರಡು ಗ್ರಂಥಗಳು ದೊಡ್ಡವಲ್ಲ ಎಂದು ಹೇಳುವುದು ನಮ್ಮ ಜ್ಞಾನಕ್ಕೆ, ನಮ್ಮ ಧ್ಯೇಯಕ್ಕೇ ಅಲ್ಲದೇ ಖುರಾನ್ ಗ್ರಂಥದಲ್ಲಿನ (5–68) ವಾಕ್ಯಕ್ಕೆ ಕೂಡಾ ವಿರುದ್ಧವಾಗುತ್ತದೆ. ಆದ್ದರಿಂದ ನಾವು ನಿಮ್ಮ ನಿಯಮಗಳ ಪ್ರಕಾರ ಇರಲಾರೆವು. ನಮಗೆ ತಪ್ಪದಿರುವಾಗ ದುಡ್ಡುಕೊಟ್ಟು ಕೊಂಡುಕೊಂಡು ಓದುತ್ತೇವೆ, ನಿಮ್ಮ ಉಚಿತ ಗ್ರಂಥ ನಮಗೆ ಬೇಡವೆಂದು ಹೇಳಿದೆವು.

ಇದಕ್ಕು ಮೊದಲ ವರ್ಷದ ಹಿಂದೆ ಹೈದರಾಬಾದ್‌ನಲ್ಲಿ ತಿರುಮಲೇಶ ಎನ್ನುವ ವ್ಯಕ್ತಿ ಉಚಿತ ಖುರಾನ್‌ಗಾಗಿ ಬಸ್ಸಿನಮೇಲೆ ಪ್ರಕಟಣೆ ನೋಡಿ ಕೇಳಿದರೇ ಅವರು ಕೊಡುತ್ತೇವೆ ಬನ್ನಿ ಎಂದು ಹೇಳಿ, ಆತನು ಹೋದ ನಂತರ ಮಸೀದಿಯಲ್ಲಿ ಕೂರಿಸಿ ನಾಲ್ಕುಜನ ಮುಸ್ಲಿಮ್‌ರು ಇಸ್ಲಾಮ್ ಮತವನ್ನು ಕುರಿತು ಎರಡು ಗಂಟೆಗಳು ಬೋಧಿಸಿ, ಕೊನೆಗೆ ಆತನೊಂದಿಗೆ ನಮಾಜ್ ಮಾಡಿಸಿ, ಈ ದಿನದಿಂದ ನೀನು ಮುಸ್ಲಿಮ್ ಆಗಿಹೋಗಿದ್ದೀಯ ಎಂದು ಹೇಳಿ ಪ್ರತಿ ದಿನ ಖುರಾನ್ ಓದಲು ಹೇಳಿ, ನಮಾಜ್ ಮಾಡಲು ಹೇಳಿ ಕಳುಹಿಸಿದ್ದಾರೆ. ಹಾಗೆ ಮಾಡುವುದರಿಂದ ಸಾಮಾನ್ಯ ವ್ಯಕ್ತಿಯೊಂದರ ಇಷ್ಟಾಯಿಷ್ಟವನ್ನು ತಿಳಿದುಕೊಳ್ಳದೇ ಮತದೊಳಗೆ ಸೇರಿಸುವುದಲ್ಲವೇ? ಬೆಲೆ ತಿಳಿಯದ ಮನುಷ್ಯರಿಗೆ ಅಲ್ಲಾಹ್‌ನನ್ನು ಕುರಿತು ಹೇಳುವುದು, ಭಕ್ತಿ ವಿಶ್ವಾಸಗಳು ಇಲ್ಲದವರಿಗೆ ಖುರಾನ್ ಕುರಿತು ಹೇಳುವುದು ಅಲ್ಲಾಹ್ ಗೌರವಕ್ಕೆ ಭಂಗ ಮಾಡಿದಂತೆ ಅಲ್ಲವೇ? ನಮ್ಮ ಲೆಕ್ಕದಲ್ಲಿ ಎಲ್ಲ ಮತಗಳಲ್ಲಿನ ಜ್ಞಾನವು ಒಂದೇ, ಎಲ್ಲ ಮತಗಳಿಗು ದೇವರು ಒಬ್ಬನೇ ಎಂದು ಹೇಳುತ್ತಿರುತ್ತೇವೆ. ಖುರಾನ್ ಗ್ರಂಥವು ದೈವಗ್ರಂಥವೆಂದು ತಿಳಿದು ಅದರಲ್ಲಿನ (5–68) ಆಯತ್‌ನಲ್ಲಿನ ಮಾತು ದೇವರ ಮಾತಾಗಿ ತಿಳಿದು ಖುರಾನ್ ಗ್ರಂಥವನ್ನು ಓದಿರೆಂದು, ಹಿಂದೂಗಳಿಗೆ ಭಗವದ್ಗೀತೆಯನ್ನು ಗೌರವಿಸಿದಂತೆ ಖುರಾನ್ ಗ್ರಂಥವನ್ನು

ಗೌರವಿಸಿರೆಂದು ಹೇಳಿದ್ದೇವೆ. ಹಾಗೆಯೇ ಕ್ರೈಸ್ತರಿಗೆ ಅವರು ಬೈಬಲ್‌ನ್ನು ಗೌರವಿಸಿದಂತೆಯೇ ಖುರಾನ್ ಗ್ರಂಥವನ್ನು ಗೌರವಿಸಿರೆಂದು ಹೇಳಿದ್ದೇವೆ. ಅಷ್ಟೇ ಹೊರತು ಅದು ದೊಡ್ಡದು, ಇದು ಚಿಕ್ಕದು ಎಂದು ನಾವು ಯಾವಾಗಲೂ ಹೇಳಲಿಲ್ಲ. ಒಂದೇ ಮತವನ್ನು, ಒಂದೇ ದೇವರನ್ನು ಗೌರವಿಸುವವರಿಗೆ ಆ ದೇವರೊಬ್ಬನೇ ಎಲ್ಲ ಮತಗಳಿಗೆ ದೊಡ್ಡವನೆಂದು ಯಾಕೆ ಅಂದುಕೊಳ್ಳಬಾರದು? ದೇವರು ತನ್ನ ಗ್ರಂಥಗಳಲ್ಲಿ ಎಲ್ಲಾದರೂ ಮನುಷ್ಯರು ಹೇಳಿದಂತೆ ಹೇಳಿದ್ದಾನಾ? ಹೇಳಿರಿ. ಖುರಾನ್ ಗ್ರಂಥವು ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತದೆಂದು (5–48) ನೇ ವಾಕ್ಯದಲ್ಲಿ ಅಲ್ಲಾಹ್ ಹೇಳಿದ್ದಾನೆ. ಅಷ್ಟೇ ಅಲ್ಲದೇ ಆ ವಾಕ್ಯದ ಕೊನೆಯಲ್ಲಿ **"ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಮನುಷ್ಯರ ಮನೋಇಚ್ಛೆಯನ್ನು ಅನುಸರಿಸಬೇಡ"** ಎಂದು ಇದೆ. ಮೂರು ಗ್ರಂಥಗಳಲ್ಲಿ ಸತ್ಯವಿದೆ ಎಂದು ಸತ್ಯಸಮೇತವಾಗಿ ಬಂದಿರುವ ಖುರಾನ್ ಗ್ರಂಥ ಹೇಳುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಅಲ್ಲಾಹ್ ಮಾತಿಗೆ ವಿರುದ್ಧವಾಗಿ ಮಾತನಾಡುವವರ ಮಾತುಗಳು ಕೇಳಬೇಡವೆಂದು ವಾಕ್ಯದ ಕೊನೆಯಲ್ಲಿ ಹೇಳಿದ್ದಾರೆ. ಈ ವಾಕ್ಯಗಳನ್ನು ಅನುಸರಿಸಿ ಅಲ್ಲಾಹ್ ಮಾತುಗಳನ್ನು ಗೌರವಿಸುತ್ತಾ ನಾವು ಮೂರು ಗ್ರಂಥಗಳು ಸತ್ಯಸಮೇತವಾಗಿ ಬಂದಿರುವವೇ ಎಂದು ನಂಬುತ್ತಿದ್ದೇವೆ. ಆದ್ದರಿಂದ ಮೂರು ಗ್ರಂಥಗಳನ್ನು ಒರೆಕಲ್ಲಾಗಿ ತೆಗೆದುಕೊಂಡು ಮೂರು ಮತಗಳವರು 'ಮತ' ಎಂಬ ಮುಸುಗಿನಲ್ಲಿ ತಪ್ಪುಹೆಜ್ಜೆ ಹಾಕಬೇಡವೆಂದು ಹೇಳುತ್ತಿದ್ದೇವೆ. ಮನುಷ್ಯ ಮನುಷ್ಯನಾಗಿ ಇರಬೇಕು. ಮತ ಎನ್ನುವ ಬಣ್ಣ ಬಳೆದುಕೊಂಡರೇ ಅಲ್ಲಾಹ್ ಶಿಕ್ಷಿಸುವವನಾಗಿ ಇರುತ್ತಾನೆ. ಅಲ್ಲಾಹ್ (ದೇವರು) 'ನನ್ನ ಬೋಧನೆಗಳು ಸರ್ವ ಮಾನವರಿಗೂ ಹಿತೋಪದೇಶ' ಎಂದು ಹೇಳಿದ್ದಾನೆ. ಒಂದುಸಲ (81–27)ನೆ ವಾಕ್ಯವನ್ನು ನೋಡಿರಿ. **"ಇದು ಸಮಸ್ತ ಲೋಕವಾಸಿ ಗಳಿಗಾಗಿ ಹಿತೋಪದೇಶ"**. ಇಲ್ಲಿ ಸರ್ವಮಾನವರಿಗು ಎಂದು ಹೇಳಿದ್ದಾನೆ ಹೊರತು ಮುಸ್ಲಿಮ್‌ರಿಗೆ ಎಂದು ಹೇಳಲಿಲ್ಲ ಅಲ್ಲವೇ! ದೇವರನ್ನು ವಿಶ್ವಾಶಿಸಿದವನು ಯಾವ ಮತದಲ್ಲಿದ್ದರೂ ಅವನು ಮುಸ್ಲಿಮೇ ಆಗುತ್ತಾನೆ. 'ಮುಸ್ಲಿಮ್' ಎಂಬ ಮಾತಿಗೆ 'ವಿಶ್ವಾಸ' ಎಂದು ಅರ್ಥ. ವಿಶ್ವಾಸ ಯಾರಿಗಿದ್ದರೇ ಅವರು ಯಾವ

ಮತದಲ್ಲಿದ್ದರೂ ಅವನು ವಿಶ್ವಾಸಿಯೇ ಆಗುತ್ತಾನೆ. ಅಂದರೇ ಮುಸ್ಲಿಮೇ ಆಗುತ್ತಾನೆ. ಇದೇ ಖುರಾನ್ ಗ್ರಂಥದಲ್ಲಿ ಆರನೆಯ ಸೂರಾ, 90ನೇ ಆಯತ್‌ನಲ್ಲಿ ಏನು ಹೇಳಿದ್ದಾರೋ ಒಂದುಸಲ ನೋಡಿರಿ.

**(6-90) "ಇಂಥವರೇ (ದೇವರನ್ನು ವಿಶ್ವಾಸಿಸಿದವರೇ) ಅಲ್ಲಾಹ್ ಮಾರ್ಗದರ್ಶಕತ್ವವನ್ನು ಹೊಂದಿದವರು. ಆದ್ದರಿಂದ ನೀನು ಅವರ ಮಾರ್ಗವನ್ನೇ ಅನುಸರಿಸು. ಅವರೊಂದಿಗೆ ಹೀಗೆ ಹೇಳು "ನಾನು ಇದಕ್ಕೆ ಬದಲು ನಿಮ್ಮಿಂದ ಎಂತಹ ಪ್ರತಿಫಲಗಳನ್ನು ಕೇಳುವುದಿಲ್ಲ. ಇದು ಸರ್ವ ಲೋಕಗಳವರಿಗಾಗಿ ಒಂದು ಹಿತೋಪದೇಶ ಮಾತ್ರವೇ"** ಎಂದು ಇದೆ. ಇಲ್ಲಿ ಅಲ್ಲಾಹ್ ಮಾತಿನ ಪ್ರಕಾರ ದೇವರಿಗೆ ವಿಶ್ವಾಸಿಯಾಗಿ ಇರಬೇಕೆಂದು, ಹಾಗೆ ಇರುವುದರಿಂದ ದೇವರ ಮಾರ್ಗದರ್ಶಕತ್ವವು ಮನುಷ್ಯನಿಗೆ ಲಭಿಸುವುದೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೇ **'ವಿಶ್ವಾಸಿಯಾಗಿರುವವನಿಂದ ಯಾವ ಪ್ರತಿಫಲವನ್ನು ಕೇಳುವುದಿಲ್ಲ'** ಎಂದು ಇದೆ. ಅದರ ಪ್ರಕಾರ ದೇವರಿಗೆ ವಿಶ್ವಾಸಿಯಾಗಿ ಇರಬೇಕೆಂದು ಹೇಳಬಹುದು ಆದರೇ, ನಿನ್ನ ಮತವನ್ನು ಬಿಟ್ಟು ಈ ಮತದೊಳಗೆ ಬರಬೇಕೆಂದು ಹೇಳುವುದು ಪ್ರತಿಫಲವನ್ನು ಕೇಳಿದಂತಾಗುವುದು ಅಲ್ಲವೇ! ಹಾಗೆ ಕೇಳಬೇಕೆಂದು ದೇವರು ಹೇಳಲಿಲ್ಲ. ಇದು ಒಂದು ಮತಕ್ಕೇ ಪರಿಮಿತಿಯಲ್ಲ. ಎಲ್ಲ ಮತಗಳ ಪ್ರಜೆಗಳಿಗೆ ಖುರಾನ್ ಹಿತೋಪದೇಶಿನಿ ಎಂದು ಇದೆ. ಚೆನ್ನಾಗಿ ಗಮನಿಸಿದರೇ ಈ ವಾಕ್ಯದ ಕೊನೆಯ ಮಾತಿನಲ್ಲಿ ಹೀಗಿದೆ. **"ಇದು ಒಂದು ಹಿತೋಪದೇಶ ಮಾತ್ರವೇ"** ಎಂದು ಇದೆ. ಇದನ್ನನುಸರಿಸಿ ಇದು ಒಂದು ಗ್ರಂಥವೇ ಅಲ್ಲದೇ ಉಳಿದ ಗ್ರಂಥಗಳು ಕೂಡಾ ಎಲ್ಲರಿಗಾಗಿ ಹಿತೋಪದೇಶವಾಗಿ ಇವೆಯೆಂದಲ್ಲವೇ ಅರ್ಥ. **'ಸರ್ವಲೋಕವಾಸಿಗಳಿಗು'** ಅಂದರೇ 'ಎಲ್ಲಮತಗಳವರಿಗೆ' ಎಂದು ಅರ್ಥ. 'ಒಂದು ಹಿತೋಪದೇಶ ಮಾತ್ರವೇ' ಅಂದರೇ ಇದು ಒಂದೇ ಅಲ್ಲದೇ ಇನ್ನೂ ಹಿತೋಪದೇಶಗಳು ಇವೆಯೆಂದೇ ಅಲ್ಲವೇ ಅರ್ಥ. ಖುರಾನ್ ಗ್ರಂಥವು ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತಿದೆ ಎಂದು ಐದನೆಯ ಸೂರಾ 48ನೇ ಆಯತ್‌ನಲ್ಲಿ ಹೇಳಿರುವ ಮಾತನ್ನು ಮರೆಯಬಾರದು.

ದೇವರು 'ಜ್ಞಾನ' ಎನ್ನುವ ಬುನಾದಿ ಮೇಲೆ ತನ್ನ ಬೋಧನೆಯನ್ನು ಹೇಳಿದರೇ ಮನುಷ್ಯರು ಆ ಮಾತನ್ನು ನಿರಾಕರಿಸಿ ಮತವೆಂಬ ಬುನಾದಿ ಮೇಲೆ ದೇವರ ಬೋಧನೆಗಳನ್ನು ತೋರಿಸುತ್ತಿದ್ದಾರೆ. ಆದ್ದರಿಂದ ಯಾವುದು ಸತ್ಯವೋ, ಯಾವುದು ಅಸತ್ಯವೋ ನಿಖರವಾಗಿ ತಿಳಿಸುವುದಕ್ಕೆ ತನ್ನ ಗ್ರಂಥಗಳನ್ನೇ ಶಾಸ್ತ್ರಗಳೆನ್ನುವ ಒರೆಕಲ್ಲಾಗಿ ಮಾಡಿ ನಮಗೆ ಕೊಟ್ಟಿದ್ದಾನೆ. ಶಾಸ್ತ್ರಬದ್ಧತೆ ಎನ್ನುವ ಒರೆಕಲ್ಲಾಗಿರುವ ದೈವಗ್ರಂಥಗಳನ್ನು ಕೂಡಾ ಮನುಷ್ಯರು ಮತವೆಂಬ ಮಸಿಬಳೆದು ಮತದಕಲ್ಲಾಗಿ ಬದಲಾಯಿಸಬೇಕೆಂದು ನೋಡುತ್ತಿದ್ದಾರೆ. ಯಾರು ಎಷ್ಟು ಅಜ್ಞಾನವನ್ನು ಬೆರೆಸಿದರೂ ಒರೆಕಲ್ಲು ಒರೆಕಲ್ಲಾಗಿಯೇ ಇರುತ್ತದೆ ಹೊರತು ಮತದಕಲ್ಲಾಗಿ ಬದಲಾಗುವುದಿಲ್ಲ. ಒರೆಕಲ್ಲಿನಿಂದ ನಾವು ಮನುಷ್ಯರ ಆಚರಣೆಗಳಲ್ಲಿಯೂ, ಮಾತುಗಳಲ್ಲಿಯೂ, ಆರಾಧನೆಗಳಲ್ಲಿಯೂ ಎಷ್ಟು ಅಜ್ಞಾನವಿದೆಯೋ ತೋರಿಸುತ್ತಿದ್ದೇವೆ. ಒರೆಕಲ್ಲಾಗಿ ಇರುವ ಗ್ರಂಥವನ್ನು ಉಚಿತವಾಗಿ ಕೊಡುತ್ತೇವೆಂದು ಮೇಲ್ನೋಟಕ್ಕೆ ಹೇಳಿದರೂ ಒಳಗೆ ಅವರ ಉದ್ದೇಶವು ಮತಪ್ರಚಾರ ಹೊರತು ಏನೂ ಇಲ್ಲವೆಂದು ಅವರು ಹೇಳಿರುವ ನಿಯಮಗಳಲ್ಲಿಯೇ ಸ್ಪಷ್ಟವಾಗಿ ಕಾಣಿಸುತ್ತಿದೆ. ಮುಸ್ಲಿಮರೆಲ್ಲರೂ ಅರಬ್ಬೀ ಭಾಷೆ ಯಲ್ಲಿಯೇ ಖುರಾನ್‌ನ್ನು ಓದಬೇಕೆಂದು ಹೇಳುತ್ತಿದ್ದಾರೆ.ಅರಬ್ಬೀ ಭಾಷೆ ಬಾರದ ಮುಸ್ಲಿಮ್‌ರನ್ನು ಅರಬ್ಬೀ ಭಾಷೆ ಕಲಿತುಕೊಂಡು ಓದಬೇಕೆಂದೂ, ತೆಲುಗಿನಲ್ಲಿ ಓದಬಾರದೆಂದು ಹೇಳುತ್ತಿದ್ದಾರೆ. ಈದಿನ ಭಾರತ ದೇಶದಲ್ಲಿನ ಮುಸ್ಲಿಮ್‌ರು ಅರಬ್ಬೀ ಭಾಷೆ ಬಾರದ ಕಾರಣವಾಗಿ ಶೇ. 80ರಷ್ಟು ಜನ ಮುಸ್ಲಿಮ್‌ರು ಖುರಾನ್ ಗ್ರಂಥವನ್ನು ಓದಲಿಲ್ಲ. ಖುರಾನ್ ಗ್ರಂಥದಲ್ಲಿ ಏನಿದೆಯೋ ಅವರಿಗೆ ತಿಳಿದಿಲ್ಲ. ಬಂದಿರುವ ಪ್ರಾಂತೀಯ ಭಾಷೆಯಲ್ಲಾಗಲೀ, ತೆಲುಗು ಭಾಷೆ ಯಲ್ಲಾಗಲೀ ಓದಬೇಕೆಂದುಕೊಂಡರೇ ಹಾಗೆ ಓದಬಾರದು, ಮುಸ್ಲೀಮ್ ಆದವನು ಅರಬ್ಬೀ ಭಾಷೆಯಲ್ಲಿಯೇ ಖುರಾನ್‌ನನ್ನು ಓದಬೇಕೆಂಬ, ಮತನಿಯಮವನ್ನು ತಮ್ಮ ಮತ ಹಿರಿಯರು ಹೇಳುತ್ತಿರುವುದರಿಂದ ಅವರು ಓದಲಾರದೆ ಹೋಗುತ್ತಿದ್ದಾರೆ.

ತೆಲುಗು ಭಾಷೆ ಬಂದಿರುವ ಎಷ್ಟೋ ಜನ ಮುಸ್ಲಿಮ್‌ರು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂಬ ಮತ ನಿಯಮದಿಂದ ದೈವಗ್ರಂಥಕ್ಕೆ ದೂರವಾಗಿ ಅರಬ್ಬೀ ಭಾಷೆಯಲ್ಲಿ ಓದಲಾರದೆ ಇದ್ದಾರೆ. ಆದರೇ ಈದಿನ ತೆಲುಗು ಭಾಷೆಯಲ್ಲಿ ಎಷ್ಟೋ ಅನುವಾದ ಖುರಾನ್ ಗ್ರಂಥಗಳು ತಯಾರಾಗಿವೆ. ತೆಲುಗು ಭಾಷೆ ಬಂದಿರುವ ಎಷ್ಟೊ ಜನ ಮುಸ್ಲಿಮ್ ಪಂಡಿತರು ಖುರಾನ್ ಗ್ರಂಥವನ್ನು ತೆಲುಗಿನಲ್ಲಿ ಅನುವಾದಿಸಿ ಬರೆದು ಗ್ರಂಥಗಳನ್ನು ತಯಾರಿ ಮಾಡಿದ್ದಾರೆ. ಆದರೂ ತೆಲುಗು ಗ್ರಂಥಗಳನ್ನು ಮುಸ್ಲಿಮ್‌ರು ಓದಬಾರದು ಎಂಬ ನಿಯಮದ ಪ್ರಕಾರ ಓದಬಾರದು. ಹಾಗಿರುವಾಗ ತೆಲುಗು ಭಾಷೆಯಲ್ಲಿ ಖುರಾನ್ ಗ್ರಂಥವನ್ನುವಕೆ ಬರೆದಿದ್ದಾರೆ? ಯಾರು ಓದಬೇಕೆಂದು ಬರೆದಿದ್ದಾರೆ? ಹಾಗೆ ಬರೆಯುವುದರಲ್ಲಿ ಅವರ ಉದ್ದೇಶವೇನು? ಎಂದು ಆಲೋಚಿಸಿದರೂ ಅವರ ಭಾವವು ಸ್ಪಷ್ಟವಾಗಿ ಹೊರಗೆ ಕಾಣಿಸುತ್ತಿದೆ. ತೆಲುಗು ಭಾಷೆ ಬಂದಿರುವ ಹಿಂದೂಗಳಿಗಾಗಿ ತೆಲುಗು ಖುರಾನ್ ಗ್ರಂಥವನ್ನು ತಯಾರುಮಾಡಿದ್ದಾರೆ. ಹಿಂದೂಗಳು ಖುರಾನ್ ಗ್ರಂಥವನ್ನು ಓದಿ ತಮ್ಮ ಮತದ ಕಡೆ ಬರಬೇಕೆಂಬ ಆಲೋಚನೆಯೆ ಹೊರತು ಅದರಲ್ಲಿ ಪ್ರತ್ಯೇಕಿಸಿ ಏನೂ ಇಲ್ಲ. ಆದ್ದರಿಂದ ಖುರಾನ್ ಗ್ರಂಥ ಬೇಕೆಂಬ ಹಿಂದೂಗಳಿಗೆ ಮೊದಲು ತಮ್ಮ ಮತವನ್ನು ಕುರಿತು ಹೇಳುತ್ತಿದ್ದಾರೆ. ತಮ್ಮ ಮತವನ್ನು ಸ್ವೀಕರಿಸಿದವರಿ ಗೇ ದೇವರ ದಾರಿ ದೊರೆಯುವುದೆಂದು ಹೇಳುತ್ತಿದ್ದಾರೆ. ಮತ ಪ್ರಚಾರಕ್ಕೆ ಕ್ರೈಸ್ತರು ಯಾವ ನಿಯಮಗಳಿಲ್ಲದೇ ಅವರ ಗ್ರಂಥವೆಂದು ಹೇಳಿಕೊಳ್ಳುತ್ತಿರುವ ಬೈಬಲ್‌ನನ್ನು ಹಿಂದೂಗಳಿಗೆ ಉಚಿತವಾಗಿ ಕೊಡುತ್ತಿದ್ದಾರೆ. ಅದೇ ಉದ್ದೇಶದಿಂದಲೇ ಮುಸ್ಲಿಮ್‌ರು ಖುರಾನ್ ಗ್ರಂಥಗಳನ್ನು ಉಚಿತವಾಗಿ ಕೊಡುತ್ತೇವೆಂದು ಹೇಳಿದರೂ ಮೊದಲು ತಮ್ಮ ಮತದೊಳಗೆ ಸೇರಬೇಕೆಂದೋ, ತಮ್ಮ ಮತವು ದೊಡ್ಡದೆಂದೋ, ಕೊನೆಯದಾಗಿ ಬಂದಿರುವ ಖುರಾನ್ ನಂತರ ಯಾವ ಗ್ರಂಥವು ಅಗತ್ಯವಿಲ್ಲವೆಂದು, ಇಲ್ಲಿಯವರೆಗು ಓದುತ್ತಿರುವ ನಿಮ್ಮ ಗ್ರಂಥಗಳಿಗಿಂತಲೂ ಖುರಾನ್ ಗ್ರಂಥವೇ ಶ್ರೇಷ್ಠವೆಂದು, ಇದು ಬಾರದ ಮುನ್ನ ಭಗವದ್ಗೀತೆಗೆ, ಬೈಬಲ್‌ಗೆ ಬೆಲೆ ಇತ್ತು ಎಂದು, ಖುರಾನ್ ಅಂತಿಮ ದೈವಗ್ರಂಥವಾಗಿ ಬಂದಿದೆ

ಯೆಂದೂ, ಅಂತಿಮವಾಗಿ ಬಂದಿರುವ ಈ ಗ್ರಂಥದ ನಂತರ ಯಾವ ಗ್ರಂಥವು ಮುಖ್ಯವಲ್ಲವೆಂದೂ, ಆದ್ದರಿಂದ ಖುರಾನ್ ಗ್ರಂಥವನ್ನು ವಿಶ್ವಾಶಿಸಿ ಇಸ್ಲಾಮ್ ಮತದಲ್ಲಿ ಸೇರಬೇಕೆಂದು ಹೇಳುತ್ತಿದ್ದಾರೆ.

ಇದೆಲ್ಲಾ ನೋಡಿದರೇ ಪವಿತ್ರವಾದ ಖುರಾನ್ ಗ್ರಂಥವು ಸರ್ವ ಮಾನವರಿಗೂ ಎಂದು ಸ್ವತಃವಾಗಿ ಅಲ್ಲಾಹ್ (ದೇವರೇ) ಹೇಳಿರುವಾಗ, ಮನುಷ್ಯರು ಇದು ಮುಸ್ಲಿಮರಿಗೇ ನೀವು ಕೂಡಾ ಮುಸ್ಲಿಮರಾಗಿ ಬದಲಾಗಿರಿ ಎಂದು ಹೇಳುತ್ತಿದ್ದಾರೆ. ಖುರಾನ್‌ನಲ್ಲಿ ದೇವರ ಬೋಧನೆಗಳಿಗೆ ವಿರುದ್ಧವಾಗಿ ಮತವನ್ನು ಖುರಾನ್ ಗ್ರಂಥದ ಮರೆಯಲ್ಲಿ ಪ್ರಚಾರ ಮಾಡುತ್ತಿದ್ದಾರೆ. ಸರ್ವಮತಗಳು ದೇವರಿಗೆ ಸಮಾನವೇ 'ಖುರಾನ್ ಸರ್ವ ಮಾನವರಿಗು ಹಿತಬೋಧಿನಿ' ಎಂಬ ಮಾತನ್ನು ನಾವು ಹೇಳುತ್ತಿರುವಾಗ 'ಅಲ್ಲ ಇದು ಮುಸ್ಲಿಮ್‌ರಿಗೇ' ಎನ್ನುವಂತೆ ಅವರು ಹೇಳುತ್ತಿದ್ದಾರೆ. ಕೊನೆಯದಾಗಿ ನಮ್ಮಂಥವರಿಗೆ ಕೂಡಾ ಮತವನ್ನು ಅಂಟಗಟ್ಟುವುದಕ್ಕೆ ನೋಡುತ್ತಿದ್ದಾರೆ. ಈ ಮತವೆಂಬ ಜಾಢ್ಯವು ಒಂದು ಮುಸ್ಲಿಮ್‌ರಲ್ಲಿಯೇ ಅಲ್ಲ, ಎಲ್ಲಾ ಮತಗಳಲ್ಲಿ ಕಡಿಮೆಇಲ್ಲದಂತೆ ಇದೆ. ಆದರೇ ಕ್ರೈಸ್ತರು ಮತವೆಂದು ಹೇಳದೇ ಬೈಬಲನ್ನು ಹಿಂದೂಗಳಿಗೆ ಕೊಡುತ್ತಿದ್ದಾರೆ. ಮತ ಪ್ರಚಾರಕ್ಕೇ ಕೊಡುತ್ತಿದ್ದಾರೆಂದು ಹೊರಬೀಳದಂತೆ ತಾಳೇಯಿಂದ ಕೊಡುತ್ತಿದ್ದಾರೆ. ಮುಸ್ಲಿಮ್‌ರು ಕೂಡಾ ಖುರಾನ್ ಉಚಿತವಾಗಿ ಕೊಡುತ್ತೇವೆನ್ನುತ್ತಿದ್ದಾರೆ. ಆದರೇ ಅದು ಮತಪ್ರಚಾರಕ್ಕೇ ಎನ್ನುವಂತೆ ಹೊರಬೀಳುತ್ತಿದ್ದಾರೆ. ಕ್ರೈಸ್ತರು ಮತಪ್ರಚಾರಕ್ಕೇ ಬೈಬಲ್ ಗ್ರಂಥಗಳನ್ನು ಉಚಿತವಾಗಿ ಕೊಡುತ್ತಿದ್ದರೂ ಅವರು ತಮ್ಮ ಉದ್ದೇಶವನ್ನು ಹೊರಬೀಳದಂತೆ ಜಾಗ್ರತೆಯಾಗಿ ಕೊಡುತ್ತಿದ್ದಾರೆ. ಮುಸ್ಲಿಮ್‌ರು ಕ್ರೈಸ್ತರಿಗಿಂತಲೂ ಕಡಿಮೆಯಾಗಿ ಗ್ರಂಥಗಳನ್ನು ಉಚಿತವಾಗಿ ಕೊಟ್ಟರೂ ಅವರು ಯಾಕೆ ಕೊಡುತ್ತಿರುವುದು, ಅವರ ಉದ್ದೇಶವನ್ನು ಹೊರಬೀಳುವಂತೆ ಮಾತನಾಡುತ್ತಿದ್ದಾರೆ.

ದೇವರ ಭಾವನೆಯಲ್ಲಿ ಮತವೆಂಬ ಮಾತಿಗೆ ದಾರಿಯೇ ಇಲ್ಲ. ಆದ್ದರಿಂದ ಯಾವ ಮತದಲ್ಲಿ ಹುಟ್ಟಿರುವವನು ಆ ಮತದಲ್ಲಿಯೇ ಇದ್ದು

ಮತಾಂತರವಾಗಬೇಕೆಂಬ ಉದ್ದೇಶವಿಲ್ಲದೇ ಜ್ಞಾನ ತಿಳಿಯುವುದಕ್ಕೆ ತನ್ನ ಬೋಧನೆ ಸರ್ವ ಮಾನವರಿಗೂ ಎಂದು, ಎಲ್ಲ ಮತಗಳವರಿಗೆ ಏಕವಾಗಿ ಹೇಳಿದ್ದಾನೆ ಹೊರತು, ಇಂತಹ ಮತವು ನನಗೆ ಮುಖ್ಯವೆಂದು ಎಲ್ಲಿಯೂ ಹೇಳಲಿಲ್ಲ. ದೇವರ ಜ್ಞಾನವನ್ನು ನೋಡಿದರೇ ಮತಾಂತರವಾಗುವುದು, ಮತಗಳನ್ನು ಪ್ರಚಾರ ಮಾಡುವುದು ಸ್ವಲ್ಪವಾದರೂ ಸರಿಹೋಗುವುದಿಲ್ಲವೆಂದೂ, ಅದು ಪೂರ್ತಿ ಅಜ್ಞಾನವೆಂದು ಅರ್ಥವಾಗುತ್ತಿದೆ. ಆದ್ದರಿಂದ ನಾವು ನಮ್ಮ ರಚನೆಗಳಲ್ಲಿ **"ಮತಾಂತರ ದೈವದ್ರೋಹ ಮಹಾಪಾಪ"** ಎಂಬ ಗ್ರಂಥವನ್ನು ಬರೆದಿದ್ದೇವೆ. ದೇವರು ಮತ ಪ್ರಸ್ತಾಪ ಇಲ್ಲದೇ ತನ್ನ ಬೋಧನೆಗಳನ್ನು ಮನುಷ್ಯ ಎನ್ನುವವನಿಗೆ ಉಪಯೋಗಪಡುವಂತೆ ಹೇಳಿದ್ದಾನೆ. ಅದೇ ವಿಧಾನವನ್ನೇ ನಾವು ಅನು ಸರಿಸುತ್ತಾ, ಮೂರು ಮತಗಳ ಮೇಲೆ ಯಾವ ಅಸೂಯೆ ಇಲ್ಲದೇ ಜ್ಞಾನವನ್ನು ಹೇಳುತ್ತಿದ್ದೇವೆ. ಆದ್ದರಿಂದ ಎಲ್ಲ ಮತಗಳವರು ನನ್ನಬಳಿ ದೈವ ಜ್ಞಾನವನ್ನು ತಿಳಿಯುತ್ತಿದ್ದಾರೆ.

ದೇವರಿಗೆ ವಿರುದ್ಧವಾದ ಅಧರ್ಮಗಳಲ್ಲಿ ಕೃತ, ತ್ರೇತಾ, ದ್ವಾಪರ ಯುಗಗಳವರೆಗು ನಾಲಕ್ಕು ಅಧರ್ಮಗಳೇ ಇದ್ದವು. ಈಗ ಕಲಿಯುಗದಲ್ಲಿ ಐದನೆಯ ಅಧರ್ಮ **'ಮತ'** ಎನ್ನುವುದು ಬಂದು ಸೇರಿದೆ. ಒರೆಕಲ್ಲಿನಿಂದ ಗೀಚಿ ಧರ್ಮವೆನ್ನುವ ಅಧರ್ಮವು ಹೇಗೆ ಮನುಷ್ಯರಲ್ಲಿದೆಯೋ ಉದಾಹರಣೆ ಯಾಗಿ ಹೇಳಿಕೊಂಡಿದ್ದೇವೆ. ಖುರಾನ್ ಗ್ರಂಥವನ್ನು ಒರೆಕಲ್ಲಾಗಿ ಉಪಯೋಗಿಸಿ ಕೊಂಡು, ಆ ಗ್ರಂಥದಲ್ಲಿ ಐದನೆಯ ಸೂರಾ 48, 68 ಆಯತ್‌ಗಳನ್ನು ತೋರಿಸುತ್ತಾ ಮನುಷ್ಯರಲ್ಲಿ ಮತವು ದೇವರಿಗೆ ಹೇಗೆ ವಿರುದ್ಧವಾಗಿದೆಯೋ ಹೇಳಿಕೊಂಡಿದ್ದೇವೆ. ದೇವರು ಆಕಾಶವಾಣಿ ಮೂಲಕ ಹೇಳಿಸಿರುವ ಜ್ಞಾನವು ಭೂಮಿಮೇಲೆ ಮೂರು ಗ್ರಂಥಗಳಾಗಿ ತಯಾರಾಗಿದೆ. ಆ ಮೂರು ಗ್ರಂಥಗಳು ಅಜ್ಞಾನವನ್ನು, ಜ್ಞಾನವನ್ನು ನಿರ್ಣಯಿಸಿ ಹೇಳುವ ಒರೆಕಲ್ಲುಗಳಾಗಿವೆ. ಒರೆಕಲ್ಲಾಗಿರುವ ಅಂತಿಮ ದೈವಗ್ರಂಥವು ಖುರಾನ್‌ನಲ್ಲಿನ ಜ್ಞಾನವು ಕಲುಷಿತವಾಗಿ **'ಮತ'** ಎಂಬ ಕಸದಿಂದ ತುಂಬಿಕೊಂಡು ಅದರಲ್ಲಿನ ಜ್ಞಾನಕ್ಕೆ ಮುಪ್ಪು ಏರ್ಪಟ್ಟಾಗ

ಅದೇ ಗ್ರಂಥವನ್ನು ಒರೆಕಲ್ಲಾಗಿ ಉಪಯೋಗಿಸಿಕೊಂಡು ಜ್ಞಾನವನ್ನು, ಅಜ್ಞಾನವನ್ನು ನಿರ್ಣಯಿಸಿ ಹೇಳಬಹುದು. ಈಗ ಖುರಾನ್ ಗ್ರಂಥವನ್ನು ಅಡ್ಡವಿಟ್ಟುಕೊಂಡು ಅದರ ಹೆಸರು ಹೇಳುತ್ತಾ, ಅದರಲ್ಲಿ ಇಲ್ಲದ ಮತವನ್ನು ಪ್ರಚಾರ ಮಾಡುತ್ತಿದ್ದಾರೆ. ತಾವು ಅಂತಿಮ ದೈವಗ್ರಂಥವಾದ ಖುರಾನ್ ಪ್ರಕಾರ, ಅದರಲ್ಲಿನ ಜ್ಞಾನದ ಪ್ರಕಾರ ಮಾತನಾಡುತ್ತಿದ್ದೇವೆಂದು ಹೇಳುತ್ತಾ, ತಮ್ಮ ಮತವನ್ನು ದೊಡ್ಡದೆಂದು ಹೇಳುತ್ತಾ, ತಮ್ಮದೇ ನಿಜವಾದ ಜ್ಞಾನವೆಂದು ಹೇಳುತ್ತಿದ್ದಾರೆ. ಅವರು ಖುರಾನ್ ಗ್ರಂಥವನ್ನು ದೊಡ್ಡದಾಗಿ ಹೇಳುತ್ತಲೇ, ಅದರ ನೆಪದಿಂದ ಮತವನ್ನು ಪ್ರವೇಶ ಇಡುತ್ತಿದ್ದಾರೆ. ಅದಕ್ಕೆ ಪರಿಹಾರವಾಗಿ ಒರೆಕಲ್ಲಾಗಿ ಖುರಾನ್ ಗ್ರಂಥವನ್ನು ನಾನು ಉಪಯೋಗಿಸಿಕೊಂಡಿದ್ದೇನೆ. ಅದರಲ್ಲಿನ **81–27, 6–90** ಆಯತ್‌ಗಳನ್ನು ಉಪಯೋಗಿಸಿ ಖುರಾನ್‌ನಲ್ಲಿ ಮತ ಬೋಧನೆ ಇಲ್ಲವೆಂದು ಹೇಳಿದ್ದೇವೆ. ಹಾಗೆಯೇ 5–48 ಮತ್ತು 5–68 ಆಯತ್‌ಗಳನ್ನು ಉಪಯೋಗಿಸಿಕೊಂಡು **"ಖುರಾನ್ ಗ್ರಂಥವು ಉಳಿದ ಎರಡು ಗ್ರಂಥಗಳು ಸತ್ಯವೆಂದು ಹೇಳುತ್ತಿದೆಯೆಂದು, ಮೂರು ಗ್ರಂಥಗಳು ಓದದವನು ಯಾವ ಮತದಲ್ಲಿ, ಯಾವ ಧರ್ಮದಲ್ಲೀ ಇಲ್ಲದಂತೆಯೇ ಎಂದು"** ಹೇಳುತ್ತಿದೆಯೆಂದು ತಿಳಿಸಿದ್ದೇವೆ. ಖುರಾನ್ ಗ್ರಂಥವು ಒರೆಕಲ್ಲಾಗಿರುವಾಗ, ಅದರಲ್ಲಿನ **81–27, 6–90** ಎರಡು ಆಯತ್‌ಗ ಳೊಂದಿಗೆಯೂ ಮತ್ತು **5–48, 5–68** ಆಯತ್‌ಗಳೊಂದಿಗೆಯೂ ಗೀಚಿ ನೋಡಿ ಅವರ ಮಾತುಗಳಲ್ಲಿನ ಜ್ಞಾನವನ್ನು, ಅಜ್ಞಾನವನ್ನು ಹೊರಗಿಟ್ಟಿದ್ದೇವೆ. ಈ ನಾಲ್ಕು ಆಯತ್‌ಗಳ ಪ್ರಕಾರ ಅವರು ಹೇಳಿರುವ ಮಾತುಗಳಲ್ಲಿ ಮತವೆಂಬ ಅಜ್ಞಾನವಿದೆಯೆಂದು, ದೇವರೆಂಬ ಜ್ಞಾನವಿಲ್ಲ ಎಂದೂ ಖಂಡಿಸಿದ್ದೇವೆ. ಈ ಸಂಘಟನೆಯಿಂದ ದೇವರು ಹೇಳಿದಂತೆ **'ಖುರಾನ್ ಗ್ರಂಥವು ಜ್ಞಾನದಲ್ಲಿ ಸತ್ಯಾಸತ್ಯಗಳು ತಿಳಿಸುವ ಒರೆಕಲ್ಲು'** ಎಂದು ತಿಳಿದುಹೋಗಿದೆ. ಖುರಾನ್ ಗ್ರಂಥವನ್ನು ತೆಗೆದುಕೊಂಡು ದೊಡ್ಡದಾಗಿ ಹೇಳಿ ಅದರ ಮರೆಯಲ್ಲಿ ಮತವನ್ನು ಪ್ರಚಾರ ಮಾಡಬೇಕೆಂದುಕೊಂಡವರನ್ನು ಖುರಾನ್ ಗ್ರಂಥವನ್ನೇ ಒರೆಕಲ್ಲಾಗಿ ಉಪಯೋಗಿಸಿ ಅವರಲ್ಲಿನ ಅಜ್ಞಾನವನ್ನು ಹೊರಗೆ ಕಾಣಿಸುವಂತೆ ಮಾಡಿದ್ದೇವೆ. ಅದರಿಂದ ಖುರಾನ್ ಗ್ರಂಥವು ಒರೆಕಲ್ಲಾಗಿ ನಿರೂಪಣೆಗೆ ಬಂದಿದೆ.

ಈ ದಿನ ಭಗವದ್ಗೀತೆ ಅಥವಾ ತೌರಾತ್ ಗ್ರಂಥವನ್ನೇ **'ಪ್ರಥಮ ದೈವಗ್ರಂಥ'** ಎಂದು ಹೇಳುತ್ತಿದ್ದೇವೆ. ಆ ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಾಗಿ ಬಂದಿದೆ. ದೇವರು ಹೇಳಿರುವ ಜ್ಞಾನವು ಒಂದೇ ಆದರೂ ಅದು ಮೂರು ಗ್ರಂಥಗಳಾಗಿ ತಯಾರಾಗಿದೆ. ಮೂರು ಗ್ರಂಥಗಳನ್ನು ಅಡ್ಡವಿಟ್ಟುಕೊಂಡು ಮೂರು ಮತಗಳು ತಯಾರಾಗಿವೆ, ಮೂರು ಗ್ರಂಥಗಳ ನೆರಳಿನಲ್ಲಿ ಮೂರು ಮತಗಳು ತಯಾರಾದರೂ, ಆ ಮತಗಳು ಯಾವುದೊಂದಾದರೂ ಗ್ರಂಥಗಳ ಪ್ರಕಾರ ನಡೆಯುತ್ತಿಲ್ಲ. ಅವರ ಮತಹಿರಿಯರು ಹೇಳಿದಂತೆ ನಡೆಯುತ್ತಿವೆಯೇ ಹೊರತು ಗ್ರಂಥಗಳ ಜ್ಞಾನದ ಪ್ರಕಾರ ನಡೆಯುತ್ತಿಲ್ಲ. ಮೂರು ಮತಗಳು ಈದಿನ ತಮ್ಮ ಮತಗಳನ್ನು ಅಭಿವೃದ್ಧಿ ಮಾಡಿಕೊಳ್ಳುವ ಕೆಲಸಗಳಲ್ಲಿ ಬಿದ್ದು ಹೋಗಿವೆಯೇ ಹೊರತು ಜ್ಞಾನವನ್ನು ಅನುಸರಿಸುತ್ತಿಲ್ಲ. ಮೂರು ಮತಗಳಲ್ಲಿರುವ ಅಜ್ಞಾನವನ್ನು ಆಯಾ ಮತಗ್ರಂಥಗಳನ್ನೇ ಒರೆಕಲ್ಲಾಗಿ ಉಪಯೋಗಿಸಿ ಅವರಿಗೆ ಜ್ಞಾನವನ್ನು, ಅಜ್ಞಾನವನ್ನು ನಿರ್ಣಯಿಸಿ ಹೇಳಬೇಕಾಗಿರುತ್ತದೆ. ಒಬ್ಬ ಹಿಂದೂ ಅಜ್ಞಾನವಾಗಿ ಮಾತನಾಡಿದರೇ ಅವನ ಗ್ರಂಥವಾದ ಭಗವದ್ಗೀತೆಯನ್ನು ಒರೆಕಲ್ಲಾಗಿ ಮಾಡಿಕೊಂಡು ಅವರಲ್ಲಿನ ಜ್ಞಾನವು ಎಷ್ಟು, ಅಜ್ಞಾನವು ಎಷ್ಟು ಎಂದು ನೀರ್ಣಯಿಸಿ ಹೇಳಬಹುದು. ಯಾವ ಮತಸ್ಥನಿಗೆ ಆ ಮತ ಗ್ರಂಥವನ್ನೇ ಒರೆಕಲ್ಲಾಗಿ ಉಪಯೋಗಿಸಬೇಕು. ಹಿಂದೂಗಳಿಗೆ ಭಗವದ್ಗೀತೆಯನ್ನು ಒರೆಕಲ್ಲಾಗಿ ಮಾಡಬೇಕೇ ಹೊರತು, ಬೈಬಲ್‌ನನ್ನೂ, ಖುರಾನ್ ಗ್ರಂಥವನ್ನೋ ಹೇಳಬಾರದು. ಆದ್ದರಿಂದ ದೇವರು ಮೂರು ಮತಗಳ ಅಜ್ಞಾನವನ್ನು ಹೊರಗಿಡುವುದಕ್ಕೆ ಮೂರು ಗ್ರಂಥಗಳನ್ನು ಒರೆಕಲ್ಲುಗಳಾಗಿ ಕೊಟ್ಟಿದ್ದಾನೆ.

ಉದಾಹರಣೆಯಾಗಿ ಖುರಾನ್ ಗ್ರಂಥವು ನಿಜವಾದ ಒರೆಕಲ್ಲಾಗಿ ಹೇಗೇ ಉಪಯೋಗಪಟ್ಟಿದೆಯೋ, ಮತವೆನ್ನುವವರ ಬಾಯಿ ಮಾತನಾಡದಂತೆ ತನ್ನ ವಾಕ್ಯಗಳೊಂದಿಗೆ ಹೇಗೆ ಕಟ್ಟಿಹಾಕಿದೆಯೋ ನೋಡಿದ್ದೇವೆ. ಅದೇ ವಿಧವಾಗಿ ಯಾವ ಮತದಲ್ಲಿನ ಅಜ್ಞಾನವನ್ನಾದರೂ ಆ ಮತ ಗ್ರಂಥದಿಂದಲೇ ಅವರ

ಮತಗ್ರಂಥ ವಾಕ್ಯಗಳಿಂದಲೇ ನಿರ್ಧಾರಿಸಿ ಹೇಳಬಹುದು. ಮೂರು ಮತ ಗ್ರಂಥಗಳು ಮೂರು ಒರೆಕಲ್ಲುಗಳಾಗಿ ಇವೆ, ಆದ್ದರಿಂದ ಪ್ರತಿಯೊಂದುಕಡೆ ಈ ಮೂರು ಗ್ರಂಥಗಳಿಂದ ಆ ಮತಗಳಲ್ಲಿನ ಅಜ್ಞಾನವನ್ನು, ಜ್ಞಾನವನ್ನು ಹೊರಗಿಡಬಹುದು. ಇಲ್ಲಿಯವರೆಗು ಮತಪ್ರಚಾರವು, ಸ್ವಮತ ಪ್ರೇಮ, ಪರಮತ ಅಸೂಯೆ ಎನ್ನುವ ಅಜ್ಞಾನವನ್ನು ನಿರ್ಣಯಿಸಿ ಹೇಳಿಕೊಂಡಿದ್ದೇವೆ. ಅದೇ ವಿಧವಾಗಿ ಮನುಷ್ಯರು ಆಚರಿಸುವ ಪ್ರತಿ ಆಚರಣೆಯನ್ನು ಮಸೆದು ನೋಡಿ (ಸಾಣಿ ಹಿಡಿದು) ಹೇಳಬಹುದು. ಈಗ ಮನುಷ್ಯರು ಮಾಡುವ ಪ್ರಾರ್ಥನೆಯಲ್ಲಿ ಅಥವಾ ಧ್ಯಾನದಲ್ಲಿ, ಅಥವಾ ನಮಾಜ್‌ನಲ್ಲಿ ಎಷ್ಟು ಜ್ಞಾನವಿದೆ, ಎಷ್ಟು ಅಜ್ಞಾನವಿದೆ ಎಂದು ತಿಳಿಯುವುದಕ್ಕೆ ಮೂರು ಮತಗಳವರಿಗೆ ಮೂರು ಗ್ರಂಥಗಳನ್ನು ಉಪಯೋಗಿಸಿ ನೋಡೋಣ. ಒರೆಕಲ್ಲನ್ನು ಉಪಯೋಗಿಸಿ ನೋಡಿದ ನಂತರ, ಒರೆಕಲ್ಲನ್ನು ಉಪಯೋಗಿಸಿ ಸತ್ಯಾಸತ್ಯಗಳನ್ನು ನಿರ್ಣಯಿಸಿದ ನಂತರ, ಯಾವ ಮತದವರಿಗೆ ಆ ಮತ ಗ್ರಂಥವನ್ನೇ ಒರೆಕಲ್ಲು ಮಾಡಿ, ಜ್ಞಾನಾಜ್ಞಾನಗಳನ್ನು ತೀರ್ಮಾನಿಸಿದ ನಂತರ ಕೂಡಾ, ತಮ್ಮದು ಅಜ್ಞಾನವೆಂದು ತಿಳಿದ ನಂತರ ಕೂಡಾ, ಒರೆಕಲ್ಲನ್ನು ಲೆಕ್ಕ ಮಾಡದೆ ತಮ್ಮದೇ ನಿಜವಾದ ಜ್ಞಾನವೆಂದು, ತಮ್ಮ ಆಚರಣೆಯೇ ಸರಿಯಾದ ಆಚರಣೆಯೆಂದು ಹೇಳುವವರನ್ನು ಮೊಂಡು ವಾದನೆಯವರೆಂದು ಹೇಳಬಹುದು. ಅಂಥವರಿಗೆ ದೈವಗ್ರಂಥಗಳು ದೊಡ್ಡದಾಗಿ ಕಾಣಿಸುವುದಿಲ್ಲ. ತಮ್ಮ ಗುರುಗಳು, ತಮ್ಮ ಹಿರಿಯರು ಹೇಳಿರುವ ಮಾತುಗಳೇ ದೊಡ್ಡದಾಗಿ ಕಾಣಿಸುತ್ತಿರುತ್ತವೆ. ಮೇಲ್ನೋಟಕ್ಕೆ ಮಾತುಗಳಲ್ಲಿ ಎಲ್ಲದಕ್ಕು ದೇವರೇ ದೊಡ್ಡವನೆಂದು ಹೇಳುತ್ತಾ, ದೇವರು ಹೇಳಿರುವ ಮಾತುಗಳನ್ನು ಲೆಕ್ಕಿಸದೆ ಮನುಷ್ಯರ ಮಾತುಗಳನ್ನು ಅಂದರೇ ಅವರ ಹಿರಿಯರ ಮಾತುಗಳನ್ನು ಕೇಳುವವರು ದೇವರೇ ದೊಡ್ಡವನೆಂದು ಹೇಳುವುದು ದ್ರೋಹ ಅಲ್ಲವೇ!

**ಪ್ರಶ್ನೆ :– ಸಂದರ್ಭ ಬಂದಿರುವುದರಿಂದ ಕೇಳುತ್ತಿದ್ದೇನೆ. ದೇವರು ಕೊಟ್ಟಿರುವ ಗ್ರಂಥವನ್ನು ಅಲ್ಲಗಳೆದು ಮನುಷ್ಯರು ಬರೆದಿರುವ ಗ್ರಂಥಗಳನ್ನು ದೊಡ್ಡದಾಗಿ ಹೇಳಬಹುದಾ? ಕೆಲವರು ಒಂದುಕಡೆ ದೇವರ ಗ್ರಂಥವನ್ನು ದೊಡ್ಡದಾಗಿ ಹೇಳುತ್ತಾ**

**ಅದಕ್ಕೆ ಸಮಾನವಾಗಿ ಅವರ ಹಿರಿಯರು ಬರೆದಿರುವ ಗ್ರಂಥಗಳನ್ನು ಕೂಡಾ ಓದುತ್ತಾ ದೇವರ ಗ್ರಂಥಗಳಲ್ಲಿನ ವಿಷಯಗಳನ್ನು ಬಿಟ್ಟು ಮನುಷ್ಯರ ಗ್ರಂಥಗಳಲ್ಲಿನ ವಿಷಯಗಳನ್ನೇ ಆಚರಿಸುತ್ತಿರುತ್ತಾರೆ. ಅವರು ಮನುಷ್ಯರನ್ನು ದೇವರೊಂದಿಗೆ ಸಮಾನವಾಗಿ ನೋಡಬಾರದೆಂದು ಹೇಳುತ್ತಾ ದೇವರು ಹೇಳಿರುವ ಮಾತುಗಳಿಗಿಂತ ಮನುಷ್ಯರು ಹೇಳಿರುವ ಮಾತುಗಳನ್ನೇ ಹೆಚ್ಚಾಗಿ ಆಚರಿಸುತ್ತಿರುತ್ತಾರೆ. ಹಾಗೆ ಮಾಡುವುದು ತಪ್ಪಲ್ಲವೇ! ದೇವರು ತನ್ನ ಪ್ರತಿನಿಧಿ ಮೂಲಕ, ತೆರೆಹಿಂಬದಿಯಿಂದ ಆಕಾಶವಾಣಿಯಿಂದ ಮೂರು ವಿಧಗಳ ಜ್ಞಾನವನ್ನು ಹೇಳಿದ್ದರೆ ಅದನ್ನು ಕೂಡಾ ಹೈಜಾಕ್ ಮಾಡಿ ತಮ್ಮ ಅಧೀನದೊಳಗೆ ತಂದುಕೊಂಡು ಅವರು ಹೇಳಿದಂತೆ ನಟಿಸುವವರು ಕೂಡಾ ಇದ್ದಾರೆ. ಒರೆಕಲ್ಲನ್ನು ಉಪಯೋಗಿಸಿ ನೋಡಿದರೇ ಅವರನ್ನು ಏನೆನ್ನಬೇಕು**?

**ಉತ್ತರ :–** ಇದು ಒಂದು ಮತದಲ್ಲಿಯೇ ಅಲ್ಲದೇ ಪ್ರತಿಮತದಲ್ಲಿಯೂ ಇದೆ. ಆದರೇ ಕೆಲವು ಕಡೆ ಹೊರಗೆ ಕಾಣಿಸುವಂತೆ ಇದೆ. ಕೆಲವು ಕಡೆ ಅಂದರೇ ಕೆಲವು ಮತಗಳಲ್ಲಿ ಹೊರಗೆ ಕಾಣಿಸದೆ ಇದೆ. ಹಿಂದೂಮತದಲ್ಲಿ ಹಿಂದೂಗಳಿಗೆ ಭಗವದ್ಗೀತೆಯೆಂದು ಹೇಳಿಕೊಂಡರೂ ಅದು ಮಾತುಗಳವರೆಗೇ ಪರಿಮಿತಿಯಾಗಿ ಹೋಗಿದೆ. ಭಗವದ್ಗೀತೆಯನ್ನು ಓದಬಾರದೆಂದು ಹೇಳಿಕೊಳ್ಳುವವರು ಕೂಡಾ ಸ್ವಚ್ಛವಾದ ಹಿಂದೂಗಳಾಗಿ ಚಲಾವಣೆ ಆಗುತ್ತಿದ್ದಾರೆ. ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದು ಎನ್ನುವವರು ಕೂಡಾ ಹಿಂದೂಗಳಲ್ಲಿ ಮುಖ್ಯಸ್ಥರಾಗಿದ್ದಾರೆ. ಭಗವದ್ಗೀತೆ ಹಿಂದೂಗಳ ಗ್ರಂಥವೇ ಅಲ್ಲ ಎನ್ನುವವರು ಹಿಂದೂ ಮತ ಹಿರಿಯರಾಗಿ ಇದ್ದಾರೆ. ಈ ವಿಧವಾಗಿ ಹಿಂದೂಗಳಿಗೆ ಭಗವದ್ಗೀತೆ ಮೂಲ ಗ್ರಂಥವೆಂದು ತಿಳಿಯದ ಸ್ಥಿತಿಯಲ್ಲಿ ಬಹಳ ಜನರಿದ್ದಾರೆ. ಭಗವದ್ಗೀತೆ ವಿಷಯವನ್ನು ತಿಳಿಯದವರು ಹಿಂದೂಗಳಲ್ಲಿ ಅರ್ಧಕ್ಕಿಂತ ಮೇಲಾಗಿ ಇದ್ದಾರೆ. ಯಾರಾದರೂ ಭಕ್ತಿವರನು ಇದ್ದಾನೆಂದರೇ ಅವನು ರಾಮಾಯಣ, ಭಾರತ ಓದಿದವನಿರುತ್ತಾನೆ ಹೊರತು ಭಗವದ್ಗೀತೆಯನ್ನು ಓದಿದವನು ಇಲ್ಲ. ಈ ವಿಧವಾಗಿ ದೇವರುಕೊಟ್ಟಿರುವ ದೈವಗ್ರಂಥವನ್ನು ಅಲ್ಲಗಳೆದು ಇತರ ಗ್ರಂಥಗಳನ್ನು

ಆಶ್ರಯಿಸುವವರು ಇದ್ದಾರೆ. ರಾಮಾಯಣದಿಂದ ಅನೇಕ ಗ್ರಂಥಗಳು, ಪುರಾಣಗಳು, ವೇದಗಳು, ಉಪನಿಷತ್ತುಗಳು ಓದುವುದರಿಂದ ನಿಜವಾದ ದೇವರನ್ನು ಬಿಟ್ಟು ದೇವರಲ್ಲದ ದೇವತೆಗಳನ್ನು ಆರಾಧಿಸುವುದು ಶುರು ಮಾಡಿದ್ದಾರೆ. ಈ ವಿಷಯವನ್ನು ಭಗವದ್ಗೀತೆ ಗ್ರಂಥವನ್ನು ಒರೆಕಲ್ಲಾಗಿ ಮಾಡಿ ನೋಡಿದರೇ ಆ ಗ್ರಂಥದಲ್ಲಿ ಅನೇಕ ಕಡೆಗಳಲ್ಲಿ ಅನೇಕಬಾರಿ ಅನ್ಯದೇವತಾರಾಧನೆ ಸರಿಯಾದುದಲ್ಲವೆಂದು ಹೇಳಿದ್ದಾನೆ. ಅನ್ಯದೇವತಾರಾಧನೆ ಯಿಂದ ಮನುಷ್ಯ ಮಾರ್ಗತಪ್ಪಿ ನಡೆದವನಾಗುತ್ತಿದ್ದಾನೆಂದು ರಾಜವಿದ್ಯಾ ರಾಜಗುಹ್ಯಾ ಯೋಗದಲ್ಲಿ 23, 24, 25 ಶ್ಲೋಕಗಳಲ್ಲಿ ಹೇಳಿದ್ದಾರೆ. ಆ ಶ್ಲೋಕಗಳನ್ನು ಒರೆಕಲ್ಲಾಗಿ ಮಾಡಿ ನೋಡಿದರೇ ಮನುಷ್ಯರು ಮಾಡುವ ತಪ್ಪು ತಿಳಿಯುತ್ತಿದೆ. ಅನ್ಯ ದೇವತಾರಾಧನೆ ಅಜ್ಞಾನವೆಂದು ತಿಳಿಯುತ್ತಿದೆ.

**(೮) ಶ್ಲೋ॥ 23 : ಯೇಪ್ಯನ್ಯ ದೇವತಾ ಭಕ್ತಾ ಯಜನ್ತೇ ಶ್ರದ್ಧಯಾ ನ್ವಿತಾಃ।**
**ತೇಪಿ ಮಾಮೇವ ಕೌಂತೇಯ! ಯಜ್ಯನ್ತ್ಯ ವಿಧಿಪೂರ್ವಕಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :– "ಯಾರಾದರೇ ಶ್ರದ್ಧೆಹೊಂದಿ ಅನ್ಯದೇವತಾರಾಧನೆ ಮಾಡುತ್ತಿದ್ದಾನೋ ಆತನು ಎಲ್ಲೆಡೆಯಿರುವ ನನ್ನನ್ನೇ ಆರಾಧಿಸಿದಂತಾದರೂ, ಅವನು ಮಾರ್ಗ ತಪ್ಪಿ ನಡೆಯುತ್ತಿದ್ದಾನೆ. ಅವನ ಭಕ್ತಿ ನನ್ನಬಳಿಗೆ ಸೇರುವುದಿಲ್ಲ."**

**೮) ಶ್ಲೋ॥ 24 : ಅಹಂಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನತುಮಾ ಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿತೇ ॥**
**(ಪರಮಾತ್ಮ)**

**ಭಾವಾರ್ಥ :– "ಸರ್ವದೇವತೆಗಳಿಗೆ ಮಾಡುವ ಆರಾಧನೆಯಲ್ಲಿ, ಯಜ್ಞಗಳಲ್ಲಿ ಭೋಕ್ತನು ನಾನೇ ಮತ್ತು ಪ್ರಭುವು ನಾನೇ. ನನ್ನನ್ನು ಯಥಾರ್ಥ ಸ್ಥಿತಿಯಲ್ಲಿ ತಿಳಿಯದವರಿಗೆಲ್ಲರಿಗೂ ಸುಖ ಉಂಟಾಗುತ್ತದೆ ನಂತರ ಅದುಹೋಗಿ ಕಷ್ಟವು ಉಂಟಾಗುತ್ತದೆ, ಅಷ್ಟೇ ಹೊರತು ಮುಕ್ತಿ ದೊರೆಯುವುದಿಲ್ಲ."**

**(8) ಶ್ಲೋ॥ 25 :ಯಾನ್ತಿ ದೇವವ್ರತಾನ್ ದೇವಾನ್, ಪಿತ್ರೃನ್ ಯಾನ್ತಿ ಪಿತೃವ್ರತಾಃ।**
**ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮದ್ಯಾಜಿನೋಪಿ ಮಾಮ್ ॥**
**(ಪರಮಾತ್ಮ)**

**ಭಾವಾರ್ಥ :– "ದೇವತಾ ಪೂಜೆಗಳಿಂದ ದೇವತೆಗಳನ್ನೇ ಸೇರುತ್ತಾರೆ, ಪಿತೃದೇವತೆ ಗಳನ್ನು ಪೂಜಿಸಿದರೇ ಅವರಲ್ಲಿಯೇ ಸೇರುತ್ತಾರೆ. ಗಿಡಗಳನ್ನು, ಹಾವುಗಳನ್ನು, ಪ್ರಾಣಿಗಳನ್ನು ಮೊದಲಾದ ಜೀವರಾಶಿಗಳನ್ನು ಪೂಜಿಸಿದರೇ ಅವುಗಳಲ್ಲಿಯೇ ಸೇರಿಹೋಗುತ್ತಾರೆ. ನನ್ನನ್ನು ಪೂಜಿಸುವವನು ಮಾತ್ರ ನನ್ನಲ್ಲಿ ಸೇರಬಲ್ಲನು. ಅಂದರೇ ಜನ್ಮಗಳಿಗೆ ಹೋಗದೆ ಮುಕ್ತಿ ಹೊಂದಬಲ್ಲನು."**

ಈ ವಿಧವಾಗಿ ದೇವರು ತನ್ನ ಗ್ರಂಥದಲ್ಲಿ ಹೇಳಿರುವ ಮಾತುಗಳನ್ನು ಅನುಸರಿಸಿ ಯಾರನ್ನು ಪೂಜಿಸಿದರೇ ಅವರಬಳಿಗೆ ಸೇರಿಹೋಗುತ್ತಾರೆಂದು ಹೇಳಿದ್ದಾನೆ. ದೇವರನ್ನು ತೊರೆದು ದೇವರು ಅಲ್ಲದವರನ್ನು ಆರಾಧಿಸಿದರೇ ಪುನಃ ಜನ್ಮಗಳಿಗೆ ಹೋಗಬೇಕಾದುದೇಯೆಂದು ತಿಳಿಯುತ್ತಿದೆ. ಇದು ಒಂದು ಹಿಂದೂಗಳಿಗೇ ಅಲ್ಲ ಮನುಷ್ಯರಾದ ಪ್ರತಿಯೊಬ್ಬರಿಗೂ ಸಂಬಂಧಿಸಿದ ವಿಷಯ. ದೈವ ಗ್ರಂಥವು ಯಾವುದಾದರೂ ಮನುಷ್ಯರೆಲ್ಲರಿಗೂ ಅನ್ವಯಿಸುತ್ತದೆ. ಅರ್ಥ ವಾಗುವುದಕ್ಕೆ ಹಿಂದೂಗಳಿಗೆ ಭಗವದ್ಗೀತೆಯಲ್ಲಿಯೇ ತೋರಿಸಿದರೇ ಶೀಘ್ರವಾಗಿ ಅರ್ಥವಾಗಬಲ್ಲದೆಂದು ಭಗವದ್ಗೀತೆಯನ್ನು ತೆಗೆದುಕೊಂಡು ಹೇಳಿರುವುದಾಗಿದೆ. ಮೂರು ದೈವಗ್ರಂಥಗಳು ಒಂದೇ ಒರೆಕಲ್ಲಾಗಿ ಇವೆ. ಆದ್ದರಿಂದ ಒಂದೇ ದೈವಗ್ರಂಥದಿಂದ ಎಲ್ಲ ಮತಗಳ ಪ್ರಜೆಗಳಲ್ಲಿನ ಅಜ್ಞಾನವನ್ನು ಎತ್ತಿ ತೋರಿಸ ಬಹುದು. ಹಾಗೆ ಹೇಳಿದರೇ 'ಅದು ನಮ್ಮ ಗ್ರಂಥವಲ್ಲ' ಎಂದು ಎನ್ನುವುದಕ್ಕೆ ಅವಕಾಶವಿದೆ. 'ನಮ್ಮ ಗ್ರಂಥದಲ್ಲಿನ ವಿಷಯವಾದರೇ ಕೇಳುತ್ತೇವೆ' ಎಂದು ತಪ್ಪಿಸಿಕೊಳ್ಳುವವರು ಕೂಡಾ ಇರುವುದರಿಂದ ಮನುಷ್ಯ ಯಾವ ಮತದಲ್ಲಿ ಇದ್ದಾನೋ, ಯಾವ ಗ್ರಂಥವನ್ನು ನಂಬುತ್ತಿದ್ದಾನೋ ಆ ಗ್ರಂಥದಿಂದಲೇ ಒರೆಕಲ್ಲಾಗಿರುವ ಬೋಧನೆಗಳನ್ನು ತೋರಿಸಬೇಕಾಗಿರುತ್ತದೆ. ಹಾಗೆಂದು ಹಿಂದೂಗಳಿಗೆ ಭಗವದ್ಗೀತೆಯನ್ನು ಹೊರತು ಇತರೆ ಹೇಳಬಾರದೆಂದು ಏನೂ

ಇಲ್ಲ. ಒಂದುವೇಳೆ ಆ ವಿಷಯಕ್ಕೆ ಸಂಬಂಧಿಸಿದ ಬೋಧನೆ ಭಗವದ್ಗೀತೆಯಲ್ಲಿ ಇಲ್ಲದಿರುವಾಗ ಇತರ ದೈವಗ್ರಂಥದಿಂದ ಕೂಡಾ ಹೇಳಬಹುದು.

ಕ್ರೈಸ್ತರ ವಿಷಯದೊಳಗೆ ಬಂದರೇ ದೇವರು ಮನುಷ್ಯನ ರೂಪದಲ್ಲಿ ಹೇಳಿರುವುದು, ಮನುಷ್ಯರು ದೇವರನ್ನು ಕುರಿತು ಹೇಳಿರುವುದು ಎರಡು ವಿಧಗಳ ಬೋಧನೆಗಳಿವೆ. ದ್ವಿತೀಯ ದೈವಗ್ರಂಥವೆಂದು ಹೆಸರುಗಳಿಸಿರುವುದು ಇಂಜೀಲು ಗ್ರಂಥ. ಇಂಜೀಲು ಎಂದರೇ ಜೀವವಿರುವುದೆಂದೂ, ಜೀವಿಸುವಂತೆ ಮಾಡುವುದೆಂದೂ ಅರ್ಥವನ್ನು ಹೇಳಬಹುದು. ಈ ಗ್ರಂಥದಲ್ಲಿ **ಜೀವ ಜಲ, ಜೀವ** ಎಂದರೆ **'ಜ್ಞಾನ'** ಎಂದು ಭಾವಿಸಬೇಕು. ಹಾಗೆ ಅಂದುಕೊಳ್ಳುವುದು ಈ ಗ್ರಂಥದಲ್ಲಿ ಮಾತ್ರ ಇದೆಯೆಂದು ಹೇಳಬಹುದು. ದೇವರು ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ತಿಳಿಸುವನೆಂದು ಖುರಾನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ಗಳಲ್ಲಿ ಹೇಳಿರುವುದಾಗಿದೆ. ಅದರಲ್ಲಿ "ದೇವರು ತನ್ನ ಪ್ರತಿನಿಧಿಯನ್ನು ಕಳುಹಿಸಿ ತನ್ನ ಜ್ಞಾನವನ್ನು ಹೇಳಿಸುತ್ತಾನೆ" ಎಂದು ಇದೆ. ಮೂರು ವಿಧಾನಗಳಲ್ಲಿ ಎರಡು ಬೇರೆ ವಿಧಾನಗಳಾಗಿರುವಾಗ, ಒಂದು ಮಾತ್ರ ತನ್ನ ಪ್ರತಿನಿಧಿಯನ್ನು ಮಾನವನಾಗಿ ಮಾನವರೊಳಗೆ ಕಳುಹಿಸಿ ಆತನ ಮೂಲಕ ಜ್ಞಾನವನ್ನು ಹೇಳಿಸುತ್ತಾನೆ ಎಂದು ಇದೆ. ಆದರೇ ವಿಧಾನ ಅದೇ ಆದರೂ ಮನುಷ್ಯನಾಗಿ ಬಂದಿರುವವನು ದೇವರ ಪ್ರತಿನಿಧಿಯಾಗಿರುವು ದರಿಂದ, ಆತನು ಬೇರೆ ದೇವರು ಬೇರೆಯಲ್ಲ. ಇಬ್ಬರೂ ಒಬ್ಬರೇ ಎಂದು ಹೇಳುವುದಕ್ಕೆ ಅವಕಾಶವಿದೆ. ಅದು ನಂತರ ವಿಷಯವಾದರೂ ದೇವರು ಕಳುಹಿಸಿರುವವನು ದೇವರ ಪ್ರತಿರೂಪ ಅಥವಾ ಪ್ರತಿನಿಧಿಯೆಂದು ಹೇಳಿರುವುದರಿಂದ ಆತನನ್ನು ದೇವರಾಗಿಯೇ ಭಾವಿಸಬೇಕು. ಸತ್ಯವನ್ನು ಹೇಳಿದರೇ ದೇವರ ಮಾರುವೇಷವೇ ಮನುಷ್ಯನಾಗಿ ಬಂದಿದೆಯೆಂದು ತಿಳಿಯಬೇಕು. ಆತನು ಸಾಧಾರಣ ಮನುಷ್ಯನಹಾಗೆ ಕಾಣಿಸಿದರೂ ಆತನು ಮನುಷ್ಯನಲ್ಲ. ಆದ್ದರಿಂದ ಆತನಿಗೆ ಪ್ರತ್ಯೇಕವಾದ ಹೆಸರನ್ನಿಟ್ಟು ಕರೆಯುತ್ತಿದ್ದೇವೆ. ಆ ಹೆಸರೇ ಭಗವಂತನು. ದೇವರು ಎಂದರೇ ಕಾಣಿಸದ ಶಕ್ತಿ, ಭಗವಂತನು ಎಂದರೇ ಕಾಣಿಸುವ ಶಕ್ತಿಯೆಂದು

ಅರ್ಥ. **'ದೇವರ ಜ್ಞಾನವು ದೇವರಿಗೆ ಹೊರತು ಇತರ ಮಾನವರಿಗೆ ಯಾರಿಗೂ ತಿಳಿಯದೆಂದು'** ಹೇಳುವುದು ನಡೆದಿದೆ. ಈ ವಿಷಯವನ್ನು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ ಮೂರು ಆಯತ್ ಏಳ (3–7) ರಲ್ಲಿ ಹೇಳಿದ್ದಾರೆ.

ಆ ವಿಧವಾಗಿ ದೇವರ ಅವತಾರವಾಗಿ ಅಥವಾ ದೇವರ ಪ್ರತಿನಿಧಿಯಾಗಿ ಬಂದಿರುವವನು ಯೇಸು. ಯೇಸುವಾಗಿ ಬಂದಿರುವ ದೇವರ ಪ್ರತಿನಿಧಿ ತನ್ನ ಜೀವನವನ್ನು ಸಾಗಿಸುತ್ತಾ ತಾನು ದೇವರ ಅವತಾರವೆಂದು ಯಾರಿಗೂ ತಿಳಿಯದಂತೆ ಇದ್ದೂ ತಾನು ಪ್ರಜೆಗಳಿಗೆ ಹೇಳಬೇಕಾಗಿರುವ ಜ್ಞಾನವನ್ನು ಹೇಳಿಹೋಗುವನು. ಅದೇ ವಿಧವಾಗಿ ಯೇಸುವಾಗಿ ಬಂದಿರುವ ದೇವರು ತನ್ನನ್ನು ಯಾರೂ ಗುರುತಿಸದಂತೆ ಜೀವಿಸಿ ತನ್ನ ಜೀವನ ಕಾಲದಲ್ಲಿ ಹೇಳಬೇಕಾಗಿರುವ ಜ್ಞಾನವನ್ನು ಹೇಳಿಹೋಗಿದ್ದಾನೆ. ಆತನು ಪ್ರಜೆಗಳ ಮಧ್ಯದಲ್ಲಿ ಇದ್ದಿದ್ದು ಕೇವಲ ಮೂರು ವರ್ಷಗಳೇ. ಆ ಮೂರು ವರ್ಷಗಳಲ್ಲಿ ಸ್ವಲ್ಪ ಜ್ಞಾನವನ್ನು ಹೇಳಿ ಮರಣಿಸಿದಂತೆ ನಟಿಸಿ, ಪ್ರಜೆಗಳ ಮಧ್ಯದಿಂದ ಸರಿದುಕೊಂಡು ದೂರವಾಗಿ ಬಂದು ತನ್ನ ಜೀವನ ಕಾಲವನ್ನು ಪೂರ್ತಿ ಮಾಡಿದ್ದಾನೆ. ಆತನು ಮನುಷ್ಯನ ರೂಪದಲ್ಲಿರುವ ದೇವರಾಗಿದ್ದು ದೇವರ ಕುರಿತಾದ ಬೋಧನೆಗಳನ್ನು ಹೇಳಿದ್ದಾನೆ. ದೇವರ ಜ್ಞಾನವು ದೇವರಿಗೇ ತಿಳಿದಿದೆ, ಆದ್ದರಂದ ಆತನು ತನ್ನ ಜ್ಞಾನವನ್ನು ಪ್ರಜೆಗಳಿಗೆ ಸುಲಭವಾಗಿ ಬೋಧಿಸಲಾಗಿದೆ. ಮನುಷ್ಯನಾಗಿ ಆತನು ಹೇಳಿರುವ ಬೋಧನೆಗಳು ಬೈಬಲ್ ಗ್ರಂಥದಲ್ಲಿ ನಾಲ್ಕು ಸುವಾರ್ತೆಗಳಾಗಿ ಇವೆ. ಬೈಬಲ್ ಗ್ರಂಥವು ಒಟ್ಟು 66 ಪಾಠಗಳ ರೂಪದಲ್ಲಿರುವಾಗ ನಾಲ್ಕು ಸುವಾರ್ತೆಗಳಿಗೆ ಮೊದಲು 39 ಪಾಠಗಳು ಹಿಂದೆ 23 ಪಾಠಗಳಿವೆ. ಮಧ್ಯದಲ್ಲಿ ನಾಲ್ಕು ಪಾಠಗಳು ಪ್ರತ್ಯೇಕವಾಗಿರುವವಾಗಿ ಇದ್ದೂ ಪ್ರತ್ಯೇಕವಾದ **'ಸುವಾರ್ತೆಗಳೆಂಬ'** ಹೆಸರನ್ನು ಹೊಂದಿವೆ. ನಾಲಕ್ಕು ಸುವಾರ್ತೆಗಳನ್ನು ದೇವರು ಹೇಳಿರುವಾಗ ಮನುಷ್ಯರು ಬರೆದಿದ್ದಾರೆ. ಉಳಿದ 62 ಪಾಠಗಳನ್ನು ಮನುಷ್ಯರೇ ದೇವರನ್ನು ಕುರಿತು ಬರೆದಿದ್ದಾರೆ. ಆದರೇ ಅದರಲ್ಲಿ ಕೆಲವು ಸತ್ಯ, ಕೆಲವು ಅಸತ್ಯದಿಂದ ಕೂಡಿಕೊಂಡಿವೆ. ನಾಲ್ಕು ಸುವಾರ್ತೆಗಳು ಸ್ವತಃವಾಗಿ ದೇವರು

ಮಾರುವೇಷದಲ್ಲಿ ಇದ್ದು ಹೇಳಿರುವವಾದ್ದರಿಂದ ಅದರಲ್ಲಿ ಎಲ್ಲಾ ಜ್ಞಾನವೇ ಇದೆ. ಮನುಷ್ಯರು ಹೇಳಿರುವವುಗಳಲ್ಲಿಯೇ ದೇವರ ಜ್ಞಾನವನ್ನು ಕುರಿತು ಹೇಳಿರುವ ಮಾತುಗಳೇ ಆದರೂ ಅವು ಮನುಷ್ಯರು ಹೇಳಿರುವುದರಿಂದ ಸತ್ಯಾಸತ್ಯಗಳಿಂದ ಕೂಡಿಕೊಂಡಿವೆ.

ಬೈಬಲ್ ಗ್ರಂಥವೆಲ್ಲವೂ ಮೂರು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಮೊದಲಿರುವ 39 ಪಾಠಗಳನ್ನು ಹಳೆಯ ನಿಬಂಧನೆ ಎನ್ನುತ್ತಿದ್ದೇವೆ. ನಂತರ **'ಹೊಸನಿಬಂಧನೆ'** ಎಂಬ ಹೆಸರಿನಿಂದ 27 ಪಾಠಗಳಿವೆ. ಹಳೆಯ ನಿಬಂಧನೆ, ಹೊಸ ನಿಬಂಧನೆ ಎಂದು ಎರಡು ಭಾಗಗಳಾಗಿ ಎಲ್ಲರೂ ಬೈಬಲ್ ಗ್ರಂಥವನ್ನು ಹೇಳುತ್ತಿದ್ದಾರೆ. ಆದರೇ ನಾವು **'ಸುವಾರ್ತೆಗಳು'** ಎನ್ನುವ ನಾಲ್ಕು ಪಾಠಗಳನ್ನು ಅವುಗಳಲ್ಲಿ ಬೆರೆಸದೆ ಪ್ರತ್ಯೇಕವಾಗಿ ಹೇಳಿದರೇ ಬೈಬಲ್‌ನನ್ನು ಮೂರು ಭಾಗಗಳಾಗಿ ಹೇಳಬಹುದು. ಬೈಬಲ್ ಗ್ರಂಥವನ್ನು ಎರಡುಭಾಗಗಳಾಗಿ ಹೇಳುವುದಕ್ಕಿಂತ ಮೂರು ಭಾಗಗಳಾಗಿ ಹೇಳುವುದೇ ನ್ಯಾಯ. ಏಕೆಂದರೇ! ದೇವರ ಮಾತುಗಳನ್ನು ಒಂದುಕಡೆ, ಮನುಷ್ಯರ ಮಾತುಗಳನ್ನು ಮತ್ತೊಂದುಕಡೆ ಮಾಡಿ ಹೇಳಿದರೇ ಬೈಬಲ್ ಮೂರು ಭಾಗಗಳಾಗುವುದು. ದೇವರು ಮನುಷ್ಯನಾಗಿ ಇದ್ದರೂ ದೇವರು ದೇವರೇ. ಮನುಷ್ಯರ ಮಾತುಗಳನ್ನು ದೇವರ ಮಾತುಗಳನ್ನು ಬೆರೆಸದೆ ಬೇರೆಯಾಗಿ ಹೇಳಿಕೊಂಡರೇ ದೇವರನ್ನು ಗೌರವಿಸಿದಂತಾಗುವುದು. ಹಾಗಲ್ಲದೇ ಮನುಷ್ಯರ ಮಾತುಗಳೊಂದಿಗೆ ದೇವರ ಮಾತುಗಳನ್ನು ಬೆರೆಸಿದರೇ ದೇವರನ್ನು ಗುರುತಿಸದಂತೆ, ಗೌರವಿಸದಂತೆ ಆಗುತ್ತದೆ. ವಾಸ್ತವವಾಗಿ ಮನುಷ್ಯನಾಗಿ ಬಂದಿರುವ ದೇವರನ್ನು ಆಗ ಆತನಿರುವ ಸಮಯದಲ್ಲಿ ಯಾರೂ ಗುರುತಿಸಲಾರರು. ಆತನು ಹೋದ ನಂತರ ಆತನು ಹೇಳಿರುವ ಜ್ಞಾನವನ್ನು ಅನುಸರಿಸಿ ದೇವರನ್ನು ಗುರುತಿಸಬಹುದು. ಆದರೇ ಆತನು ಹೇಳಿರುವ ಮಾತುಗಳನ್ನೇ ಗ್ರಂಥವಾಗಿ ಬರೆಯುತ್ತಾ, ಆತನ ಜ್ಞಾನವನ್ನು ಗುರುತಿಸದಂತೆ ಮನುಷ್ಯರ ಮಾತುಗಳಲ್ಲಿ ಬೆರೆಸುವುದು ದೇವರು ಮತ್ತು ಮನುಷ್ಯರು ಹೇಳಿರುವ ಮಾತುಗಳನ್ನು ಬೆರೆಸಿ ಓದಿಕೊಳ್ಳುವುದು ನೋಡಿದರೇ ದೇವರ ಜ್ಞಾನವನ್ನು ಮನುಷ್ಯ ಸ್ವಲ್ಪವಾದರೂ ಗುರುತಿಸಲಿಲ್ಲವೆಂದು ಅರ್ಥವಾಗುತ್ತಿದೆ.

ಬೈಬಲ್ ಗ್ರಂಥದಲ್ಲಿ ಯೇಸು ಮನುಷ್ಯನಾಗಿ ಇದ್ದಾಗ ಕೇವಲ ಮೂರು ವರ್ಷಗಳು ಮಾತ್ರವೇ ಬೋಧನೆಯನ್ನು ಹೇಳಿದ್ದಾನೆ. ಆ ಮೂರು ವರ್ಷಗಳಲ್ಲಿ ಹೇಳಿರುವ ಮಾತುಗಳೆಲ್ಲವೂ ದೈವಜ್ಞಾನದಿಂದ ಕೂಡಿಕೊಂಡಿರುವ ಮಾತುಗಳೇ. ಆ ಮಾತುಗಳನ್ನು ಗ್ರಹಿಸುವುದಾದರೇ ಸಂಪೂರ್ಣ ಜ್ಞಾನ ಲಭ್ಯವಾಗುವುದು. ಮನುಷ್ಯ ಜನ್ಮಗಳಿಂದ ಹೊರಬಿದ್ದು ದೇವರಬಳಿ ಸೇರುವುದಕ್ಕೆ ಸರಿಹೋಗುವ ಜ್ಞಾನವನ್ನು ಯೇಸುವಾಗಿರುವಾಗ ದೇವರು ಬೋಧಿಸಿದ್ದಾನೆ. ಆದರೇ ಮನುಷ್ಯರು ಆಗಾಗಲೀ, ನಂತರದ ಕಾಲದಲ್ಲಾಗಲೀ ದೇವರ ಜ್ಞಾನವನ್ನು ಗುರುತಿಸದವರಾಗಿ ಮನುಷ್ಯರು ಹೇಳಿರುವ ಮಾತುಗಳನ್ನು, ದೇವರು ಹೇಳಿರುವ ಮಾತುಗಳನ್ನು ಬೆರೆಸಿ ಓದಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ದೈವಗ್ರಂಥದಲ್ಲಿ ದೇವರು ಹೇಳಿರುವ ಜ್ಞಾನವೇ ಇರಬೇಕು. ಆದರೇ ಮೂರು ದೈವಗ್ರಂಥಗಳಲ್ಲಿ ದೇವರು ಹೇಳಿರುವುದು ಮಾತ್ರವೇ ಇರದೆ ಅದರಲ್ಲಿ ಮನುಷ್ಯರು ಹೇಳಿರುವುದು ಕೂಡಾ ಬೆರೆತಿರುತ್ತದೆ. ಬೈಬಲ್ ಗ್ರಂಥವನ್ನು ಗಮನಿಸಿದರೇ ದೇವರು ಹೇಳಿರುವುದು ನಾಲ್ಕು ಪಾಠಗಳಾದರೇ ಮನುಷ್ಯರು ಹೇಳಿರುವುದು 62 ಪಾಠಗಳಿವೆ. ಹಾಗೆಯೇ ಭಗವದ್ಗೀತೆಯಲ್ಲಿ ಏಳುನೂರು (700) ಶ್ಲೋಕಗಳಿದ್ದರೇ, ಕೆಲವು ಹತ್ತರ ಸಂಖ್ಯೆಯಲ್ಲಿ ಕಲ್ಪಿತ ಶ್ಲೋಕಗಳು ಬೆರೆತಿವೆ. ಇನ್ನು ಖುರಾನ್‌ಗ್ರಂಥ ವಿಷಯದೊಳಗೆ ಬಂದರೇ ಎಲ್ಲಾ ದೇವರು ಹೇಳಿರುವುದೇ ಇದ್ದಂತಿದ್ದರೂ ಎಲ್ಲಾ ದೇವರ ಜ್ಞಾನವೇ ಇದೆಯೆಂದು ಹೇಳಲಾರೆವು. ಪ್ರತಿ ಗ್ರಂಥದಲ್ಲಿಯೂ ಮನುಷ್ಯರು ಹೇಳಿರುವುದು ಎಷ್ಟೋಸ್ವಲ್ಪ ಬೆರೆತಿರುತ್ತದೆ. ದೇವರೇ ಹಾಗೆ ಇರುವಂತೆ ನಿರ್ಣಯ ಮಾಡಿದ್ದಾನೆ. ಗ್ರಂಥದಲ್ಲಿ ದೇವರ ಮಾತುಗಳು ಕೆಲವು, ಮನುಷ್ಯರ ಮಾತುಗಳು ಕೆಲವು ಇರುವುದರಿಂದ ದೇವರಿಗೆ ಇಷ್ಟವಾದವನಿಗೆ ದೇವರ ಜ್ಞಾನ, ದೇವರಿಗೆ ಇಷ್ಟವಿಲ್ಲದವನಿಗೆ ಮಾಯೆ ಜ್ಞಾನ ಕಾಣಿಸುವಂತೆ ತನ್ನ ಗ್ರಂಥಗಳಲ್ಲಿ ಮನುಷ್ಯರು ಕಲ್ಪಿಸಿ ಬರೆದಿರುವ ಅಜ್ಞಾನವು ಕೂಡಾ ಸ್ವಲ್ಪ ಇರುವಂತೆ ದೇವರೇ ಮಾಡಿದ್ದಾನೆ. ದೇವರಿಗೆ ತಿಳಿಯದೆ ಯಾವುದೂ ನಡೆಯುವುದಿಲ್ಲ. ದೈವಗ್ರಂಥಗಳಲ್ಲಿ ಅಜ್ಞಾನವು ಜಾಗ ಮಾಡಿಕೊಂಡಿದೆಯೆಂದರೇ ಅದು ದೇವರ ಇಷ್ಟದಿಂದಲೇ ಇರುತ್ತದೆ.

ಮನುಷ್ಯನ ಶ್ರದ್ಧೆಯನ್ನನುಸರಿಸಿ ಜ್ಞಾನ ಲಭ್ಯವಾಗುತಿರುತ್ತದೆ. ದೇವರು ಮನುಷ್ಯನಾಗಿರುವಾಗ ಬೋಧಿಸುವ ಬೋಧನೆ ಸ್ವಚ್ಛವಾದುದಾಗಿ ಇರುತ್ತದೆ. ನಂತರ ಆ ಬೋಧನೆ ಗ್ರಂಥ ರೂಪವಾಗಿ ಬದಲಾಗುವಾಗ ಅದನ್ನು ಮನುಷ್ಯರೇ ಬರೆಯಬೇಕಾಗಿರುತ್ತದೆ. ಆಗ ಗ್ರಂಥವು ಕಲುಷಿತವಾಗುವುದಕ್ಕೆ ಅವಕಾಶವಿದೆ. ಮೊದಲು ವ್ಯಾಸನು ಕೃಷ್ಣನು ಹೇಳಿರುವ ಜ್ಞಾನವನ್ನೇ ಭಗವದ್ಗೀತೆಯಾಗಿ ಬರೆದರೂ ನಂತರ ಕೆಲವರು ತಮ್ಮ ಭಾವನೆಗಳನ್ನು ಶ್ಲೋಕಗಳ ರೂಪದಲ್ಲಿ ತಯಾರಿಮಾಡಿ ಭಗವದ್ಗೀತೆಯೊಳಗೆ ಸೇರಿಸಿದ್ದಾರೆ. ಬೈಬಲ್ ವಿಷಯಕ್ಕೆ ಬಂದರೇ ಪ್ರತ್ಯಕ್ಷವಾಗಿ ಕಾಣಿಸುವಂತೆ ಯೇಸು ಹೇಳಿರುವ ಜ್ಞಾನವು ನಾಲ್ಕು ಸುವಾರ್ತೆಗಳಾಗಿರುವಾಗ, ಮನುಷ್ಯರು ಬರೆದಿರುವುದು 62 ಪಾಠಗಳಾಗಿ ಇದೆ. ಖುರಾನ್ ವಿಷಯಕ್ಕೆ ಬಂದರೇ ಅದನ್ನು ಕುರಿತು ಹೀಗೆ ಎಂದು ಹೇಳಲಾರೆವು ಆದರೇ, ದೇವರೇ "ನಾನು ಮನುಷ್ಯರನ್ನು ತಪ್ಪುದಾರಿ ಹಿಡಿಸುತ್ತೇನೆ" ಎಂದು ಹೇಳುವುದರಿಂದ ಅದಕ್ಕಾಗಿ ದೇವರಿಗೆ ತಿಳಿದೇ ಸ್ವಲ್ಪವಾದರೂ ಕಲುಷಿತ ಸೇರಿರಬಹುದೆಂದು ಅಂದುಕೊಳ್ಳುತ್ತಿದ್ದೇವೆ.

ಶ್ರದ್ಧೆ ಬುದ್ಧಿ ಇರುವವನು ಸಕ್ರಮವಾದ ಜ್ಞಾನ ತಿಳಿದು ಕಲುಷಿತ ಜ್ಞಾನದಕಡೆ ಹೋಗದಂತಿರುವುದಕ್ಕೆ ಇದು ನಿಜವಾದ ಜ್ಞಾನ, ಇದು ಅಸತ್ಯ ಜ್ಞಾನವೆಂದು ತಿಳಿಯುವುದಕ್ಕೆ ತನ್ನ ಗ್ರಂಥದಲ್ಲಿನ ವಾಕ್ಯಗಳನ್ನೇ ಒರೆಕಲ್ಲಾಗಿ ಮಾಡಿಟ್ಟಿದ್ದಾನೆ. ಆದ್ದರಿಂದ ಮನುಷ್ಯರು ಹೇಳಿರುವ ಜ್ಞಾನವನ್ನು, ದೇವರು ಹೇಳಿರುವ ಜ್ಞಾನವನ್ನು ಸುಲಭವಾಗಿ ಗ್ರಹಿಸಬಹುದು. ಈಗ ಖುರಾನ್ ಗ್ರಂಥದಲ್ಲಿನ ಜ್ಞಾನವನ್ನು ಒರೆಕಲ್ಲಾಗಿ ದೇವರು ತೋರಿಸಿರುವುದರಿಂದ ಅದರೊಂದಿಗೆ ಬೈಬಲ್‌ನಲ್ಲಾಗಲೀ, ಖುರಾನ್ ಗ್ರಂಥದಲ್ಲಾಗಲೀ ಇರುವ ಮನುಷ್ಯರ ಕಲುಷಿತ ಜ್ಞಾನವನ್ನು ಗುರುತಿಸಬಹುದು. ಬೈಬಲ್ ಗ್ರಂಥದಲ್ಲಿ 62 ಪಾಠಗಳು ಕಲುಷಿತವಾಗಿವೆಯೆಂದು ಅದರಲ್ಲಿ ಜ್ಞಾನವನ್ನು ಅಜ್ಞಾನವನ್ನು, ಸತ್ಯಾಸತ್ಯಗಳನ್ನು ಒರೆಕಲ್ಲಿನಿಂದ ತಿಳಿದುಕೊಳ್ಳಬಹುದೆಂದು ಹೇಳಿದ್ದೇವೆ. ಬೈಬಲ್‌ಗು, ಖುರಾನ್‌ಗು ಖುರಾನ್ ಗ್ರಂಥದಲ್ಲಿನ ಒರೆಕಲ್ಲಿನ ವಾಕ್ಯಗಳನ್ನೇ

ಉಪಯೋಗಿಸಿ ಸತ್ಯಾಸತ್ಯಗಳನ್ನು ನಿರ್ಣಯಿಸಬಹುದು. ಬೈಬಲ್ ಗ್ರಂಥದಲ್ಲಿನ ನಾಲ್ಕು ಸುವಾರ್ತೆಗಳಲ್ಲಿನ ವಾಕ್ಯಗಳಲ್ಲಿ ಇಲ್ಲದ ವಿಷಯವನ್ನು ಪ್ರಥಮ ದೈವಗ್ರಂಥ ದಲ್ಲಾಗಲೀ, ಅಂತಿಮ ದೈವಗ್ರಂಥದಲ್ಲಾಗಲೀ ನೋಡಬಹುದು.

'ಪ್ರಾರ್ಥನೆ ಅಥವಾ ಆರಾಧನೆ' ವಿಷಯದಲ್ಲಿ ಭಗವದ್ಗೀತೆಯಲ್ಲಿ ಒರೆಕಲ್ಲನ್ನು ಮೂರು ಶ್ಲೋಕಗಳಲ್ಲಿ ಹೇಳಿಕೊಂಡು ಉಪಯೋಗಿಸಿ ನೋಡಿಕೊಂಡು ತಪ್ಪನ್ನು ತಿಳಿದುಕೊಂಡಿದ್ದೇವೆ. ಈಗ ಅದೇ ಪ್ರಾರ್ಥನೆ ವಿಷಯವು ಕ್ರೈಸ್ತವರಲ್ಲಿ ನೋಡಿದಂತಾದರೇ ಕ್ರೈಸ್ತರ ಪ್ರಾರ್ಥನೆ ಒಂದೇ ದೇವರ ಮೇಲೆ ಇರುವುದಾದರೂ ಅದು ಬಹಿರಂಗ ಪ್ರಾರ್ಥನೆಯಾಗಿದೆ. ಹಿಂದೂಗಳು ಬಹು ದೇವತಾರಾಧನೆಯನ್ನು ಖಂಡಿಸಿ ಒಂದೇ ದೇವರಕಡೆ ದೃಷ್ಠಿ ಹರಿಸುವಂತೆ ರಾಜವಿದ್ಯೆರಾಜಗುಹ್ಯೆ ಯೋಗದಲ್ಲಿನ ಮೂರು ಶ್ಲೋಕಗಳಮೂಲಕ ತಿಳಿದು ಕೊಂಡಿದ್ದೇವೆ. ಈಗ ಪ್ರಾರ್ಥನೆ ವಿಷಯದಲ್ಲಿ ಸತ್ಯಾಸತ್ಯವನ್ನು ತಿಳಿಯುವುದಕ್ಕೆ ಸುವಾರ್ತೆಗಳಲ್ಲಿನ ಒರೆಕಲ್ಲನ್ನು ಉಪಯೋಗಿಸಿ ನೋಡೋಣ. ಈ ವಿಷಯವಾಗಿ ಮತ್ತಾಯ ಸುವಾರ್ತೆ 6ನೇ ಅಧ್ಯಾಯದಲ್ಲಿ 5ರಿಂದ 8ನೇ ವಾಕ್ಯದವರೆಗು ನೋಡಿರಿ. (ಮತ್ತಾಯ 6-5, 6, 7, 8) **"ನೀವು ಪ್ರಾರ್ಥನೆ ಮಾಡುವಾಗ ವೇಷಧಾರ ರಂತೆ ಇರಬೇಡ. ಮನುಷ್ಯರಿಗೆ ಕಾಣಿಸಬೇಕೆಂದು ಸಮಾಜ ಮಂದಿರಗಳಲ್ಲಿಯೂ, ಬೀದಿಗಳ ಮೂಲೆಗಳಲ್ಲಿ ನಿಂತು ಪ್ರಾರ್ಥನೆ ಮಾಡುವುದು ಅವರಿಗೆ ಇಷ್ಟ. ಅವರು ತಮ್ಮ ಫಲವನ್ನು ಪಡೆದಿದ್ದಾರೆಂದು ನಿಶ್ಚಯವಾಗಿ ನಿಮ್ಮೊಂದಿಗೆ ಹೇಳುತ್ತಿದ್ದೇನೆ. ನೀನು ಪ್ರಾರ್ಥನೆ ಮಾಡುವಾಗ ನಿನ್ನ ಕೋಣೆಯೊಳಗೆ ಹೋಗಿ ಬಾಗಿಲುಗಳನ್ನು ಹಾಕಿ, ರಹಸ್ಯವಾಗಿರುವ ನಿನ್ನ ತಂದೆಯನ್ನು ಪ್ರಾರ್ಥನೆ ಮಾಡು. ಆಗ ರಹಸ್ಯವಾಗಿ ನೋಡುವ ನಿನ್ನ ತಂದೆ ನಿನಗೆ ಪ್ರತಿಫಲ ಕೊಡುತ್ತಾನೆ. ಮತ್ತು ನೀವು ಪ್ರಾರ್ಥನೆ ಮಾಡುವಾಗ ಅನ್ಯಜನರಹಾಗೆ ವ್ಯರ್ಥವಾದ ಮಾತುಗಳನ್ನು ನುಡಿಯಬೇಡ. ವಿಸ್ತರಿಸಿ ಮಾತನಾಡುವುದರಿಂದ ತಮ್ಮ ಮನವಿ ಕೇಳಿಸುವುದೆಂದು ಅವರು ತಿಳಿಯುತ್ತಿದ್ದಾರೆ. ನೀವು ಅವರಹಾಗೆ ಇರಬೇಡಿ. ನೀವು ನಿಮ್ಮ ತಂದೆಯನ್ನು ಕೇಳುವ ಮೊದಲೇ ನಿಮಗೆ ಅಕ್ಕರೆಯಾಗಿ ಇರುವವು ಯಾವುವೋ ಆತನಿಗೆ ತಿಳಿಯುವುದು."**

ಈ ವಾಕ್ಯಗಳು ಸುಲಭವಾಗಿ ಅರ್ಥವಾಗುವಂತೆ ಮೇಲ್ನೋಟಕ್ಕೆ ಕಾಣಿಸುತ್ತಿದ್ದರೂ ಇದರಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿರುವುದು ಎಷ್ಟೋ ಇದೆ. ಈ ವಾಕ್ಯಗಳು ಸ್ಥೂಲ ವಿಷಯವನ್ನು ಕುರಿತಾಗಿ ಅಲ್ಲದೆ ಸೂಕ್ಷ್ಮ ವಿಷಯವನ್ನು ಬೋಧಿಸುತ್ತಿವೆ. 'ನೀನು ಪ್ರಾರ್ಥನೆ ಮಾಡುವಾಗ ನಿನ್ನ ಕೋಣೆಯೊಳಗೆ ಹೋಗಿ ಬಾಗಿಲುಗಳು ಹಾಕಿ' ಎಂದು ಹೇಳುವವರೆಗು ಸ್ಥೂಲ ವಿಷಯವಾಗಿ ಎಲ್ಲರಿಗೂ ಅರ್ಥವಾಗಬಲ್ಲದು. ನಂತರ **"ರಹಸ್ಯವಾಗಿರುವ ನಿನ್ನ ತಂದೆಯನ್ನು ಪ್ರಾರ್ಥನೆ ಮಾಡು. ಆಗ ರಹಸ್ಯವಾಗಿ ನೋಡುತ್ತಿರುವ ನಿನ್ನ ತಂದೆ ನಿನಗೆ ಪ್ರತಿಫಲ ಕೊಡುವನು"** ಎಂದು ಬರೆದಿರುವುದೆಲ್ಲಾ ಸೂಕ್ಷ್ಮ ವಿಷಯವಾಗಿದೆ. ಇಲ್ಲಿ 'ರಹಸ್ಯವಾಗಿರುವ ನಿನ್ನ ತಂದೆಯನ್ನು ಪ್ರಾರ್ಥನೆ ಮಾಡು' ಎಂದು ಇದೆ ಅಲ್ಲವೇ! 'ನಿನ್ನ ತಂದೆಯನ್ನು ಪ್ರಾರ್ಥನೆ ಮಾಡು' ಎಂದು ಇರುವುದೇ ಅಲ್ಲದೇ "ರಹಸ್ಯವಾಗಿರುವ" ಎಂದು ಇದೆ. ಇಲ್ಲಿ ಬಹಳ ಸೂಕ್ಷ್ಮವಾಗಿ ಇರುವ ವಿಷಯ **'ತಂದೆ ಮತ್ತು ರಹಸ್ಯ'**. ರಹಸ್ಯವೆಂದರೇ ಏನು? ತಂದೆ ಎಂದರೇ ಯಾರು? ಎಂಬ ಪ್ರಶ್ನೆಗಳಿಗೆ ಉತ್ತರ ತಿಳಿದಿರಬೇಕು. ಆದರೇ ಬಹಳಜನ ನಮಗೆ ಕಾಣಿಸದೆ ಇರುವ ದೇವರೆಂದು ಭಾವಿಸಿಕೊಂಡು ಕಾಣಿಸದೆ ಇರುವ ದೇವರನ್ನು ಪ್ರಾರ್ಥಿಸುವುದೇ ಅಲ್ಲವೇ! ಎಂದು ಅಂದುಕೊಳ್ಳುತ್ತಿರುತ್ತಾರೆ. 'ರಹಸ್ಯವಾಗಿ ನೋಡುತ್ತಿರುವ ನಿನ್ನ ತಂದೆ ನಿನಗೆ ಪ್ರತಿಫಲ ಕೊಡುವನು' ಎಂದು ಇದೆ. ತಂದೆಯಾದವನು ರಹಸ್ಯವಾಗಿ ನೋಡುವುದು ಎಂದರೇ ಎಲ್ಲಿಂದ ನೋಡುತ್ತಿದ್ದಾನೆ? ರಹಸ್ಯ ಎಂದರೇ ಎಲ್ಲಿದೆ? ಅಲ್ಲಿಂದ ನಿನ್ನನ್ನು ಹೇಗೆ ನೋಡುತ್ತಿದ್ದಾನೆ? ಎಂದು ಪ್ರಶ್ನಿಸಿಕೊಂಡು, ಆ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿಯಬೇಕು. ತಂದೆ ಎಂದರೇ ದೇವರೇನಾ? ಎಂಬ ಪ್ರಶ್ನೆಯನ್ನು ಕೂಡಾ ಹಾಕಬೇಕಾಗಿರುತ್ತದೆ. 'ರಹಸ್ಯವಾಗಿ ನೋಡುತ್ತಿರುವ' ಎಂದು ವಾಕ್ಯದಲ್ಲಿದೆ. 'ರಹಸ್ಯವಾಗಿ ನೋಡುತ್ತಿರುವ ನಿನ್ನ ತಂದೆ' ಎಂದು ಇದೆ ಅಲ್ಲವೇ! ರಹಸ್ಯವಾಗಿ ಯಾರನ್ನು ನೋಡುತ್ತಿದ್ದಾನೆ? ಎಂದು ಪ್ರಶ್ನಿಸಿಕೊಂಡರೇ ನಿನ್ನನ್ನೇ ನೋಡುತ್ತಿದ್ದಾನೆಂದು ಉತ್ತರ ಬರುತ್ತದೆ. ಆಗ ನೀನು ಕೂಡಾ ರಹಸ್ಯವಾಗಿರುವೆಯಾ? ಎಂಬ ಪ್ರಶ್ನೆ ಬರಬಹುದು. ಅಷ್ಟೇ ಅಲ್ಲದೆ ಪ್ರಾರ್ಥನೆಗಾಗಿ

ಕೋಣೆಯೊಳಗೆ ಹೋಗಿ ಬಾಗಿಲುಗಳು ಮುಚ್ಚಿ ಎಂದು ಹೇಳುವುದರಲ್ಲಿ ಅರ್ಥವೇನು? ಎಂದು ಕೂಡಾ ಆಲೋಚಿಸಬೇಕಾಗಿರುತ್ತದೆ. ಕೋಣೆ ಇಲ್ಲದವರು, ಕೋಣೆಯಿದ್ದರೂ ಕೋಣೆಗೆ ಬಾಗಿಲುಗಳು ಇಲ್ಲದವರು ಬಹಳಜನರಿದ್ದಾರೆ. ಅಂಥವರು ಪ್ರಾರ್ಥನೆ ಮಾಡುವುದಕ್ಕೆ ಅವಕಾಶವಿರುವುದಿಲ್ಲವಾ? ಎನ್ನುವ ಪ್ರಶ್ನೆಯೂ ಸಹ ಬರಬಹುದು. ಒಂದು ಮನೆಯಲ್ಲಿ ಹೆಚ್ಚಿನ ಜನಸಂಖ್ಯೆ ಇರುವವರು ಇದ್ದಾರೆ. ಕೆಲವು ಮನೆಗಳಲ್ಲಿ ಕೋಣೆಗಳೆ ಇರುವುದಿಲ್ಲ. ಅಂಥವರು ಪ್ರಾರ್ಥನೆ ಹೇಗೆ ಮಾಡಬೇಕು? ಕೋಣೆ ಎಂದರೇ ಏನು? ಕೋಣೆಯೊಳಗೆ ತೂರಿ ಬಾಗಿಲುಗಳು ಹಾಕಿದರೇ ನೀನು ರಹಸ್ಯದಲ್ಲಿ ಯಾರಿಗೂ ಕಾಣಿಸದೆ ಇದ್ದಂತೆಯೇ ಅಲ್ಲವೇ! ಅಸಲು ಕೋಣೆ ಎಂದರೇ ಸ್ಥೂಲವಾಗಿ ಇರುವುದಾ? ಸೂಕ್ಷ್ಮವಾಗಿ ಇರುವುದಾ? ಕೋಣೆ ನಿನ್ನ ಶರೀರಕ್ಕಾ? ನಿನಗಾ? ನಿನಗಾದರೇ ನೀನು ಕೋಣೆಯೊಳಗಿದ್ದೀಯಾ? ಶರೀರದಲ್ಲಿ ಇದ್ದೀಯಾ? ಎಂದು ಪ್ರಶ್ನಿಸಿಕೊಂಡು ನೋಡಿ ಇಷ್ಟು ಪ್ರಶ್ನೆಗಳಿಗೆ ಉತ್ತರ ತಿಳಿದಾಗಲೇ ನಿನ್ನ ಪ್ರಾರ್ಥನೆ ಸರಿಯಾದುದಾಗುತ್ತದೆ. ದೇವರು ಹೇಳಿರುವ ಪ್ರಾರ್ಥನೆ ಮಾಡಿದಂತಾಗುತ್ತದೆ. ಹಾಗಲ್ಲದೇ ಈ ಪ್ರಶ್ನೆಗಳಿಗೆ ಉತ್ತರವಿಲ್ಲದೇ ಪ್ರಾರ್ಥನೆ ಮಾಡಿದರೇ ಅದು ಪ್ರಾರ್ಥನೆ ಎನಿಸಿಕೊಳ್ಳುವುದಿಲ್ಲ. ನಾನು ನಿನಗೆ ಹೇಳಿರುವುದು ಏನು? ನೀನು ಮಾಡಿರುವುದು ಏನು? ಎಂದು ದೇವರಿಂದ ಪ್ರಶ್ನೆ ಬರಬಹುದು.

ಕ್ರೈಸ್ತರು ಈದಿನವಾಗಲೀ, ಪೂರ್ವವಾಗಲೀ ಈಗ ನಾವು ಹೇಳಿದಷ್ಟು ಆಳವಾಗಿ ಆಲೋಚಿಸುತ್ತಿಲ್ಲ. ಪ್ರಾರ್ಥನೆ ವಿಷಯದಲ್ಲಿಯೇ ಅಲ್ಲದೇ ಉಳಿದ ಎಲ್ಲಾ ವಿಷಯಗಳಲ್ಲಿಯೂ ಆಳವಾಗಿ ಆಲೋಚಿಸುತ್ತಿಲ್ಲ. ಯೇಸುಪ್ರಭು ಏನು ಹೇಳಿದ್ದಾನೆಂದು ಆಲೋಚಿಸದೆ ತಮಗೆ ತೋಚಿರುವುದೇ ಹೇಳಿದ್ದಾನೆಂದು, ತಮಗೆ ಅರ್ಥವಾಗಿರುವುದನ್ನೇ ಹೇಳಿದ್ದಾನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಬೈಬಲ್‌ನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ ಹೋಗಿರುವುದರಿಂದ ಬೈಬಲ್‌ನಲ್ಲಿನ ವಿಷಯಗಳು ಒಂದು ಕೂಡಾ ಸರಿಯಾಗಿ ಅರ್ಥವಾಗದೆ ಹೋಗಿವೆ. ಒರೆಕಲ್ಲನ್ನು ಉಪಯೋಗಿಸಿ ನೋಡಿದಾಗ

ಮನುಷ್ಯ ಅರ್ಥ ಮಾಡಿಕೊಂಡಿರುವುದರಲ್ಲಿನ ಜ್ಞಾನ, ಅಜ್ಞಾನವು ಹೊರಬೀಳುತ್ತಿದೆ. ಯೇಸು ಪ್ರಭು ಹೇಳಿರುವ 'ಜ್ಞಾನ' ಎನ್ನುವ ಒರೆಕಲ್ಲಿನಿಂದಲೇ ಬೈಬಲ್‌ನಿಂದ ನಾವು ಅರ್ಥ ಮಾಡಿಕೊಂಡಿರುವುದನ್ನು ಪರೀಕ್ಷಿಸಿ ನೋಡಿಕೊಳ್ಳಿರೆಂದು ಹೇಳುತ್ತಿದ್ದೇವೆ. ಒರೆಕಲ್ಲಿನ ಪ್ರಕಾರ ನಿನ್ನದು ಜ್ಞಾನವಾದರೇ ಪರವಾಗಿಲ್ಲ. ಅಜ್ಞಾನವಾದರೇ ಸರಿಯಾದ ಆಲೋಚನೆ ಮಾಡಿ ಸರಿಯಾದ ಜ್ಞಾನವನ್ನು ತಿಳಿಯಿರೆಂದು ಹೇಳುತ್ತಿದ್ದೇವೆ.

ಇಲ್ಲಿಯವರೆಗೂ ಎರಡು ಮತಗಳ ಪ್ರಾರ್ಥನೆ ವಿಷಯದಲ್ಲಿ ಹಿಂದೂಗಳು ದೇವರನ್ನು ಬಿಟ್ಟು, ದೇವರು ಯಾರೋ ತಿಳಿಯದೆ, ದೇವರು ಬೇರೆ ದೇವತೆಗಳು ಬೇರೆ ಎನ್ನುವ ವಿಷಯ ತಿಳಿಯದೆ ಎಷ್ಟೋ ದೇವತೆಗಳನ್ನು ಆರಾಧಿಸುತ್ತಿರುವಾಗ ಭಗವದ್ಗೀತೆಯಲ್ಲಿನ ಒರೆಕಲ್ಲಿನಿಂದ ಅವರ ಅಜ್ಞಾನವನ್ನು ಹೊರಗೆ ಹೇಳುವುದಾಗಿದೆ. ನಂತರ ಕ್ರೈಸ್ತರ ವಿಷಯದಲ್ಲಿ ಪ್ರಾರ್ಥನೆ ವಿಧಾನವನ್ನು ನೋಡಿದರೇ ಅವರು ದೇವರು ಒಬ್ಬನೇ ಎಂದು ಒಬ್ಬ ದೇವರನ್ನೇ ಆರಾಧಿಸುತ್ತಿದ್ದರೂ, ಪ್ರಾರ್ಥನೆ ಮಾಡುವ ವಿಧಾನ ತಿಳಿಯದಿರುವುದರಿಂದ, ಬೈಬಲ್ ಗ್ರಂಥದಲ್ಲಿನ ಮತ್ತಾಯ ಸುವಾರ್ತೆಯಲ್ಲಿನ ಒರೆಕಲ್ಲಿನಿಂದ, ಅವರು ಆಚರಿಸುತ್ತಿರುವ ವಿಧಾನದಲ್ಲಿ ಸತ್ಯಾಸತ್ಯವನ್ನು ಹೇಳಿರುವುದಾಗಿದೆ. ಪ್ರಾರ್ಥನೆ ಮಾಡುವಾಗ ಜ್ಞಾನ ಪದ್ಧತಿಯಲ್ಲಿ ಹೇಗೆ ಆಲೋಚಿಸಬೇಕೋ ಒರೆಕಲ್ಲಿನ ಮೂಲಕ ತಿಳಿಸಿರುವುದಾಗಿದೆ. ಹಾಗೆ ಹೇಳುವುದರಿಂದ ಪ್ರಾರ್ಥನೆ ವಿಷಯದಲ್ಲಿ ಅವರು ಜಾಗ್ರತೆಯಾಗಿ ವ್ಯವಹರಿಸುವ ಅವಕಾಶವಿದೆ. ಈಗ ಮತ್ತೊಂದು ವಿಷಯವಾಗಿ ಅಂತಿಮ ದೈವಗ್ರಂಥ ಖುರಾನ್‌ನಲ್ಲಿನ ಪ್ರಾರ್ಥನೆ ವಿಷಯವನ್ನು ನೋಡೋಣ.

ಒಂದೇ ದೇವರನ್ನು ಆರಾಧಿಸುವವರಲ್ಲಿ ಮೊದಲನೆಯವರು ಮುಸ್ಲಿಮ್‌ರೇ ಎಂದು ಹೇಳಬಹುದು. ಅಷ್ಟೇ ಅಲ್ಲದೇ ಪ್ರಪಂಚದಲ್ಲಿ ದೇವರನ್ನು ಹೆಚ್ಚಾಗಿ ಆರಾಧಿಸುವವರು, ಪ್ರಾರ್ಥಿಸುವವರು ಮುಸ್ಲಿಮ್‌ರೇ ಎಂದು ಕೂಡಾ ಹೇಳಬಹುದು. ಅಸೂಯೆ ಇಲ್ಲದೇ ಇದ್ದದ್ದನ್ನು ಇದ್ದಹಾಗೆ ಹೇಳಿದರೇ,

ಅವರೊಂದಿಗೆ ಪ್ರಾರ್ಥನೆ ಮಾಡುವವರು ಪ್ರಪಂಚದಲ್ಲಿ ಯಾರೂ ಇಲ್ಲವೆಂದು ಹೇಳಬಹುದು. ಅತ್ಯಧಿಕ ಪ್ರಾರ್ಥನೆ ಮಾಡುವವರು ಮುಸ್ಲಿಮ್‌ರೇ. ಅವರ ಬಾಹ್ಯ ಜೀವನದಲ್ಲಿ ಹೇಗಿದ್ದರೂ ದೇವರ ವಿಷಯದಲ್ಲಿ ದೇವರ ಪ್ರಾರ್ಥನೆ ವಿಷಯದಲ್ಲಿ ಬಹಳ ಜಾಗ್ರತೆಯಾಗಿ ನಡೆದುಕೊಳ್ಳುತ್ತಿರುವರು. ದೇವರ ಪ್ರಾರ್ಥನೆ ವಿಷಯದಲ್ಲಿ ತಮ್ಮ ಹಿರಿಯರು ಹೇಳಿದಂತೆ ತಪ್ಪದೇ ಆಚರಿಸುತ್ತಿರುತ್ತಾರೆ. ದೇವರ ವಿಷಯದಲ್ಲಿ ಎಂತಹ ಅಶ್ರದ್ಧೆಯಾಗಲೀ, ಸೋಮಾರಿತನವಾಗಲೀ ಅವರಲ್ಲಿ ಸ್ವಲ್ಪವಾದರೂ ಕಾಣಿಸುವುದಿಲ್ಲ. ದೇವರ ಪ್ರಾರ್ಥನೆ ವಿಷಯದಲ್ಲಿ ಎಲ್ಲರು ಏಕಾಭಿಪ್ರಾಯ ಹೊಂದಿರುವುದೇ ಅಲ್ಲದೇ ಪ್ರಪಂಚ ವಿಷಯಗಳೆಲ್ಲವು ಗಲಿಗಿಂತ ಪ್ರಾರ್ಥನೆಗೇ ಹೆಚ್ಚಿನ ಬೆಲೆ ಕೊಡುತ್ತಿದ್ದಾರೆ. ಅಂತಿಮ ದೈವಗ್ರಂಥದಲ್ಲಿ ಅವರ ಪ್ರಾರ್ಥನೆಯನ್ನು **'ನಮಾಜ್'** ಎನ್ನುವ ಹೆಸರಿನಿಂದ ಕರೆಯುತ್ತಿದ್ದಾರೆ. ನಮಾಜ್ ವಿಷಯವನ್ನು ಖುರಾನ್ ಓದಿರುವ ಅವರ ಹಿರಿಯರು ಹೇಗೆ ಆಚರಿಸುತ್ತಿದ್ದಾರೋ ಉಳಿದವರು ಕೂಡಾ ಹಾಗೆಯೇ ಆಚರಿಸುತ್ತಿದ್ದಾರೆ. ಮುಸ್ಲಿಮ್‌ರು ಪ್ರಾರ್ಥನೆಯಲ್ಲಿ ಮೊದಲನೆಯವರಾಗಿದ್ದರೂ, ಖುರಾನ್ ಗ್ರಂಥದಲ್ಲಿ ಅಲ್ಲಾಹ್ ಪ್ರಾರ್ಥನೆ ವಿಷಯದಲ್ಲಿ ಏನು ಹೇಳಿದ್ದಾನೋ ತಪ್ಪದೇ ನೋಡಬೇಕಾದ ಅವಶ್ಯವಿದೆ. ದೇವರು ತನ್ನ ಜ್ಞಾನವನ್ನು ಒಂದೇ ಗ್ರಂಥವಾಗಿ ಮನುಷ್ಯರಿಗೆ ಕೊಟ್ಟಿದ್ದಾನೆ. ಕೊನೆಗದು ಮೂರು ಗ್ರಂಥಗಳಾಗಿ ಬದಲಾಗಿದೆ. ದೇವರು ಮೊದಲು ತನ್ನ ಜ್ಞಾನವನ್ನು ಒರೆಕಲ್ಲಿನ ರೂಪದಲ್ಲಿ ಕೊಟ್ಟಿದ್ದಾನೆ, ಅದೇ ಮೂರು ಗ್ರಂಥಗಳಾಗಿ ನಮ್ಮ ಮುಂದಿದೆ. ಆದ್ದರಿಂದ ಕೊನೆಯಲ್ಲಿ ತಯಾರಾದ ಖುರಾನ್ ಗ್ರಂಥವು ಕೂಡಾ ಸತ್ಯಾಸತ್ಯಗಳನ್ನು ನಿರ್ಣಯಿಸಿ ಹೇಳುವುದರಲ್ಲಿ ಒರೆಕಲ್ಲಾಗಿದೆ ಎಂದು ತಿಳಿಯುತ್ತಿದೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 2, ಆಯತ್ 53ರಲ್ಲೂ, ಮತ್ತೊಂದು ಕಡೆ ಸೂರಾ 25 ಆಯತ್ 1 ರಲ್ಲೂ ಈ ವಿಧವಾಗಿ ಹೇಳಿರುವುದಾಗಿದೆ. (2-53) **"ನಾವು ಮೂಸಾಗೆ ನಿಮ್ಮ ಮಾರ್ಗದರ್ಶಕತ್ವ ನಿಮಿತ್ತ ಗ್ರಂಥವನ್ನು ಒರೆಕಲ್ಲಾಗಿ ಪ್ರಸಾದಿಸಿದ್ದೇವೆ"** ಎಂದು ಇದೆ. (25-1) **"ಸಮಸ್ತ ಲೋಕಗಳನ್ನು ಎಚ್ಚರಿಸುವವನಾಗಿ ಇರುವುದಕ್ಕಾಗಲಿ ತನ್ನ ದಾಸನ ಮೇಲೆ ಒರೆಕಲ್ಲನ್ನು ಅವತರಿಸುವಂತೆ ಮಾಡಿದ ಅಲ್ಲಾಹ್ ದೊಡ್ಡ ಶುಭಕರನು"**.

ಅಂತಿಮ ದೈವಗ್ರಂಥವು ಒರೆಕಲ್ಲಾಗಿ ಇದೆಯೆನ್ನುವುದಕ್ಕೆ ಅಲ್ಲಾಹ್ ಹೇಳಿರುವ ಮೇಲಿನ ಆಯತ್‌ಗಳೇ ಆಧಾರ. ಒರೆಕಲ್ಲೆಂದರೇ ಸತ್ಯಾಸತ್ಯಗಳನ್ನು ತಿಳಿಸುವುದೆಂದು ಅರ್ಥ. ಒರೆಕಲ್ಲನ್ನು ಉಪಯೋಗಿಸಿ ಗ್ರಂಥದಲ್ಲಿನ ವಾಕ್ಯಗಳನ್ನೇ ಒರೆಕಲ್ಲಾಗಿ ಮಾಡಿಕೊಂಡು, ಮನುಷ್ಯರು ದೇವರ ಬಗ್ಗೆ ಮಾಡುವ ಕಾರ್ಯಗಳು ಸರಿಯಾದವೋ ಅಲ್ಲವೋ ನಿರ್ಣಯಿಸಿ ಹೇಳಿಕೊಂಡಿದ್ದೇವೆ. ಈಗ ಖುರಾನ್ ಗ್ರಂಥದಲ್ಲಿ ದೇವರು ಕೊಟ್ಟಿರುವ ಒರೆಕಲ್ಲನ್ನು ಉಪಯೋಗಿಸಿಕೊಂಡು ಮುಸ್ಲಿಮ್‌ರು ಮಾಡುವ ಪ್ರಾರ್ಥನೆಯಲ್ಲಿ ಸತ್ಯವೆಷ್ಟು ಇದೆ? ಅಸತ್ಯ ಎಷ್ಟಿದೆ? ಎಂದು ನೋಡಿಕೊಳ್ಳೋಣ. ಒಂದು ವೇಳೆ ದೇವರು ಹೇಳಿರುವ ವಿಧಾನ ಮನುಷ್ಯರಿಗೆ ಸರಿಯಾಗಿ ಅರ್ಥವಾಗದೆ ಹೋದರೂ, ಒರೆಕಲ್ಲಿನಿಂದ ಲೋಪಗಳನ್ನು ಸರಿಪಡಿಸಿಕೊಂಡು ಮುಂದಕ್ಕೆ ಹೋಗುವ ಅವಕಾಶವನ್ನು ಹೊಂದಬಹುದು. ಒರೆಕಲ್ಲು ಮನುಷ್ಯರ ಅಭಿಪ್ರಾಯವನ್ನು ತಿಳಿಸದೆ ದೇವರ ಅಭಿಪ್ರಾಯವನ್ನು ಜ್ಞಾನ ರೂಪದೊಂದಿಗೆ ಹೇಳುತ್ತಿರುವುದರಿಂದ ಪ್ರತಿಯೊಬ್ಬರೂ ಒರೆಕಲ್ಲಿನ ಜ್ಞಾನವನ್ನು ಅನುಸರಿಸಬೇಕಾಗಿರುತ್ತದೆ. ಈಗ ಪ್ರಾರ್ಥನೆ ವಿಷಯದಲ್ಲಿ ಒರೆಕಲ್ಲನ್ನು ಉಪಯೋಗಿಸಿ ಸತ್ಯಾಸತ್ಯಗಳನ್ನು ತಿಳಿದುಕೊಳ್ಳೋಣ.

‘ಪ್ರಾರ್ಥನೆ’ ದೇವರ ವಿಷಯದಲ್ಲಿ ಬಹಳ ಮುಖ್ಯವಾದುದು. ಆದ್ದರಿಂದ ಪ್ರಾರ್ಥನೆ ಕುರಿತು ಗ್ರಂಥ ಮೊದಲಿನಲ್ಲಿಯೇ ಸ್ವಲ್ಪ ಹೇಳಿಕೊಂಡಿದ್ದೇವೆ. ‘ಮುಖ್ಯವಾದ ಅಭ್ಯರ್ಥನೆಯನ್ನು ಪ್ರಾರ್ಥನೆ’ ಎಂದು ಹೇಳುತ್ತೇವೆ. ದೇವರನ್ನು ಪ್ರಪಂಚ ವಿಷಯಗಳಲ್ಲಿ ಯಾವುದು ಕೇಳಬೇಕಾಗಿರುವ ಕೆಲಸವಿಲ್ಲ. ಅವೆಲ್ಲವೂ ಕರ್ಮವನ್ನನುಸರಿಸಿ ಇರುತ್ತವೆ. **ನಾವು ಕೇಳಬೇಕಾಗಿರುವುದು ಕರ್ಮಕ್ಕೆ ಸಂಬಂಧವಿಲ್ಲದ್ದು, ದೈವಿಕವಾದುದು. ತನ್ನನ್ನು ದೇವರ ಸಮೀಪಕ್ಕೆ ಸೇರಿಸಿಕೋ ಎಂದು ಕೇಳುವುದೇ ಎಲ್ಲದಕ್ಕಿಂತಲೂ ಮುಖ್ಯವಾದ ಅರ್ಥನೆ.** ಆದ್ದರಿಂದ ಮುಕ್ತಿಯನ್ನು ಕುರಿತು ಕೇಳುವುದೇ ಪ್ರಾರ್ಥನೆ ಎನ್ನುತ್ತೇವೆ. ಮೂರು ಮತಗಳಲ್ಲಿ ಮುಕ್ತಿಯನ್ನು ಕೇಳುವುದಕ್ಕಾಗಿಯೇ ಪ್ರಾರ್ಥನೆ ತಯಾರಿಮಾಡಲಾಗಿದೆ. ಆದರೇ ಅಜ್ಞಾನದಿಂದ ಪ್ರಾರ್ಥನೆ ದಾರಿತಪ್ಪಿ ಪ್ರಪಂಚ ವಿಷಯಗಳೊಳಗೆ ಹೋಗಿದೆ.

ಮುಸ್ಲಿಮ್ ಮತವು ಪ್ರಾರ್ಥನೆಯಲ್ಲಿ ಪ್ರತ್ಯೇಕವಾದುದೆಂದು, ಪ್ರಾರ್ಥನೆ ಆಚರಿಸುವುದರಲ್ಲಿ ಮುಸ್ಲಿಮ್‌ರೇ ಮೊದಲನೆಯವರೆಂದು, ಮುಸ್ಲಿಮ್‌ರ ನಂತರವೇ ಉಳಿದವರೆಂದು ಹೇಳಬಹುದೆಂದು ಹೇಳಿದ್ದೇವೆ. ಆದರೇ ಮುಸ್ಲಿಮ್‌ರು ಪ್ರಾರ್ಥನೆ ವಿಷಯದಲ್ಲಿ ಎಷ್ಟು ದೃಢ ವಿಶ್ವಾಸದಿಂದಿದ್ದಾರೋ ಅಷ್ಟು ಫಲಿತವನ್ನು ಪಡೆಯುತ್ತಿದ್ದಾರಾ? ಎಂದು ಲೆಕ್ಕಿಸಿ ನೋಡಿದ್ದೇವೆ.

ಫಲಿತದ ವಿಷಯದಲ್ಲಿ ಮೂರು ಮತಗಳನ್ನು ಕುರಿತು ಹೇಳಿಕೊಳ್ಳೋಣ. ಹಿಂದೂ ಮತದಲ್ಲಿ ಪ್ರಾರ್ಥನೆ ಇದೆ. ಎಲ್ಲರೂ ಮಾಡದಿದ್ದರೂ ಕೆಲವರಾದರೂ ದೈವಪ್ರಾರ್ಥನೆ ಮಾಡುತ್ತಿದ್ದಾರೆ. 'ದೇವರು' ಎಂಬ ವಿಷಯದಲ್ಲಿ ಸಾವಿರಜನರಲ್ಲಿ ಒಬ್ಬನಿಗು ಕೂಡಾ ನಿಜವಾದ ದೇವರು ಯಾರೆಂದು ತಿಳಿದಿಲ್ಲ. ಕೆಲವು ಸಾವಿರಜನರಲ್ಲಿ ಒಬ್ಬನಿಗೆ ದೇವತೆಗಳನ್ನು, ಮನುಷ್ಯರನ್ನು ಸೃಷ್ಠಿಸಿರುವವನು ದೇವರು ಪ್ರತ್ಯೇಕವಾಗಿ ಇದ್ದಾನೆಂದು ತಿಳಿದರೂ, ಅವನು ದೇವರನ್ನು ಪ್ರಾರ್ಥನೆ ಮಾಡಿದರೂ, ಆ ಪ್ರಾರ್ಥನೆ ಧ್ಯಾನವಾಗಿಯೋ, ತಪಸ್ಸಾಗಿಯೋ ಇರುತ್ತದೆ. ಇಂದಿನ ಕಾಲದಲ್ಲಿ 'ಮೆಡಿಟೇಷನ್' ಎಂದು ಹೊಸ ಹೆಸರು ಕೂಡಾ ಇಟ್ಟುಕೊಂಡಿದ್ದಾರೆ. ಹಿಂದೂಗಳಲ್ಲಿ ಸಾವಿರಜನರಿಗೆ ಒಬ್ಬನು ಅಪರೂಪವಾಗಿ ನಿಜವಾದ ದೇವರನ್ನು ಕುರಿತು ದೇವತೆಗಳನ್ನು ಬಿಟ್ಟು ದೇವರನ್ನೇ ಪ್ರಾರ್ಥನೆ ಮಾಡಿದರೂ ಆ ಪ್ರಾರ್ಥನೆ ಸರಿಯಾದುದೇನಾ? ಎಂದು ಪ್ರಶ್ನಿಸಿಕೊಂಡು ನೋಡಿದರೇ, ಅಂದರೇ ಒರೆಕಲ್ಲನ್ನು ಪ್ರಯೋಗಿಸಿ ನೋಡಿದರೇ ಪ್ರಾರ್ಥನೆ ವಿಷಯದಲ್ಲಿ ದೇವರು ಹೇಳಿರುವ ಪದ್ಧತಿಯನ್ನು ಮನುಷ್ಯರು ಸರಿಯಾಗಿ ಗ್ರಹಿಸಿಕೊಳ್ಳಲಿಲ್ಲವೆಂದು ತಿಳಿಯುತ್ತಿದೆ. ಒರೆಕಲ್ಲಿನಿಂದ ಗೀಚಿ ನೋಡಿದರೇ ದೇವರು ಹೇಳಿರುವ ಧರ್ಮವನ್ನು ಬಿಟ್ಟು ಅಧರ್ಮದ ಪ್ರಕಾರ ಪ್ರಾರ್ಥನೆಗಳು ಮಾಡುತ್ತಿದ್ದಾರೆಂದೂ, ಅಧರ್ಮ ಪ್ರಾರ್ಥನೆಗಳು ದೇವರಿಗೆ ಸಂಬಂಧ ಇಲ್ಲದಿರುವವೆಂದು ತಿಳಿಯುತ್ತಿದೆ.

ದೇವರ ಪ್ರಾರ್ಥನೆ ಎಂದರೆ ಮುಕ್ತಿಯನ್ನು ಉಂಟುಮಾಡುವುದು, ದೇವರ ಸನ್ನಿಧಿಗೆ ಸೇರಿಸುವುದು, ಜನ್ಮವಿಲ್ಲದೇ ಪರಲೋಕ ಪ್ರಾಪ್ತಿಯನ್ನು

ಉಂಟುಮಾಡುವುದೆಂದು ಅರ್ಥ. ಪರಲೋಕವೆಂದರೇ ದೇವರ ಸಾನ್ನಿಧ್ಯವೇ ಎಂದು ತಿಳಿಯಬೇಕು. ಮುಕ್ತಿ ಎಂದರೆ ಎರಡನೆಯ ಜನ್ಮ ಇಲ್ಲದೇ ದೇವರೊಳಗೆ ಐಕ್ಯವಾಗಿ ಹೋಗುವುದೆಂದು ಅರ್ಥ. **ಮುಕ್ತಿ, ಮೋಕ್ಷ, ದೇವರ ಸನ್ನಿಧಿ, ಪರಲೋಕ ಪ್ರಾಪ್ತಿ, ಜನ್ಮಗಳಿಲ್ಲದೇ ಹೋಗುವುದು** ಇವೆಲ್ಲವೂ ಒಂದೇ. ಅದನ್ನೇ **ಬಿಡುಗಡೆ, ಮುಕ್ತಿ, ವಿಮುಕ್ತಿ** ಎಂದು ಹೇಳುತ್ತಿದ್ದೇವೆ. ಕರ್ಮದಿಂದ ಹೊರಬೀಳುವುದೇ **'ಮುಕ್ತಿ'** ಎನ್ನುತ್ತಿದ್ದೇವೆ. ಕರ್ಮಬಂಧನಗಳಿಂದ ಜನ್ಮಗಳನ್ನು ಹೊಂದದೆ ದೇವರಲ್ಲಿ ಐಕ್ಯವಾಗಿ ಹೋಗುವುದನ್ನೇ ಮುಕ್ತಿ ಅಥವಾ ಮೋಕ್ಷ ಎಂದು ಹೇಳುತ್ತಿದ್ದೇವೆ. ಈ ಪದಗಳು ಹಿಂದೂಗಳಿಗೆ ಸ್ವಲ್ಪ ಪರಿಚಯವೇ ಆದರೂ ಮುಸ್ಲಿಮ್‌ರಿಗೆ ಪೂರ್ತಿ ಹೊಸದಾಗಿ ಇರುತ್ತವೆ. ಖುರಾನ್ ಗ್ರಂಥದಲ್ಲಿ **'ಪರಲೋಕ'** ವೆನ್ನುವ ಪದವನ್ನು ಉಪಯೋಗಿಸಿದ್ದರೂ ಪರಲೋಕವೆಂದರೇ ಅರ್ಥ ತಿಳಿದಿಲ್ಲ. ಅದನ್ನು ಒಂದು ಊರಿನಂತೆ ಕೆಲವರು ಹೋಲಿಸಿಕೊಂಡಿದ್ದಾರೆ. ಕೆಲವರು ಸ್ವರ್ಗವನ್ನು **'ಪರಲೋಕ'** ಎಂದು ಅಂದುಕೊಳ್ಳುವುದು ನಡೆದಿದೆ. ಒಟ್ಟಿನಲ್ಲಿ ಬಹಳ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆಂದು, ಖುರಾನ್ ಗ್ರಂಥದಲ್ಲಿನ ಪರಲೋಕವನ್ನು ಕುರಿತು ಸರಿಯಾಗಿ ಗ್ರಹಿಸಿಕೊಳ್ಳಲಾರದೆ ಹೋಗಿದ್ದಾರೆಂದು ಕೂಡಾ ಹೇಳಬಹುದು. ಅಷ್ಟೇಅಲ್ಲದೇ **'ನಮಾಜ್'** ಎಂಬ ಪದವನ್ನು ಕೂಡಾ ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ, ದೇವರು ಒಂದು ಹೇಳಿದ್ದರೇ ಮನುಷ್ಯ ಮತ್ತೊಂದು ಅರ್ಥ ಮಾಡಿಕೊಂಡಿದ್ದಾನೆಂದು ಹೇಳುತ್ತಿದ್ದೇವೆ. ಇದೆಲ್ಲವೂ ಇತರರನ್ನು ಹೀಯಾಳಿಸುವುದಕ್ಕೂ, ನಾನು ದೊಡ್ಡವನೆಂದು ಎನಿಸಿಕೊಳ್ಳುವುದಕ್ಕೋ ಹೇಳುತ್ತಿಲ್ಲ. ನನ್ನಹಾಗೆ ಜ್ಞಾನ ಮಾರ್ಗದಲ್ಲಿ ಮುಂದಕ್ಕೆ ಹೋಗಬೇಕೆಂಬ ಉದ್ದೇಶದಿಂದ ಹೇಳುತ್ತಿದ್ದೇವೆ. ಆದ್ದರಿಂದ ಯಾರೂ ತಪ್ಪಾಗಿ ಅರ್ಥ ಮಾಡಿಕೊಳ್ಳಬಾರದೆಂದು ಹೇಳುತ್ತಿದ್ದೇನೆ. ಮೊದಲಿಗೆ ಮೋಕ್ಷವನ್ನು ನಂಬುವ ಹಿಂದೂಗಳೇ ಹೇಗೆ ಪ್ರಾರ್ಥನೆ ವಿಷಯದಲ್ಲಿ ತಪ್ಪು ಮಾಡಿದ್ದಾರೋ ತಿಳಿದುಕೊಂಡರೇ, ಉಳಿದ ಮತಗಳ ವಿಷಯವು ಸುಲಭವಾಗಿ ಅರ್ಥ ವಾಗಬಲ್ಲದು. ಆದ್ದರಿಂದ ಇಲ್ಲಿ ಹೇಳಿರುವುದು ಎಲ್ಲರಿಗೂ ಆದ್ದರಿಂದ ಜಾಗ್ರತೆಯಾಗಿ ತಿಳಿಯಿರಿ. ದೇವರ ಮಾರ್ಗವನ್ನು ಸರಳ (ಸುಲಭ)

ಮಾಡುವುದಕ್ಕಾಗಿ ದೇವರು ಕೊಟ್ಟಿರುವ ಒರೆಕಲ್ಲನ್ನು ಉಪಯೋಗಿಸಿ ಯಾರಲ್ಲಿ ಎಷ್ಟು ಅಜ್ಞಾನವಿದೆಯೋ ಹೇಳುವುದು ತಪ್ಪಲಿಲ್ಲ.

ಕಲಿಯುಗ, ತ್ರೈತಾಯುಗ, ದ್ವಾಪರಯುಗ ಮೂರು ಯುಗಗಳಿಂದ ಭೂಮಿಮೇಲೆ ನಾಲ್ಕು ಅಧರ್ಮಗಳಿವೆ. ಅಧರ್ಮಗಳಿಗೆ ವಿರುದ್ಧವಾಗಿ ಮೂರು ಧರ್ಮಗಳು ಕೂಡಾ ಇವೆ. ಅಧರ್ಮಗಳು ಮಾಯೆಗೆ ಸಂಬಂಧಿಸಿರುವವು. ಧರ್ಮಗಳು ದೇವರಿಗೆ ಸಂಬಂಧಿಸಿರುವವು. ಧರ್ಮಗಳಿಂದ ದೇವರು ತಿಳಿಯಲ್ಪಡುತ್ತಾನೆ. ಅಧರ್ಮಗಳಿಂದ ಪ್ರಪಂಚ ಸಂಬಂಧವಾದ ವಿಷಯಗಳೇ ತಿಳಿಯಲ್ಪಡುತ್ತವೆ. ಮಾಯೆ ಪಕ್ಷದಲ್ಲಿ ಪ್ರಪಂಚ ಸಂಬಂಧ ವಿಷಯಗಳಿರುತ್ತವೆ. 17,28,000 ವರ್ಷಗಳು ಕೃತಯುಗವು ಕಳೆದು ಹೋಗಿದೆ. 12,96,000 ವರ್ಷಗಳು ತ್ರೈತಾಯುಗವು ಕಳೆದು ಹೋಗಿದೆ. 8,64,000 ವರ್ಷಗಳು ದ್ವಾಪರಯುಗ ಕಳೆದು ಹೋಗಿದೆ. ಈಗ ಕಲಿಯುಗವು ಸುಮಾರು 5160 ವರ್ಷಗಳ ಮೇಲೆ ನಡೆಯುತ್ತಿದೆ. ಒಟ್ಟಾರೆ ಇಲ್ಲಿಗೆ ಕಳೆದಿರುವುದು 38,93,160 ವರ್ಷಗಳೆಂದುಕೊಳ್ಳೋಣ. ಇದು ಒಂದು ಲೆಕ್ಕ ಮಾತ್ರವೇ! ಇಂತಹ ಯುಗಗಳು ಎಷ್ಟು ಕಳೆದಿವೆಯೋ ಅದು ದೇವರಿಗೇ ತಿಳಿಯಬೇಕು. ಇಂದಿನವರೆಗು ನಡೆದಿರುವ ಕಾಲದಲ್ಲಿ ನಾಲ್ಕು ಅಧರ್ಮಗಳು ಆಗಾಗ ವಿಜೃಂಭಿಸಿದಾಗ, ದೇವರಿಂದ ಪುನಃ ಮೂರು ಧರ್ಮಗಳು ಪ್ರತಿಷ್ಠಿಸಲ್ಪಡುತ್ತಿದ್ದವು. ಈಗ ಅದೇ ಕಾರ್ಯ ನಿಮಿತ್ತ ಅಧರ್ಮಗಳನ್ನು ಇಲ್ಲದೇ ಮಾಡಿ ಧರ್ಮಗಳನ್ನು ಪ್ರತಿಷ್ಠಿಸುವುದಕ್ಕೇ, ಮೂರು ದೈವ ಗ್ರಂಥಗಳು ಹೇಳಲ್ಪಟ್ಟಿವೆ. ಮೂರು ದೈವಗ್ರಂಥಗಳಲ್ಲಿ ಧರ್ಮಗಳನ್ನು ಆಚರಿಸಿರೆಂದು, ಅಧರ್ಮಗಳನ್ನು ನಿಷೇಧಿಸಿರೆಂದು ಹೇಳುವುದಾಗಿದೆ. ಮಾನವರ ಮನಸ್ಸಿನಲ್ಲಿ ಅಧರ್ಮಗಳು ಸುಲಭವಾಗಿ ವ್ಯಾಪಿಸಬಲ್ಲವು. ಮನಸ್ಸು ಪ್ರಕೃತಿಯಿಂದ ತಯಾರಾಗಿದೆ. ಆದ್ದರಿಂದ ಪ್ರಕೃತಿಯಿಂದ ತಯಾರಿಸಲ್ಪಟ್ಟ ಮಾಯೆ, ಪ್ರಕೃತಿಯಿಂದ ತಯಾರಾದ ಮನಸ್ಸಿನೊಳಗೆ ಸುಲಭವಾಗಿ ಹರಡಬಲ್ಲದು. ಆದ್ದರಿಂದ ಮನುಷ್ಯರಿಗೆ ಅಧರ್ಮಗಳು ಸುಲಭವಾಗಿ ಅರ್ಥವಾಗುತ್ತಿವೆ. ಅಧರ್ಮಗಳು ಅರ್ಥವಾದಂತೆ ಧರ್ಮಗಳು ಅರ್ಥವಾಗುತ್ತಿಲ್ಲ. ಮೊದಲಿನಿಂದ ಜ್ಞಾನ

ಹೊಂದಿರುವ ಹಿಂದೂಗಳು ಮೂರು ಯುಗಗಳಿಂದ ಇದ್ದಾರೆ. ಒಂದೇ ಹಿಂದೂ ಸಮಾಜವೇ ಮೂರು ಯುಗಗಳಿಂದ ಇದೆ. ಪ್ರಸ್ತುತ ಈಗ ಕಲಿಯುಗದಲ್ಲಿ ಎರಡುಸಾವಿರ ವರ್ಷಗಳಿಂದ 'ಮತ' ಎನ್ನುವುದು ಹುಟ್ಟಿ ಬಂದಿದೆ. ಮತ ಎನ್ನುವುದು ಒಂದು ಅಧರ್ಮವಾಗಿ ತಯಾರಾಗಿದೆ. ಅದಕ್ಕು ಮೊದಲು ನಾಲ್ಕು ಅಧರ್ಮಗಳಿರುವಾಗ, ಈಗ ಅವುಗಳ ಜೊತೆಗೆ ಮತವೆನ್ನುವ ಧರ್ಮವು ಹೊಸದಾಗಿ ಬಂದು ಸೇರಿದೆ. ಕಲಿಯುಗದಲ್ಲಿ ಐದು ಅಧರ್ಮಗಳು ಆಗಿವೆ. ಅಧರ್ಮಗಳ ಸಂಖ್ಯೆ ಬೆಳೆದಿದೆ. ಈಗ ಬಂದಿರುವುದಲ್ಲದೇ ಇದಕ್ಕು ಮೊದಲಿರುವ ನಾಲ್ಕು ಅಧರ್ಮಗಳನ್ನು ಹೇಳಿಕೊಂಡರೇ ಹೀಗಿವೆ. **1) ಯಜ್ಞಗಳು, 2) ದಾನಗಳು, 3) ವೇದಾಧ್ಯಯನಗಳು, 4) ತಪಸ್ಸುಗಳು** ಎನ್ನುವವು ಅಧರ್ಮಗಳಾಗಿ ಇದ್ದವು. ಈ ನಾಲ್ಕು ಅಧರ್ಮಗಳಿಂದ ದೇವರು ತಿಳಿಯುವುದಿಲ್ಲ ಎಂದು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯ ಮೂಲಕ ದೇವರು ಹೇಳಿರುವುದಾಗಿದೆ. ದೇವರು ತಿಳಿಯದ ನಾಲ್ಕು ಅಧರ್ಮಗಳನ್ನು ಬಿಟ್ಟು, ದೇವರೊಳಗೆ ಬೆರೆಯುವ ಯೋಗಗಳನ್ನು ಮೂರರನ್ನು ದೇವರು ಹೇಳಿರುವುದಾಗಿದೆ. ಆ ಮೂರು ಯೋಗಗಳನ್ನು **1) ಬ್ರಹ್ಮಯೋಗ, 2) ಕರ್ಮಯೋಗ, 3) ಭಕ್ತಿಯೋಗ** ಎಂದು ಹೇಳಿರುವುದಾಗಿದೆ. ದೇವರೊಂದಿಗೆ ವಿಯೋಗವಾಗಿರುವ ನಾವು **ಯೋಗ** ಪಡೆಯಬೇಕೆಂದು ದೇವರು ಹೇಳಿದ್ದಾನೆ.

'ಯೋಗ' ಎಂದರೇ ಸೇರುವಿಕೆ 'ದೇವರೊಂದಿಗೆ ಸೇರುವಿಕೆ' ಎಂದು ಅರ್ಥ. ಮನುಷ್ಯ ದೇವರಲ್ಲಿ ಬೆರೆತು ಇರುವುದನ್ನು 'ಮೋಕ್ಷ, ಯೋಗ' ಎಂದು ಹೇಳಬಹುದು. ದೇವರೊಂದಿಗೆ ಬೆರೆತು ಇರುವುದನ್ನು ಯೋಗ ಇಲ್ಲವೇ ಸೇರುವಿಕೆ ಎನ್ನುವಂತೆಯೇ ತೆಲುಗಿನಲ್ಲಿಯೇ ಅರ್ಥವಿರುವಹಾಗೆ **'ನಮಾಜ್'** ಎಂದುಹೇಳುತ್ತಿದ್ದೇವೆ. ನಮಾಜ್ ಎಂದರೇ ದೇವರೊಂದಿಗೆ ಬೆರೆತಿರುವುದೆಂದೇ ಅರ್ಥ.ಯೋಗವೆಂದರೇ ದೇವರೊಂದಿಗೆ ಯುಕ್ತವಾದಂತೆ, ನಮಾಜ್ ಎಂದರೇ ದೇವರೊಂದಿಗೆ ಸೇರುವಿಕೆ ಎಂದು ಅರ್ಥ. ಯೋಗ ಹೊಂದುವುದಕ್ಕೆ ಅಂದರೇ ದೇವರೊಳಗೆ ಐಕ್ಯವಾಗುವುದಕ್ಕೆ ಯೋಗವನ್ನೇ ಆಚರಿಸಬೇಕು. ಆದ್ದರಿಂದ

ಯೋಗವನ್ನು **'ಧರ್ಮ'** ಎಂದು ಹೇಳುತ್ತಿದ್ದೇವೆ. ಹಾಗೆಯೇ ದೇವರೊಳಗೆ ಸೇರುವುದನ್ನು **'ನಮಾಜ್'** ಎಂದು ಕೂಡಾ ಎನ್ನುತ್ತಾರೆ ಎಂದು ಹೇಳಿಕೊಂಡಿದ್ದೇವೆ. ಯೋಗಕ್ಕು, ನಮಾಜ್‌ಗು ಒಂದೇ ಅರ್ಥವಿದೆ. ಯೋಗ ಹೊಂದುವುದಕ್ಕೆ ಯೋಗವನ್ನು ಆಚರಿಸಿರೆಂದಂತೆ, ನಮಾಜ್ ಹೊಂದುವುದಕ್ಕೆ ನಮಾಜನ್ನೇ ಆಚರಿಸಬೇಕು. ಧರ್ಮವಾದ ಯೋಗವನ್ನು ಆಚರಿಸುವುದರಿಂದ ದೇವರೊಳಗೆ ಐಕ್ಯವನ್ನು ಹೊಂದಬಹುದು. ಹಾಗೆಯೇ ದೇವರ ಧರ್ಮವಾದ ನಮಾಜನ್ನು ಆಚರಿಸುವುದರಿಂದ ದೇವರಲ್ಲಿ ಬೆರೆತು ಹೋಗಬಹುದು. ಯೋಗವೆಂದರೇ ಕರ್ಮಗಳಿಂದ ಬಿಡುಗಡೆಯಾಗಿ ಮತ್ತೊಂದು ಜನ್ಮಕ್ಕೆ ಹೋಗದೆ ದೇವರೊಳಗೆ ಸೇರುವುದೆಂದು ಅರ್ಥ. ಹಾಗೆಯೇ ನಮಾಜ್ ಎಂದರೇ ಜನ್ಮಗಳನ್ನು ಪಡೆಯದೇ ದೇವರೊಳಗೆ ಸೇರಿಹೋಗುವುದೆಂದು ಆರ್ಥ. 'ನಮಾಜ್' ಎಂಬ ಪದವನ್ನು ಬಿಡಿಸಿ ನೋಡಿದರೇ ನ+ಮ+ಜ=ನಮಾಜ್ ಎಂದು ಹೇಳಬಹುದು.

ಇಲ್ಲಿ ನಮಾಜ್‌ನಲ್ಲಿನ ಮೂರು ಅಕ್ಷರಗಳಿಗೆ ಅರ್ಥವನ್ನು ಹೇಳಿಕೊಂಡರೇ **'ನ'** ಎಂದರೇ ಬೇಡ ಎಂದು ಅರ್ಥ. **'ಮ'** ಎಂದರೇ ನನಗೆ ಎಂದು ಅರ್ಥ. **'ಜ'** ಎಂದರೇ ಜನ್ಮಗಳು ಎಂದು ಅರ್ಥ. **"ನನಗೆ ಜನ್ಮಗಳು ಬೇಡ" ಎನ್ನುವ ಅರ್ಥವನ್ನು ತಿಳಿಸುವುದೇ ನಮಾಜ್**. ನಮಾಜ್ ಆದಿಯಿಂದ ಇರುವ ತೆಲುಗು ಪದವೇ ಎಂದು ಹೇಳಬಹುದು. ಮನುಷ್ಯ ದೇವರ ಜ್ಞಾನದ ಮೇಲೆ ಆಸಕ್ತನಾಗಿ ಜ್ಞಾನವನ್ನು ತಿಳಿದು, ಜ್ಞಾನದ ಪ್ರಕಾರ ಯೋಗವನ್ನು ಆಚರಿಸಿದರೇ, ಆತನಿಗೆ ಯೋಗ ಸಮಯದಲ್ಲಿ ಲಭಿಸುವ ಜ್ಞಾನಾಗ್ನಿಯಿಂದ ಅವನ ಕರ್ಮವೆಲ್ಲಾ ಸುಟ್ಟುಹೋಗಿ, ಅವನಿಗೆ ಕರ್ಮಗಳು ಇಲ್ಲದಿರುವುದರಿಂದ ಜನ್ಮಗಳಿಗೆ ಹೋಗದೆ ಮೋಕ್ಷವನ್ನು ಹೊಂದಿ ದೇವರಲ್ಲಿ ಐಕ್ಯವಾಗುತ್ತಾನೆ. ಎಂದಾದರೇ ಕರ್ಮಗಳು ಶೇಷವಿಲ್ಲದೇ ಸುಟ್ಟುಹೋಗುತ್ತಿವೆಯೋ, ಆಗ ಒಂದು ಕ್ಷಣವು ಕೂಡಾ ಆತನು ಶರೀರದಲ್ಲಿ ಇರದೆ ಮುಕ್ತಿ ಹೊಂದಿ ದೇವರಲ್ಲಿ ಸೇರಿಹೋಗುತ್ತಾನೆ. ಕರ್ಮಗಳು ಮುಗಿದು ಹೋದ ಕೂಡಲೇ ಜನ್ಮಗಳಿಗೆ

ಕಾರಣವಾದ ಕರ್ಮಗಳು ಇಲ್ಲದೆಹೋಗುವುದರಿಂದ, ಆತನು ಒಂದು ಸೆಕೆಂಡು ಕೂಡಾ ಆಲಸ್ಯವಿಲ್ಲದೇ ದೇವರಲ್ಲಿ ಸೇರಿಹೋಗುತ್ತಾನೆ. ಕರ್ಮ ಮುಗಿದು ಹೋಗದೆಯೇ ಒಂದು ಕ್ಷಣ ಮೊದಲಾಗಲೀ, ಕರ್ಮ ಮುಗಿದು ಹೋದ ನಂತರ ಒಂದುಕ್ಷಣ ಹಿಂದೆಯಾಗಲೀ ಇಲ್ಲದೇ ಮನುಷ್ಯ ಅಂದರೇ ಜೀವಿಯು ದೇವರಲ್ಲಿ ಸೇರಿಹೋಗುತ್ತಾನೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 7, ಆಯತ್ 34ರಲ್ಲಿ ಹೀಗೆ ಹೇಳಲ್ಪಟ್ಟಿದೆ ನೋಡಿರಿ. (7-34) **"ಪ್ರತಿ ಸಮಾಜಕ್ಕೆ ಒಂದು ಗಡುವು ನಿರ್ಣಯಿಸಲ್ಪಟ್ಟಿದೆ. ಅವರ ನಿರ್ಣಿತ ಗಡುವು ಬಂದಾಗ ಅವರು ಒಂದು ಕ್ಷಣವು ಕೂಡಾ ಹಿಂದಕ್ಕಾಗಲೀ, ಮುಂದಕ್ಕಾಗಲೀ ನಡೆಯುವುದು ಸಂಭವವಲ್ಲ"**. ಇಲ್ಲಿ ಈ ವಾಕ್ಯದಲ್ಲಿ 'ಪ್ರತಿ ಸಮಾಜಕ್ಕೆ' ಎಂದು ಇದೆ. ಅದರ ಅರ್ಥದ ಪ್ರಕಾರ **'ಪ್ರತಿ ವರ್ಗದ ಜೀವರಾಶಿಗಳಿಗೆ'** ಎಂದು ಅರ್ಥ. ಮುಕ್ತಿ ಇಲ್ಲವೇ ಬಿಡುಗಡೆ ಎನ್ನುವ ಗಡುವು ಇದೆ. ಯಾವಾಗ ಕರ್ಮ ಮುಗಿದು ಹೋಗುತ್ತದೋ ಅದೇ ಅವರಿಗೆ ನಿರ್ಣಯಿಸಲ್ಪಟ್ಟಿರುವ ಗಡುವು. ಅವರ ನಿರ್ಣಿತ ಗಡುವು ಬಂದಾಗ ಯಾವಾಗ ಕರ್ಮ ಮುಗಿದು ಹೋಗುತ್ತದೋ ಆಗ ಒಂದು ಕ್ಷಣ ಮೊದಲು, ಒಂದು ಕ್ಷಣ ಹಿಂದೆ ಇಲದಂತೆ ಮುಕ್ತಿ ಹೊಂದುತ್ತಾರೆಂದು ಹೇಳಿದ್ದಾರೆ.

ಹಿಂದೂಗಳು ಮುಕ್ತಿಗಾಗಿ ಅಂದರೇ ದೇವರಲ್ಲಿ ಐಕ್ಯವಾಗುವುದಕ್ಕೆ ಕೆಲವರು ಯೋಗವನ್ನು ಮಾಡುವವರು ಕೂಡಾ ಅಪರೂಪವಾಗಿ ಇದ್ದಾರೆ. ಅವರನ್ನು ಬಿಟ್ಟು ಉಳಿದವರನ್ನು ನೋಡಿದರೇ ಬಹಳಜನ ಮುಕ್ತಿ ಹೊಂದಬೇಕೆಂಬ ಉದ್ದೇಶವಿದ್ದರೂ, ಅವರು ದೇವರ ಪ್ರಾರ್ಥನೆಯನ್ನು ಯೋಗವಾಗಿ ಮಾಡುತ್ತಿಲ್ಲ. ಯೋಗವನ್ನು ಹೇಗೆ ಆಚರಿಸಬೇಕೋ ತಿಳಿಯದೆ ಅದಕ್ಕಾಗಿ ಸ್ವಲ್ಪಜನ ಗುರುಗಳನ್ನು, ಅಥವಾ ತಿಳಿದಿರುವ ಜ್ಞಾನಿಗಳನ್ನು ಆಶ್ರಯಿಸುತ್ತಿದ್ದಾರೆ. ಗುರುಗಳ ಬಳಿಗೆ ಹೋದರೇ ಅವರು ಗುರೂಪದೇಶವನ್ನು ಮಾಡುತ್ತಿದ್ದಾರೆ. ಗುರೂಪದೇಶ ಎನ್ನುವ ಬೋಧನೆಯಲ್ಲಿ ಯೋಗವನ್ನು ಕುರಿತು ಹೇಳದೆ ಯಾವುದೋ ಒಂದು ಮಂತ್ರವನ್ನೋ, ದೃಶ್ಯವನ್ನೋ ಉಪದೇಶವಾಗಿ

ಕೊಡುತ್ತಿದ್ದಾರೆ. ಅವರು ಕೊಟ್ಟಿರುವ ಕಿವಿಗಳಿಂದ ಕೇಳಿಸಿಕೊಂಡ ಮಂತ್ರವನ್ನಾಗಲೀ, ಕಣ್ಣಿನಿಂದ ನೋಡಿರುವ ದೃಶ್ಯವನ್ನಾಗಲೀ ಸ್ಮರಿಸುತ್ತಾ ಧ್ಯಾನ ಮಾಡುತ್ತಿದ್ದಾರೆ. ಹಾಗೆ ಇಂದ್ರಿಯ ವಿಷಯವಾದ ಮಂತ್ರವನ್ನೋ, ದೃಶ್ಯವನ್ನೋ ಧ್ಯಾನಿಸುವುದನ್ನು 'ತಪನೆ' ಎನ್ನುತ್ತಿದ್ದೇವೆ. ಅದನ್ನೇ **'ತಪಸ್ಸು'** ಎಂದು ಕೂಡಾ ಹೇಳಬಹುದು. ಪ್ರಪಂಚ ಸಂಬಂಧ ಇಂದ್ರಿಯ ಧ್ಯಾನಗಳನ್ನು ತಪಸ್ಸು ಎಂದು ಹೇಳಬಹುದು. ತಪಸ್ಸಿನಿಂದ ದೇವರು ಲಭ್ಯವಾಗುವುದಿಲ್ಲ. ತಪಸ್ಸಿನಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲ. ತಪಸ್ಸಿನಿಂದ ಸಾಧ್ಯವಾಗದ ದೇವರು ಯೋಗದಿಂದ ಸಾಧ್ಯವಾಗುವುದು. ಆದ್ದರಿಂದ ಒರೆಕಲ್ಲಾದ "ಭಗವದ್ಗೀತೆ ಗ್ರಂಥ' ದಲ್ಲಿ ಆತ್ಮ ಸಂಯಮ ಯೋಗದಲ್ಲಿ 46, 47ನೇ ಶ್ಲೋಕಗಳಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**ಶ್ಲೋ॥ ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ॥**

**ಭಾವಾರ್ಥ :– "ಯೋಗಿಯಾದವನು ತಪಸ್ವಿಗಳಿಗಿಂತಲೂ ಉತ್ತಮನು, ಜ್ಞಾನಿಗಳಿಗಿಂತಲೂ ಅಧಿಕನು, ಕೆಲಸಗಳನ್ನು ಮಾಡಿ ಕರ್ಮಗಳನ್ನು ಸಂಪಾದಿಸಿಕೊಳ್ಳುವವರಿಗಿಂತಲೂ ಅಧಿಕನು ಆದ್ದರಿಂದ ನೀನು ಯೋಗಿಯೇ ಆಗಬೇಕು."** ಎಂದು ಹೇಳಿದ್ದಾನೆ. ಇದನ್ನನುಸರಿಸಿ ನೋಡಿದರೆ ಎಲ್ಲ ವಿಧಗಳಲ್ಲಿ ಯೋಗಿ ಅಧಿಕನು ಎಂದು ತಿಳಿದಿರುವುದರಿಂದ ಯೋಗದಿಂದಲೇ ದೇವರು ಲಭ್ಯವಾಗುವನೆಂದು ಹೇಳುತ್ತಿದ್ದಾರೆ. ಈ ವಿಷಯವನ್ನು ಕೆಳಗೆ 47ನೇ ಶ್ಲೋಕದಲ್ಲಿ ನೋಡಿರಿ.

**ಶ್ಲೋ॥47. ಯೋಗಿನಾ ಮಪಿ ಸರ್ವೇಷಾಂ ಮದ್ಗತೇ ನಾನ್ತ ರಾತ್ಮನಾ।**
**ಶ್ರದ್ಧಾವಾನ್ ಭಜತೇ ಯೋಮಾಂ ಸಮೇಯುಕ್ತತಮೋ ಮತಃ॥**

**ಭಾವಾರ್ಥ :– "ಸರ್ವ ಯೋಗಿಗಳಲ್ಲಿ ಸಂಪೂರ್ಣವಾಗಿ ಅಂತರಾತ್ಮದಲ್ಲಿ ನನ್ನನ್ನೇ ಆಶ್ರಯಿಸಿ, ಶ್ರದ್ಧೆಯಿಂದ ಯಾರು ಪ್ರಾರ್ಥಿಸುತ್ತಿದ್ದಾನೋ ಆತನು ನನ್ನೊಂದಿಗೆ ಬೆರೆತಿದ್ದಾನೆಂದು ನಾನು ತಿಳಿಯುತ್ತಿದ್ದೇನೆ"** ಎಂದು ದೇವರೇ ಸ್ವತಃವಾಗಿ ಈ ಶ್ಲೋಕದಲ್ಲಿ ಹೇಳಿದ್ದಾನೆ. ಇಲ್ಲಿ ಹೇಳಿರುವ ಎರಡು ಶ್ಲೋಕಗಳಲ್ಲಿ ಯೋಗ

ಮಾಡುವುದರಿಂದ ದೇವರಲ್ಲಿ ಬೆರೆಯುವುದಕ್ಕೆ ಸಾಧ್ಯವಾಗುತ್ತದೆಂದು ಒರೆಕಲ್ಲಿನ ಮೂಲಕ ತಿಳಿಯುತ್ತಿದೆ. ಯೋಗವೆಂದರೇ ಸೂಚನೆಪ್ರಾಯವಾಗಿ ತಿಳಿದಿದೆ. ತಪಸ್ಸು ಎಂದರೇ ಹೇಳುವುದೇನೆಂದರೇ **ಶರೀರಕ್ಕಿರುವ ಇಂದ್ರಿಯ ಧ್ಯಾಸಗಳು ಹೊಂದಿರುವುದು ತಪಸ್ಸಾಗಿ** ಹೇಳಲ್ಪಡುತ್ತಿದೆ. ಗುರುಗಳು ಉಪದೇಶಿಸುವ ಮಂತ್ರಗಳಾಗಲೀ, ಜ್ಞಾನಿಗಳು ಹೇಳಿರುವ ಶ್ಲೋಕಗಳನ್ನಾಗಲೀ ಎರಡು ಕಿವಿಗಳ ಮೂಲಕ ಕೇಳಿರುವವಾಗುತ್ತವೆ. ಹಾಗೆಯೇ ಗ್ರಂಥದಲ್ಲಿ ಓದಿರುವ ವಾಕ್ಯಗಳಾಗಲೀ, ಶ್ಲೋಕಗಳನ್ನಾಗಲೀ ಎರಡು ಕಣ್ಣುಗಳ ಮೂಲಕ ನೋಡಿರುವವಾಗುತ್ತಿವೆ. ಈಗ ಅಸಲು ವಿಷಯಕ್ಕೆ ಬರೋಣ. ಹಿಂದೂಗಳು ಇಂದ್ರಿಯ ಸಂಬಂಧ ಗಳಾದವುಗಳನ್ನು ಅಂದರೇ ಕಣ್ಣಿನಿಂದ ನೋಡಿರುವುದಾಗಲೀ, ಕಿವಿಯಿಂದ ಕೇಳಿರುವುದಾಗಲೀ ಮನಸ್ಸಿನಲ್ಲಿಟ್ಟುಕೊಂಡು ದೇವರಿಗಾಗಿ ಧ್ಯಾನಿಸಿದರೂ ಅದು ತಪಸ್ಸಾಗುತ್ತದೆ ಹೊರತು ಯೋಗವಾಗುವುದಿಲ್ಲ. ಅದರ ಪ್ರಕಾರ ಹಿಂದೂಗಳು ಮಾಡುವ ಜಪಗಳೆಲ್ಲವು ತಪಸ್ಸುಗಳೇ ಆಗುತ್ತಿವೆ. ಹಾಗೆಯೇ ಕ್ರೈಸ್ತರು ಬಾಯಿಂದ ಹೇಳುವ ಪ್ರಾರ್ಥನೆಗಳೆಲ್ಲವೂ ತಪಸ್ಸುಗಳ ಕೆಳಗೇ ಜಮಕಟ್ಟಲಾಗುತ್ತಿವೆ. ಯೋಗಗಳೆನ್ನುವುದಕ್ಕೆ ಅವಕಾಶವಿಲ್ಲ. ಇನ್ನು ಮುಸ್ಲಿಮ್‌ರು ಮಾಡುವುದು ನಮಾಜ್ ಎಂದು ಹೆಸರಿದ್ದರೂ ಅದು ಪೂರ್ತಿ ನಮಾಜ್ ಅಲ್ಲವೆಂದು ಅವರ ಹಿರಿಯರೇ ಎಚ್ಚರಿಸಿ ಹೇಳಿದ್ದಾರೆ. ಅದು ತಪಸ್ಸಿನ ಕೆಳಗೇ ಬರುವುದೆಂದು ಅವರ ಭಾವನೆ.

ಹೊರಗಿನ ಪ್ರಪಂಚದಲ್ಲಿ ವಿಶ್ವಾಸ ಜನರೆಲ್ಲರಿಗಾಗಿ ನಿಯಮಿತ ಸಮಯಗಳಲ್ಲಿ ಪಾಟಿಸುವುದಕ್ಕೆ ವಿಧಿಯಾಗಿ ನಮಾಜ್ ನಿಯಮಿಸಲ್ಪಟ್ಟಿದೆ. ನಿಬದ್ಧತೆಯಿಂದ ಕೂಡಿಕೊಂಡಿರುವ ನಮಾಜ್ ಅಂದರೇ ಭಯಸ್ಥಿತಿಯಲ್ಲಿ ಮಾಡಲ್ಪಡುವ ನಮಾಜ್ ಒಂದು ವಿಧವಾಗಿ ಮೊಟಕು ಗೊಳಿಸಿದ ನಮಾಜ್ ಆಗುತ್ತದೆ. ಆದ್ದರಿಂದ ಈ ಲೋಪವನ್ನು ಭರ್ತೀ ಮಾಡುವುದಕ್ಕೆ ನಿಂತುಕೊಂಡು, ಕುಳಿತುಕೊಂಡು, ಇನ್ನೂ ಮಲಗಿಕೊಂಡು ಇರುವಾಗ ಸಹಿತ ಅಲ್ಲಾಹ್‌ನನ್ನು ಸ್ಮರಿಸುತ್ತಾ ಇರಬೇಕೆಂದು ಇಲ್ಲಿ ಪ್ರಬೋಧಿಸುವುದು ನಡೆದಿದೆ. ಇದನ್ನು ಕುರಿತು

ಸೂರಾ 4 ಆಯತ್ 103ರಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ. (4-103) **"ಇನ್ನು ನಮಾಜನ್ನು ಪೂರ್ತಿ ಮಾಡಿದ ನಂತರ ನಿಂತಿದ್ದರೂ, ಕುಳಿತುಕೊಂಡರೂ, ನಿದ್ರಿಸಿದ್ದರೂ, ಅಲ್ಲಾಹ್‌ನನ್ನು ಸ್ಮರಿಸುತ್ತಾ ಇರಿ. ಶಾಂತಿ ಭದ್ರತೆಗಳು ನೆಲೆಗೊಂಡ ನಂತರ ನಮಾಜನ್ನು ಸ್ಥಾಪಿಸಿರಿ. ನಿಶ್ಚಯವಾಗಿ ನಮಾಜ್ ವಿಶ್ವಾಸಿಗಳಿಗೆ ನಿಯಮಿತ ಸಮಯಗಳಲ್ಲಿ ಪಾಲಿಸುವುದಕ್ಕೆ ವಿಧಿಯಾಗಿ ನಿರ್ಣಯಿಸಲ್ಪಟ್ಟಿದೆ."** ಈ ಆಯತ್‌ನಲ್ಲಿ "ನಮಾಜ್ ಆದ ನಂತರ ಎಲ್ಲಿದ್ದರೂ ಹೇಗಿದ್ದರೂ ಮಲಗಿದ್ದರೂ, ನಿಂತಿದ್ದರೂ, ಕುಳಿತಿದ್ದರೂ ದೇವರನ್ನೇ ಸ್ಮರಿಸಿಕೊಳ್ಳುತ್ತಾ ಇರಿ" ಎಂದು ಹೇಳಿದ್ದಾರೆ. ಹಾಗೆ ಏಕೆ ಹೇಳಿದ್ದಾರೆ? ಅಂದರೇ ಸಾಮೂಹಿಕವಾಗಿ, ಸಮಯ ನಿಯಮವಾಗಿ ಮಾಡಿರುವ ನಮಾಜ್ ಸ್ವತಂತ್ರವಾಗಿ ಮಾಡಿರುವುದಲ್ಲವೆಂದು ಸಮಯಕ್ಕೋ, ಸಮಾಜಕ್ಕೋ ಕಟ್ಟಿಹಾಕಲ್ಪಟ್ಟಿರುವ ನಮಾಜ್ ಎಂದು ಕೆಲವರು ಮುಸ್ಲಿಮ್ ಹಿರಿಯರೇ ಹೇಳುತ್ತಿದ್ದಾರೆ. ಈ ಆಯತ್‌ಗೆ ಹಿರಿಯರು ಕೆಳಗೆ ಬರೆದಿರುವ ವಿವರದಲ್ಲಿ ಹಾಗೆಯೇ ಹೇಳಿದ್ದಾರೆ. ಮತ್ತೊಂದು ಕಡೆ ಮೊದಲಿಗೇ ಫಾತಿಹಾ ಸೂರಾಗಳಿಗೆ ಮುಸ್ಲಿಮ್ ಪಂಡಿತರು ಅವರು ಉದ್ದೇಶಗಳನ್ನು ಹೇಳುತ್ತಾ ಹೀಗೆ ಹೇಳಿದ್ದಾರೆ.

**ತೌಹೀದ್ ಉಲೂ ಹೀಯತ್** ಎಂದರೇ ಭಾವಾರ್ಥ ಹೀಗಿದೆ. ಎಲ್ಲ ವಿಧಗಳ ಆರಾಧನೆಗಳಿಗೆ (ಇಬಾದತ್‌ಗಳಿಗೆ) ದಾಸ್ಯಗಳಿಗೆ, ಬೇಡಿಕೊಳ್ಳುವವರಿಗೆ ಅರ್ಹನು ಅಲ್ಲಾಹ್ ಮಾತ್ರವೇ (ದೇವರು ಒಬ್ಬನೇ ಅರ್ಹನು). ಯಾರಾದರೂ ಒಂದು ಪ್ರತ್ಯೇಕವಾದ ವ್ಯಕ್ತಿ ಮೆಚ್ಚಿಗೆಗಾಗಿ ಅಥವಾ ದೇವರನ್ನು ಆರಾಧಿಸದಿದ್ದರೇ ಆತನ ಕೋಪಕ್ಕೆ ಗುರಿ ಆಗುತ್ತೇನೇನೋ ಎನ್ನುವ ಭಯದಿಂದ ಮಾಡುವ ಪ್ರತಿ ಕೆಲಸ ಆರಾಧನೆಯಾಗಿಯೇ ಭಾವಿಸಲ್ಪಟ್ಟರೂ, ಮೇಲ್ನೋಟಕ್ಕೆ ಎಲ್ಲರೂ ಅದನ್ನು ಆರಾಧನೆ ಎಂದುಕೊಂಡರೂ, ಅದು ದೇವರ ದೃಷ್ಠಿಯಲ್ಲಿ ಆರಾಧನೆಯಲ್ಲ. ಆದ್ದರಿಂದ ಮನುಷ್ಯರು ಮಾಡುವ ನಮಾಜ್, ರೋಜಾ, ಹಜ್, ಜಕಾತ್ ನಂತಹ ಕ್ರಿಯೆಗಳು ಮಾತ್ರವೇ ಆರಾಧನೆಗಳಲ್ಲ. ಒಂದಾನೊಂದು ಪ್ರತ್ಯೇಕ ಅಸ್ತಿತ್ವದ (ನಿರಾಕಾರ ದೈವತ್ವ) ಎದುರು ಅಭ್ಯರ್ಥಿಸಿಕೊಳ್ಳುವುದೇ ನಿಜವಾದ

ಅಭ್ಯರ್ಥನ. ಅದನ್ನೇ ಅರ್ಥನ ಮತ್ತು ಪ್ರಾರ್ಥನೆ ಎನ್ನುತ್ತಾರೆ. ಅಸ್ತಿತ್ವದ ಎದುರು ಯಾವ ನಿಯಮ ನಿಬಂಧನೆ ಇಲ್ಲದೇ, ಸಮಯಪಾಲನೆ ಇಲ್ಲದೇ ಮಾಡುವುದು ನಿಜವಾದ ಆರಾಧನೆ ಆಗುತ್ತದೆ. ಸಮಯ ನಿಯಮದಿಂದ ಮಾಡುವ ಆರಾಧನೆ ಕಾಲದಲ್ಲಿ ಮೊಟಕು ಗೊಳಿಸಿದ ಆರಾಧನೆ, ನಿಯಮಕ್ಕೆ ಕಟ್ಟಿಹಾಕಲ್ಪಟ್ಟ ಆರಾಧನೆ ಯೆಂದು ಹೇಳಬಹುದು. ಅಂತಹುಗಲು ಆರಾಧನೆಗಳಾಗಿ ಹೇಳಿಕೊಂಡರೂ, ಆರಾಧನೆಗಳಾಗಿ ಕಾಣಿಸುತ್ತಿದ್ದರೂ, ವಾಸ್ತವವಾಗಿ ಆರಾಧನೆಗಳಲ್ಲವೆಂದೇ ಹೇಳಬೇಕು.

ಅಂತಹ ಆರಾಧನೆಗಳು ತಪನೆಗೆ ಜಮಕಟ್ಟಲ್ಪಡುವುದರಿಂದ ಅವು ತಪಸ್ಸುಗಳಾಗಿ ಪರಿಗಣಿಸಲ್ಪಡುತ್ತವೆ. ದೇವರನ್ನು ಕುರಿತು ತಪಸ್ಸು ಮಾಡುವುದು, ತಪನೆ ಪಡುವುದು ಒಳ್ಳೆಯದೆಂದು ಅಂದುಕೊಳ್ಳುವುದಕ್ಕೆ ಅವಕಾಶವಿಲ್ಲ. ಒಂದುಮಾತಿನಿಂದಲೋ, ಹಾಡಿನಿಂದಲೋ, ಮಂತ್ರದಿಂದಲೋ ಕಟ್ಟಿ ಹಾಕಲ್ಪಟ್ಟಿರುವುದನ್ನು ಉಚ್ಚರಿಸಿದರೂ ಅದು ತಪನೆಯಾಗುವುದು. ಮುಸ್ಲಿಮ್‌ರ ಪ್ರಾರ್ಥನೆಯಲ್ಲಿ ಸಮಯ ಮುಖ್ಯ. ಇಂತಹ ಸಮಯದಲ್ಲಿ ನಮಾಜ್ (ಪ್ರಾರ್ಥನೆ) ಮಾಡಬೇಕೆಂಬ ನಿಯಮವನ್ನು ಹೊಂದಿರುತ್ತಾರೆ. ಹಾಗೆ ನಿಯಮದಿಂದ ಕೂಡಿಕೊಂಡಿರುವ ನಮಾಜ್ ಕಟ್ಟಿಹಾಕಲ್ಪಟ್ಟಿರುವ ನಮಾಜ್ ಎಂದೂ, ಮೊಟಕು ಗೊಳಿಸಿದ ನಮಾಜ್ ಎಂದೂ ಕೆಲವರು ಮುಸ್ಲಿಮ್ ಹಿರಿಯರು ಹೇಳುತ್ತಿದ್ದಾರೆ. ಅದಕ್ಕೆ ಪರಿಹಾರವಾಗಿ **"ತೌಹೀದ್ ಉಲೂಹಿಯತ್"** ಅನ್ನು ಹೇಳಿದ್ದಾರೆ. ಅದರ ಪ್ರಕಾರ ನಮಾಜ್, ಜಕಾತ್, ರೋಜಾ, ಹಜ್‌ನಂತಹ ಕ್ರಿಯೆಗಳು ಮಾತ್ರವೇ ಆರಾಧನೆಗಳಲ್ಲ ಎಂದು ಹೇಳಿದ್ದಾರೆ. **"ನಿಜವಾದ ಆರಾಧನೆ ಒಂದಾನೊಂದು ಅಸ್ತಿತ್ವದ ಎದುರು ಅರ್ಥಿಸುವುದು"** ಎಂದು ಮುಸ್ಲಿಮ್ ಹಿರಿಯರೇ ಹೇಳಿದಂತೆ ಖುರಾನ್ ಗ್ರಂಥದಲ್ಲಿ 'ಅಲ್ ಫಾತಿಹಾ' ಸುರಾವನ್ನು ಕುರಿತು ಬರೆದಿರುವವರೇ ಹೇಳಿದ್ದಾರೆ. ನಮ್ಮನ್ನು ಕೇಳಿದರೇ 'ನಮಾಜ್' ಎನ್ನುವ ಪದವೊಂದರ ಅರ್ಥದಲ್ಲಿ 'ನನಗೆ ಜನ್ಮಗಳಿಲ್ಲದೇ ಹೋಗುವುದೆಂದು' ಅರ್ಥ. ದೇವರನ್ನು ಆ ವಿಧವಾಗಿ ಕೋರಿಕೊಳ್ಳುವುದೇ ನಮಾಜ್‌ನಲ್ಲಿನ ನಿಜವಾದ

ಅರ್ಥ. ಹಾಗೆ ಕೋರಬೇಕೆಂದರೇ ಪ್ರಾರ್ಥನಾ ಮಂದಿರಗಳಲ್ಲಿ ಸಮಯ ಪಾಲನೆಯಲ್ಲಿ ಮಾಡುವ ನಿಯಮ ನಮಾಜ್ ಎಲ್ಲರೊಂದಿಗೆ ಬೆರೆತು ಮಾಡಿದ ನಂತರ ಎಲ್ಲಿದ್ದರೂ, ಹೇಗಿದ್ದರೂ ದೇವರನ್ನು ನಮಾಜ್ ಅರ್ಥದಿಂದ ಕೂಡಿಕೊಂಡಿರುವ ಭಾವನೆಯನ್ನು ವ್ಯಕ್ತಪಡಿಸುತ್ತ ದೇವರನ್ನು ಸ್ಮರಿಸಿಕೊಳ್ಳಬೇಕೆಂದು ಹೇಳಿದ್ದೇವೆ. ಹಾಗೆ ಮಾಡಿರೆಂದು ಅದೇ ನಿಜವಾದ ಆರಾಧನೆಯಾಗುತ್ತದೆಂದು 4ನೇ ಸೂರಾ 103ನೇ ಆಯತ್‌ನಲ್ಲಿ ಕೂಡಾ ಹೇಳಿದ್ದಾರೆ.

ಸಮಾಜಕ್ಕಾಗಿ, ವಿಶ್ವಾಸಿಗಳಿಗಾಗಿ ಸಮಯ ಪಾಲನೆಯಿಂದ ಕೂಡಿರುವ ನಮಾಜ್‌ಗಳು ಮಾಡಿರೆಂದು ಅದರಲ್ಲಿ ತಪ್ಪಿಲ್ಲವೆಂದು ನಾವು ಕೂಡಾ ಹೇಳುತ್ತಿದ್ದೇವೆ. ಹಾಗೆ ಮಾಡುವುದರಿಂದ ಇತರರಲ್ಲಿ ಕೂಡಾ ದೇವರಮೇಲೆ ವಿಶ್ವಾಸವನ್ನು ಬೆಳೆಸಿದಂತಾಗುವುದು. ಆ ವಿಧವಾದ ಸಾಮೂಹಿಕ ನಮಾಜ್ ಮಾಡಿದ ನಂತರ **"ಏಕಾಂತ ನಮಾಜ್"** ಮಾಡಬೇಕು. ಅದೇ ನಿಜವಾದ ನಮಾಜ್ ಆಗುವುದರಿಂದ ಮಸೀದಿಯಲ್ಲಿ ನಿಮ್ಮ ಪ್ರಾರ್ಥನೆಯಾದ ನಂತರ ಇಮಾಂರವರು ಓದುತ್ತಿರುವ ವಚನಗಳು ಕೇಳುತ್ತಿರುವಂತೆ ನಟಿಸುತ್ತಾ, ನೀವು ನಿಮ್ಮ ಮನಸ್ಸಿನಲ್ಲಿ ಅಂತರಂಗ ರಹಸ್ಯದಲ್ಲಿರುವ ದೇವರನ್ನು (ಆತ್ಮನನ್ನು) ಪ್ರಾರ್ಥನೆ ಮಾಡಿರೆಂದು ಕೆಲವರು ಮುಸ್ಲಿಮ್ ಹಿರಿಯರು ಹೇಳಿರುವ ಮಾತುಗಳನ್ನು ಕೇಳಬೇಕಾಗಿದೆ. ಅಷ್ಟೇಅಲ್ಲದೇ ಸೂರಾ 4, ಆಯತ್ 103ರಲ್ಲಿ **"ಮಸೀದಿಯಲ್ಲಿ ನಮಾಜ್ ಆದನಂತರ ನಿಂತಿದ್ದರೂ, ಕುಳಿತಿದ್ದರೂ, ಮಲಗಿದ್ದರೂ ದೇವರನ್ನೇ ಸ್ಮರಿಸಿರಿ"** ಎಂದು ಹೇಳುವುದರಿಂದ ಅಲ್ಲಾಹ್ ನಮಾಜ್ ನಂತರ ಏಕಾಂತವಾಗಿ ಅಂತರಂಗದಲ್ಲಿ ಮಾಡುವ ಪ್ರಾರ್ಥನೆಯೇ ದೊಡ್ಡದೆಂದು ತನ್ನ ಆಯತ್‌ನಲ್ಲಿ ಹೇಳಿದಂತಾಗಿದೆ. ಆದ್ದರಿಂದ ಇತ್ತ ಹಿರಿಯರ ಮಾತಿನ, (4–103) ಪ್ರಕಾರ ಅತ್ತ ಅಲ್ಲಾಹ್ (ದೇವರ) ಮಾತುಗಳನ್ನು ಆಲಿಸಿದರೇ, ಮುಸ್ಲಿಮ್‌ರೆಲ್ಲರೂ ಯಾವುದಾದರೇ ನಮಾಜ್ ಎಂದು ಮಾಡುತ್ತಿದ್ದಾರೋ ಅದು ನಿಜವಾದ ಪ್ರಾರ್ಥನೆ ಅಲ್ಲವೆಂದು, ಅದು ಹೆಸರಿಗೆ ಮಾತ್ರವೇ ಪ್ರಾರ್ಥನೆ ಎಂದು ಅದರಿಂದ ಫಲಿತವಿರುವುದಿಲ್ಲವೆಂದು, ಹಿರಿಯರು ಹೇಳಿರುವ (ತೌಹೀದ್

ಉಲೂ ಹೀಯತ್) ವಾಕ್ಯದ ಪ್ರಕಾರ ಮತ್ತು (4–103) ಆಯತ್ ಪ್ರಕಾರ ತಿಳಿಯುತ್ತಿದೆ.

**ಪ್ರಶ್ನೆ :– ಪ್ರಾರ್ಥನಾ ಮಂದಿರಗಳಲ್ಲಿ ಮಾಡುವ ಪ್ರಾರ್ಥನೆ ಹೆಸರಿಗೆ ಮಾತ್ರವೇ ಪ್ರಾರ್ಥನೆ ಆದರೇ, ನೀವು ಹೇಳಿರುವುದೇ ನಿಜವಾದ ಪ್ರಾರ್ಥನೆ ಆದರೇ ಇಲ್ಲಿಯವರೆಗು ಆ ವಿಷಯವನ್ನು ಖುರಾನ್ ಗ್ರಂಥದಲ್ಲಿ ದೇವರು ಒಂದು ಆಯತ್‌ನಲ್ಲಿ ಹೊರತು ಉಳಿದ ಆಯತ್‌ಗಳಲ್ಲಿ ಎಲ್ಲೂ ಹೇಳಲಿಲ್ಲವೇ! (4–103)ರಲ್ಲಿ ಒಂದುಕಡೆ ಹೇಳಿರುವುದರಿಂದ ಅದು ನಮಗೆ ಸರಿಯಾಗಿ ಅರ್ಥವಾಗಲಿಲ್ಲ. ಉಳಿದಕಡೆಗಳಲ್ಲಿ ಎಲ್ಲಾದರೂ ಹೇಳಿದ್ದಾನಾ?**

**ಉತ್ತರ :–** ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಮುತಷಾಬಿಹಾತ್ (ಸೂಕ್ಷ್ಮವಾದ) ಜ್ಞಾನ ವಾಕ್ಯಗಳು ಬಹಳ ಇವೆ. ಮುಸ್ಲಿಮ್‌ರು ಬಹಳಜನ ಸೂಕ್ಷ್ಮ ವಿಷಯಗಳನ್ನು ಕೂಡಾ ಸ್ಥೂಲ ವಿಷಯಗಳಾಗಿ ಹೇಳಿಕೊಳ್ಳುವುದರಿಂದ ದೇವರು ಹೇಳಿರುವ ಭಾವನೆಗಳು ತಿಳಿಯದೇ ಹೋಗಿವೆ. ಸೂಕ್ಷ್ಮ ವಿಷಯಗಳು ದೇವರಿಗೇ ತಿಳಿದಿವೆಯೆಂದು, ಮನುಷ್ಯರಾಗಿ ಇರುವವರು ಸೂಕ್ಷ್ಮ ವಿಷಯಗಳನ್ನು ಹೇಳಲಾರರೆಂದು ಜ್ಞಾನಿಗಳಾದ ಮನುಷ್ಯರು ಹೇಳಿರುವ ಅವರ ಮಾತುಗಳನ್ನು ಕೂಡಾ ಕೇಳದಿರುವುದರಿಂದ ಬಹಳ ವಿಷಯಗಳು ಮುಸ್ಲಿಮ್‌ರಿಗೆ ತಿಳಿಯದೇ ಹೋಗಿವೆ. **ಖುರಾನ್ ಗ್ರಂಥದಲ್ಲಿ ಸೂಕ್ಷ್ಮವಾದ ವಾಕ್ಯಗಳಿವೆಯೆಂದು ಅಲ್ಲಾಹ್‌ಯೇ ಸೂರಾ 3, ಆಯತ್ 7ರಲ್ಲಿ ಹೇಳಿರುವುದಾಗಿದೆ.** ಮುಸ್ಲಿಮ್‌ರಿಗೆ ಕೂಡಾ ತಮ್ಮ ಗ್ರಂಥದಲ್ಲಿ ಸೂಕ್ಷ್ಮವಾದ ವಾಕ್ಯಗಳು ಮನುಷ್ಯರಿಗೆ ಅರ್ಥವಾಗದ ವಾಕ್ಯಗಳು ಇವೆಯೆಂದು ತಿಳಿದಿದೆ. ತಿಳಿದು ಕೂಡಾ ಅವು ಯಾವುವೆಂದಾಗಲೀ, ಅವುಗಳ ವಿವರ ಏನೆಂದಾಗಲೀ ಯಾರಾದರೂ ಜ್ಞಾನಿಗಳಿಂದ ತಿಳಿದುಕೊಳ್ಳೋಣ ವೆಂದಾಗಲೀ ಅಂದುಕೊಳ್ಳುತ್ತಿಲ್ಲ. ಆ ವಿಷಯಗಳು ದೇವರಿಗೆ ಒಬ್ಬನಿಗೇ ತಿಳಿದಿದೆ ಮನುಷ್ಯರಿಗೆ ತಿಳಿಯದೆಂದು ಹೇಳುತ್ತಿರುತ್ತಾರೆ. ದೇವರು ಮನುಷ್ಯರ ರೂಪದಲ್ಲಿಯೇ ತಿಳಿಸುವನೆಂದು ಅವರಿಗೆ ತಿಳಿದಿಲ್ಲ. ಆ ಮಾತನ್ನು ಅವರು ನಂಬೋಲ್ಲಾಂದ್ರೆ ನಂಬುವುದಿಲ್ಲ. ಅವರು ನಂಬಿದರೂ ನಂಬದಿದ್ದರೂ, ದೇವರು

ಅನೇಕ ಸಂಶಯಗಳಿಗೆ ಮನುಷ್ಯರಿಂದಲೇ ಉತ್ತರ ಕೊಡುತ್ತಿರುತ್ತಾನೆ. ದೇವರು ಮನುಷ್ಯರ ಹೃದಯಗಳಿಂದ ಕೊಡುವ ಉತ್ತರಗಳ ಮೂಲಕ ನಾನು ಎಷ್ಟೋ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಮುಸ್ಲಿಮ್‌ರು ನಂಬಿದರೂ ನಂಬದೆ ಹೋದರೂ, ನಾನು ಮಾತ್ರ ಸರಿಯಾದ ಸಮಾಧಾನವನ್ನು ತಿಳಿಸುವೆನು.

**ಪ್ರಶ್ನೆ :– ದೇವರ ಜ್ಞಾನ ದೇವರಿಗೆ ಹೊರತು ಮನುಷ್ಯರಿಗೆ ತಿಳಿಯದೆಂದು ಖುರಾನ್ ಗ್ರಂಥದಲ್ಲಿ ಸೂರಾ 3, ಆಯತ್ 7ರಲ್ಲಿ ಬರೆದಿದ್ದಾರೆ ಅಲ್ಲವೇ! ಹಾಗಿರುವಾಗ ನಿನಗೆ ಹೇಗೆ ತಿಳಿದಿದೆ?**

**ಉತ್ತರ :–** ನಿಮ್ಮ ಪ್ರಶ್ನೆಗೆ ಉತ್ತರವಾಗಿ ಸೂರಾ 2, ಆಯತ್ 186ರಿಂದ ನೋಡಬಹುದು. (2-186) **"ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೇ ನಾನು ಅವರಿಗೆ ಅತಿ ಸಮೀಪದಲ್ಲಿ ಇದ್ದೇನೆಂದು ಹೇಳು. ಕರೆಯುವವನು ನನ್ನನ್ನು ಕರೆದಾಗ ನಾನು ಆತನ ಕರೆಯನ್ನು ಆಲಿಸಿ ಉತ್ತರ ಕೊಡುತ್ತೇನೆ. ಆದ್ದರಿಂದ ಅವರು ಸರಿಯಾದ ಮಾರ್ಗ ಹೊಂದುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇಕು. ಮತ್ತು ನನ್ನಲ್ಲಿ ವಿಶ್ವಾಸ ಹೊಂದಿರಬೇಕು"** ಎಂದು ಹೇಳು. ಈ ವಾಕ್ಯವನ್ನು ನೋಡಿದರೇ "ನನ್ನನ್ನು ಕೇಳುವವರು ಪ್ರತ್ಯೇಕವಾಗಿದ್ದಾರೆ. ಅವರು ಕೇಳಿದಾಗಲೆಲ್ಲಾ ಅವರ ಮಾತುಗಳನ್ನು ಕೇಳಿ ಅವರಿಗೆ ಉತ್ತರ ನೀಡುತ್ತೇನೆ" ಎಂದು ಹೇಳಿದ್ದಾನೆ. ನಾನು ಹೇಳಿರುವ ಮಾತನ್ನು ಈತನು ಆಲಿಸಿ ಅವನು ಸರಿಯಾದ ಮಾರ್ಗವನ್ನು ಹೊಂದಬಹುದೆಂದು ದೇವರೇ ಹೇಳಿದ್ದಾನೆ. ಹಾಗಿರುವಾಗ ವಿವರ ತಿಳಿಯದ ಸೂಕ್ಷ್ಮ ವಾಕ್ಯಗಳಿಗೆ ಅರ್ಥವನ್ನು ಇತರರಿಂದ ಯಾಕೆ ತಿಳಿಯಬಾರದು? ದೇವರು 'ನಾನು ಉತ್ತರ ಕೊಡುತ್ತೇನೆ' ಎಂದು ಹೇಳಿದಾಗ ಕೂಡಾ ಕೇಳದಿರುವವನಿಗೆ ಎಂದಿಗೂ ಏನೂ ತಿಳಿಯುವುದಿಲ್ಲ. ಆದ್ದರಿಂದ ತಿಳಿದಿರುವ ಜ್ಞಾನಿಗಳು ದೇವರನ್ನು ಕೇಳಿ ತಿಳಿದುಕೊಂಡಿರುವ ಜ್ಞಾನಿಗಳಿಂದ ಕೆಲವು ಸೂಕ್ಷ್ಮ ವಿಷಯಗಳನ್ನು ತಿಳಿದುಕೊಳ್ಳುತ್ತೀರಿ.

ಸೂರಾ 2 ಆಯತ್ 3ರಲ್ಲಿ ಹೀಗಿದೆ ನೋಡಿರಿ. (2-3) **"ಯಾರಾದರೇ ಅಗೋಚರ ಯಥಾರ್ಥ ವಿಷಯವನ್ನು ವಿಶ್ವಾಶಿಸುತ್ತಾರೋ, ನಮಾಜನ್ನು**

**ಸ್ಥಾಪಿಸುತ್ತಾರೋ, ಮತ್ತು ನಾವು ಪ್ರಸಾದಿಸಿದ ಜೀವನೋಪಾದಿಯಿಂದ ನಮ್ಮ ಮಾರ್ಗದಲ್ಲಿ ಖರ್ಚು ಮಾಡುತ್ತಾರೋ"** ಈ ವಚನದಲ್ಲಿ ಸೂಕ್ಷ್ಮ ವಿಷಯಗಳನ್ನು ಇತರರು ಹೇಳಿದರೂ ಕೇಳುವುದಿಲ್ಲವೆಂದು ಹೇಳುವುದು ಮುಸ್ಲಿಮ್‌ರಲ್ಲಿ ಸಾಧಾರಣ ವಿಷಯವಾಗಿ ಹೋಗಿದೆ. ಹೀಗಲ್ಲದೇ "ಯಾರಾದರೇ ಅಗೋಚರ ಯಥಾರ್ಥ ವಿಷಯವನ್ನು ವಿಶ್ವಾಸಿಸುತ್ತಾರೋ" ಎಂದು ಈ ವಾಕ್ಯದಲ್ಲಿ ಹೇಳಿದ್ದಾರೆ. ಅಷ್ಟೇ ಅಲ್ಲದೇ "ಯಾರಾದರೇ ನಮಾಜನ್ನು ಸ್ಥಾಪಿಸುತ್ತಾರೋ" ಎಂದು ಹೇಳಿದ್ದಾರೆ. ಅಷ್ಟೇಅಲ್ಲದೇ "ನಾನು ಪ್ರಸಾದಿಸಿದ ಜೀವನೋಪಾಧಿಯಿಂದ ನನ್ನ ಮಾರ್ಗದಲ್ಲಿ ಖರ್ಚು ಮಾಡುತ್ತಾರೋ" ಎಂದು ಇದೆ. ಇಲ್ಲಿ ಹೇಳಿರುವ ವಾಕ್ಯದಲ್ಲಿನ ವಿಷಯಗಳೆಲ್ಲವೂ ಸೂಕ್ಷ್ಮವಾದ ವಿಷಯಗಳೇ. ಸ್ಥೂಲ ಭಾವವಾಗಿ ಹೇಳಿಕೊಂಡರೇ ದೇವರು ಹೇಳಿರುವ ನಿಜವಾದ ಭಾವನೆ ತಿಳಿಯದೇ ಹೋಗುವುದು. ಆದ್ದರಿಂದ ಈ ವಾಕ್ಯಗಳನ್ನು ಸೂಕ್ಷ್ಮವಾಗಿಯೇ ಹೇಳಿಕೊಳ್ಳಬೇಕು. ಮೊದಲಿಗೆ 'ನಾವು ಪ್ರಸಾದಿಸಿದ ಜೀವನೋಪಾಧಿಯಿಂದ ನಮ್ಮ ಮಾರ್ಗದಲ್ಲಿ ಯಾರು ಖರ್ಚು ಮಾಡುತ್ತಾರೋ' ಎನ್ನುವುದಕ್ಕೆ ಸ್ಥೂಲವಾಗಿ, ಸೂಕ್ಷ್ಮವಾಗಿ ಎರಡು ವಿಧಗಳಾಗಿ ಅರ್ಥ ಹೇಳಿಕೊಳ್ಳಬಹುದು. ಸ್ಥೂಲವಾಗಿ ಅರ್ಥ ಕಾಣಿಸಿದಂತೆಯೇ ಇದೆ. ಸೂಕ್ಷ್ಮವಾಗಿ ಹೇಳಿಕೊಂಡರೇ ಹೀಗಿದೆ. "ದೇವರು ಮನುಷ್ಯನಿಗೆ 'ಜೀವ ಜಲವನ್ನು' ಕೊಟ್ಟಿದ್ದಾನೆ" ಎಂದು ಬೈಬಲ್ ಗ್ರಂಥದಲ್ಲಿ ಇದೆ. **'ಜೀವ ಜಲ' ಎಂದರೇ 'ದೈವಜ್ಞಾನ'** ಎಂದು ಅರ್ಥ. ಆ ವಿಧವಾಗಿ ಹೇಳಿಕೊಂಡರೇ ದೇವರು ಕೊಟ್ಟಿರುವ ಜೀವನೋಪಾಧಿ ಜ್ಞಾನವೆಂದು ಅರ್ಥ ಮಾಡಿಕೊಳ್ಳಬೇಕು. ದೇವರು ಕೊಟ್ಟಿರುವ ಜ್ಞಾನವನ್ನು ದೇವರ ಮಾರ್ಗ ದೊಳಗಿನವರಿಗೆ ವಿವರ ಹೇಳಿ ಯಾರಾದರೆ ಉಪಯೋಗಿಸುತ್ತಾರೋ ಎಂದು ಹೇಳುತ್ತಾ ಅದನ್ನು 'ನಾನು ಕೊಟ್ಟಿರುವ ಜೀವನೋಪಾಧಿಯನ್ನು ನನ್ನ ಮಾರ್ಗದಲ್ಲಿ ಖರ್ಚು ಮಾಡುವವರು' ಎಂದು ಹೇಳಿದ್ದಾನೆ. 'ನನ್ನ ಮಾರ್ಗ' ಎಂದರೇ 'ದೇವರ ಮಾರ್ಗ' ಎಂದು ತಿಳಿಯಬೇಕು. 'ಅಗೋಚರ ಯಥಾರ್ಥ ವಿಷಯವನ್ನು' ಎಂದರೇ 'ಕಾಣಿಸದ ಸೂಕ್ಷ್ಮ ವಿಷಯವನ್ನು' ಎಂದು ಅರ್ಥ. 'ನಮಾಜನ್ನು ಸ್ಥಾಪಿಸುತ್ತಾನೋ' ಎಂದರೇ 'ಜನ್ಮಗಳು ಇಲ್ಲದೇ ಹೋಗಬೇಕೆಂಬ'

ಉದ್ದೇಶವನ್ನು ತಿಳಿಸುವ ಪ್ರಾರ್ಥನೆಯನ್ನು ಯಾರು ತಿಳಿಸುತ್ತಾನೋ ಎಂದು ಅರ್ಥ.

'ಕರೆಯುವವನು ನನ್ನನ್ನು ಕರೆದಾಗ' ಅಂದರೇ **'ನನ್ನ ಮೇಲೆ ಶ್ರದ್ಧೆಯಿದ್ದು ಯಾರು ನನ್ನನ್ನು ಉತ್ತರಕ್ಕಾಗಿ ಅರ್ಥಿಸುತ್ತಿದ್ದಾನೋ ಅಂಥವನ ಕರೆಯನ್ನು ಆಲಿಸಿ ಅವನಿಗೆ ಉತ್ತರ ಕೊಡುತ್ತೇನೆ'** ಎಂದು ಮೇಲಿನ (2–186)ನೇ ವಾಕ್ಯದಲ್ಲಿದೆ. 'ನಾನು ಅವನಿಗೆ ಅತಿಸಮೀಪದಲ್ಲಿ ಇದ್ದೇನೆಂದು' ವಾಕ್ಯದಲ್ಲಿ ಹೇಳುವುದಾಗಿದೆ. ಇದು ಸೂಕ್ಷ್ಮವಾದ ವಾಕ್ಯವಾದ್ದರಿಂದ ಸ್ಥೂಲವಾಗಿ ಅರ್ಥ ಮಾಡಿಕೊಳ್ಳಬಾರದು. ಅತಿ ಸಮೀಪದಲ್ಲಿದ್ದರೂ ಕಾಣಿಸದವನು ಆತ್ಮ. ದೇವರು ಯಾರೊಂದಿಗೂ ಮಾತನಾಡುವವನಲ್ಲ. ಆತನು ಸಾಕ್ಷಿಭೂತನು. ಮಾತನಾಡುವವನು ದೇವರ ಕಾರ್ಯಗಳನ್ನು ಮತ್ತು ಜೀವಿಯ ಕಾರ್ಯಗಳನ್ನು ಮಾಡುವವನು ಆತ್ಮ. ಆತ್ಮಗೆ ಪರಮಾತ್ಮ ಜ್ಞಾನವು ಸಂಪೂರ್ಣವಾಗಿ ತಿಳಿಯುವುದರಿಂದ ದೈವ ಮಾರ್ಗದಲ್ಲಿ ಸಕ್ರಮವಾಗಿ ನಡೆಯುವುದಕ್ಕೆ ಆತ್ಮವೊಂದರ ಮಾತನ್ನು ಕೇಳಬೇಕಾದ್ದೆ. ಆದ್ದರಿಂದ ಆತ್ಮ ಸರಿಯಾದ ಮಾರ್ಗ ಹೊಂದುವುದಕ್ಕೆ 'ನನ್ನ ಆಜ್ಞೆಯನ್ನು ಅನುಸರಿಸಬೇಕಾದ್ದೇ ಎಂದು' ಹೇಳಿದ್ದಾನೆ. ಅಷ್ಟೇಅಲ್ಲದೇ ದೇವರಲ್ಲಿರುವ ವಿಶ್ವಾಸದಂತೆ ಆತ್ಮ ಮೇಲೆ ಕೂಡಾ ಹೊಂದಿರಬೇಕು. ದೇವರು ಏನು ಮಾಡುವವನಲ್ಲ. ಆತ್ಮವೇ ಎಲ್ಲಾ ಮಾಡುವವನು, ಎಲ್ಲಾ ತಿಳಿಸುವವನೆಂದು ವಿಶ್ವಾಸ ಹೊಂದಿರಬೇಕು ಎಂದು ಹೇಳಿದ್ದಾನೆ. ಮೇಲಿನ ವಚನದಲ್ಲಿ ಹೇಳಿರುವ ಮಾತುಗಳನ್ನನುಸರಿಸಿ ಅಲ್ಲಿ ಅಗೋಚರವಾದ ಆತ್ಮ ಮೇಲೆ ವಿಶ್ವಾಸ ಹೊಂದಿರುವಾಗ ಖುರಾನ್ ಗ್ರಂಥದಲ್ಲಿನ ಯಾವ ಸೂಕ್ಷ್ಮ ವಾಕ್ಯವೊಂದರ ವಿವರವಾದರೂ ಸುಲಭವಾಗಿ ತಿಳಿಯಬಹುದು. ದೇವರಿಗೆ ಹೊರತು ಯಾರಿಗೂ ತಿಳಿಯದೆಂದು, ಸೂಕ್ಷ್ಮ ವಿಷಯಗಳನ್ನು ಬಿಡುವವನಿಗೆ, ಅರ್ಥಕ್ಕಾಗಿ ಹುಡುಕದವನಿಗೆ ಇತರ ಜ್ಞಾನಿಗಳಿಂದ ತಿಳಿಯುವ ಅವಕಾಶವನ್ನು ಕಳೆದು ಕೊಂಡಹಾಗೆಯೇ ಎಂದು ಹೇಳಬಹುದು. (2–186) ಆಯತ್ ಪ್ರಕಾರ ಅವನೊಳಗೆ, ಅವನಿಗೆ ಸಮೀಪದಲ್ಲಿರುವ ಆತ್ಮ, ರಹಸ್ಯ ವಾಕ್ಯಗಳ ಅರ್ಥವನ್ನು ಹೇಳಬಲ್ಲದು.

ಸಾವು ಹುಟ್ಟುಗಳು ಯಾವ ಮನುಷ್ಯನಿಗೂ ತಿಳಿಯದ ಅಗೋಚರ ವಿಷಯಗಳಾಗಿವೆ. 'ಮನುಷ್ಯ ಮರಣಿಸಿ ಹುಟ್ಟುವನು' ಎಂಬ ವಿಷಯವನ್ನು ಮುಸ್ಲಿಮ್‌ರು ಯಾವ ಕಾರಣಕ್ಕು ನಂಬುತ್ತಿಲ್ಲ. ಮೊದಲಿನಿಂದಲೂ ಅವರ ಹಿರಿಯರು ಹಾಗೆ ಬೋಧಿಸಿದ್ದಾರೆ, ಆದ್ದರಿಂದ ಅವರು ಮನುಷ್ಯ ಮರಣಿಸಿ ಪುನಃ ಹುಟ್ಟುತ್ತಾನೆಂದರೇ ನಂಬದೇ ಇದ್ದಾರೆ. ದ್ವಿತೀಯ ದೈವಗ್ರಂಥದಲ್ಲಿ ಇಂಜೀಲ್‌ನಲ್ಲಿ (ಬೈಬಲ್‌ನಲ್ಲಿ) ಯೋಹಾನ್ ಸುವಾರ್ತೆ ಮೂರನೆಯ ಅಧ್ಯಾಯದಲ್ಲಿ 7, 8 ವಚನಗಳಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ. **(7) ನೀವು ಹೊಸದಾಗಿ ಜನ್ಮಿಸಬೇಕೆಂದು ನಾನು ನಿನ್ನೊಂದಿಗೆ ಹೇಳಿರುವುದಕ್ಕೆ ಆಶ್ಚರ್ಯಪಡಬೇಡ. (8) ಗಾಳಿ ತನಗಿಷ್ಟವಾದ ಕಡೆ ಬೀಸುತ್ತದೆ. ನೀನು ಅದರ ಶಬ್ದ ಕೇಳುವೆಯೇ ಹೊರತು, ಅದು ಎಲ್ಲಿಂದ ಬರುತ್ತದೋ ಎಲ್ಲಿಗೆ ಹೋಗುವುದೋ ನಿನಗೆ ತಿಳಿದಿಲ್ಲ. ಆತ್ಮ ಮೂಲವಾಗಿ ಜನ್ಮಿಸಿದ ಪ್ರತಿಯೊಬ್ಬನು ಹಾಗೆಯೇ ಇದ್ದಾನೆನ್ನುತ್ತಾನೆ"** ದ್ವಿತೀಯ ದೈವ ಗ್ರಂಥದಲ್ಲಿ ಹೇಳಿರುವ ಈ ಮಾತುಗಳು ಜನ್ಮಗಳಿವೆ ಎಂದು ದೃಢಪಡಿಸುತ್ತಿವೆ. ಗಾಳಿ ಎಲ್ಲಿಂದ ಬರುತ್ತಿದೆಯೋ, ಎಲ್ಲಿಗೆ ಹೋಗುತ್ತಿದೆಯೋ ತಿಳಿಯದಂತೆ, ಗಾಳಿ ಶಬ್ದವನ್ನು ಮಾತ್ರ ಕೇಳುವವರು ಗಾಳಿ ಇದೆಯೆಂದು ತಿಳಿದರೂ, ಅದು ಬರುವುದು ಹೋಗುವುದನ್ನು ತಿಳಿಯದಂತೆ, ಮನುಷ್ಯ ಜನ್ಮಿಸಿರುವಂತ ತಿಳಿದರೂ ಆತನು ಎಲ್ಲಿಂದ ಬಂದು ಜನ್ಮಿಸಿದ್ದಾನೋ, ಎಲ್ಲಿಗೆ ಹೋಗುತ್ತಿದ್ದಾನೋ ತಿಳಿಯದೆಂದಿದ್ದಾನೆ. ಆದ್ದರಿಂದ ಜನ್ಮಗಳ ವಿಷಯ ಬಹಳಜನ ನಂಬದೇ ಇದ್ದಾರೆ ಎಂದು ಹೇಳಿದ್ದಾನೆ. ಆತ್ಮ ಮೂಲವಾಗಿ ಜನ್ಮಿಸಿರುವ ಪ್ರತಿಯೊಬ್ಬನು ಹಾಗೆಯೇ ಇದ್ದಾನೆಂದು (ಜನ್ಮಗಳು ಹೊಂದಿದ್ದಾನೆಂದು) ಹೇಳಿ, ಆದರೂ **'ನಮ್ಮ ಸಾಕ್ಷ್ಯವನ್ನು ನೀವು ಅಂಗೀಕರಿಸುವುದಿಲ್ಲವೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ. ಭೂಲೋಕ ಸಂಬಂಧವಾದ ಸಂಗತಿಗಳು ನಾನು ನಿಮ್ಮೊಂದಿಗೆ ಹೇಳಿದರೇ ನೀವು ನಂಬದೇ ಇದ್ದಾಗ ಪರಲೋಕ ಸಂಬಂಧವಾದವುಗಳನ್ನು ನಿಮ್ಮೊಂದಿಗೆ ಹೇಳಿದ ಸಲುವಾಗಿ ಹೇಗೆ ನಂಬುತ್ತೀರಿ?'** ಎಂದು 11, 12 ವಾಕ್ಯಗಳಲ್ಲಿ ಹೇಳಿದ್ದಾನೆ. ಇದನ್ನೆಲ್ಲವನ್ನು ನೋಡಿದರೇ ಬಹಳ ಜನ ಮನುಷ್ಯನೊಂದರ ಪುನರ್ಜನ್ಮಗಳನ್ನು ನಂಬುತ್ತಿಲ್ಲ ವೆಂದು ತಿಳಿಯುತ್ತಿದೆ.

ಯಾರಾದರೇ ಕಾಣಿಸದ ಅಗೋಚರ ವಿಷಯಗಳನ್ನು ವಿಶ್ವಾಸಿ ಸುತ್ತಾನೋ ಅವನು ನಾನು ಹೇಳುವ ಕಾಣಿಸದ ನಮಾಜನ್ನು ವಿಶ್ವಾಶಿಸುತ್ತಾನೆ. ನನಗೆ ಜನ್ಮಗಳಿಲ್ಲ ಎಂಬ ಸ್ಥಿತಿಗೆ ಸೇರಿಕೊಳ್ಳುವುದೇ ನಮಾಜ್ ಎಂದು ತಿಳಿದುಕೊಳ್ಳುತ್ತಾನೆ. ನಾನು ಜನ್ಮಿಸದವನಾಗಿ ಇರಬೇಕೆಂದರೇ, ಈಗ ಜನ್ಮಿಸಿರುವ ನಾನು ನಮಾಜನ್ನು ಸೇರಿಕೊಳ್ಳಬೇಕು. ಇದು ನಮಾಜ್ ಎಂದು ತಿಳಿಸುತ್ತಾ, ಅದನ್ನು ಸೇರಿಕೊಳ್ಳುವುದಕ್ಕೆ ಮಾಡುವ ಸಾಧನೆಯುನ್ನು ಯಾರು ತೋರಿಸಬಲ್ಲನೋ, ಅವನು ಭೂಮಿಮೇಲೆ ನಮಾಜನ್ನು ಸ್ಥಾಪಿಸಿದಂತೆ. ಅಲ್ಲಿಯವರೆಗು ಭೂಮಿಮೇಲೆ ನಮಾಜ್ ಹೆಸರಿದ್ದರೂ ಅದರ ಸ್ಥಾಪನೆ, ಅದರ ಆಚರಣೆ ಇಲ್ಲದಂತೆಯೇ. ಅದರ ಉದ್ದೇಶವೇ ಇಲ್ಲದಿರುವಾಗ, ಅಂದರೇ ನನಗೆ ಜನ್ಮಗಳಿಲ್ಲದ ಸ್ಥಿತಿ ಬೇಕೆನ್ನುವ ನಮಾಜ್ ಉದ್ದೇಶವೇ ಮನುಷ್ಯರಲ್ಲಿ ಇಲ್ಲದಿರುವಾಗ, ಅದನ್ನು ಸ್ಥಾಪಿಸುವವನು ಯಾರೂ ಇಲ್ಲದಹಾಗೆಯೇ ಅಲ್ಲವೇ! ಆಗ ಅರ್ಥದಿಂದ ಕೂಡಿಕೊಂಡಿರುವ ನಮಾಜ್ (ಪ್ರಾರ್ಥನೆ) ಇಲ್ಲದಂತೆಯೇ ಅಲ್ಲವೇ! ಈಗ ನಾನು ನೇರವಾಗಿ ಮನುಷ್ಯನನ್ನು ಪ್ರಶ್ನಿಸುತ್ತಿದ್ದೇನೆ. "ಓ ಮಾನವಾ! ನಿನಗೆ ನಮಾಜ್ ಎಂದರೇ ತಿಳಿದಿದೆಯಾ? ಓ ಮಾನವಾ! ನೀನು ನಮಾಜನ್ನು ಒಂದುಬಾರಿಯಾದರೂ ನಿನ್ನ ಜೀವನದಲ್ಲಿ ಮಾಡಿದ್ದೀಯಾ? ನೀನು ಹೇಳಿಕೊಳ್ಳುವ ನಮಾಜ್, ನೀನು ಆಚರಿಸುವ ನಮಾಜ್ ನಿನ್ನ ಪ್ರಭುವಾದ ಅಲ್ಲಾಹ್ ಬಳಿಗೆ (ದೇವರ ಬಳಿಗೆ) ಸೇರಿಸುತ್ತದಾ? ಸೇರಿಸಬಲ್ಲದೆಂದು ನೀವು ನಿಮ್ಮ ಹೃದಯದ ಮೇಲೆ ಕೈಹಾಕಿಕೊಂಡು ಹೇಳಬಲ್ಲಿರಾ? ನೀವು ಪ್ರಾರ್ಥನೆ ಹೆಸರಿನಿಂದ ನಿನ್ನ ದೇವರನ್ನು ಹೊಗಳುತ್ತಿದ್ದೀಯ. ಆತನು (ದೇವರು) ಎಷ್ಟು ದೊಡ್ಡವನೋ ಆತನಿಗೆ ತಿಳಿದಿಲ್ಲವೇ? ನೀನು ಹೊಗಳಿದರೇನೇ ಆತನ ದೊಡ್ಡತನ ಆತನಿಗೆ ತಿಳಿಯುತ್ತದೆಯೇ? ದೇವರು ತನ್ನನ್ನು ಹೊಗಳಿರೆಂದು ಹೇಳಿದ್ದಾನಾ? ತನ್ನ ಸಾಮ್ರಾಜ್ಯದಲ್ಲಿ ಸೀಟನ್ನು ಕೇಳಿಕೊ ಎಂದಿದ್ದಾನಾ? ಅಥವಾ, ನೀನು ದೇವರ ಸನ್ನಿಧಾನವನ್ನು ಕೇಳುತ್ತಿದ್ದೀಯಾ? ಇಲ್ಲ. ದೇವರನ್ನು ಹೊಗಳುತ್ತಿದ್ದೀ ಯೆಂದು ನಿನಗೇ ತಿಳಿಯುತ್ತಿದೆ. **ದೇವರು ಹೊಗಳಿಕೆಗೆ ಮಣಿಯುವುದಿಲ್ಲ.**

**ದೇವರನ್ನು ಆತನ ಸನ್ನಿಧಾನವನ್ನು ಕುರಿತು ಕೇಳಿಕೊಂಡರೇ ಅದನ್ನು ನಿನಗೆ ಪ್ರಸಾದಿಸಬಲ್ಲನು. ಅಷ್ಟೇ ಹೊರತು ಹೊಗಳುವವನನ್ನು ನಂಬುವುದಿಲ್ಲ.**

ನಮಾಜನ್ನು ನೆಲೆಗೊಳಿಸಿರೆಂದು ಖುರಾನ್ ಗ್ರಂಥದಲ್ಲಿ ಬಹಳಬಾರಿ ಹೇಳಿದ್ದಾನೆ. ಅದನ್ನನುಸರಿಸಿ ಪ್ರಸ್ತುತ 'ನಮಾಜ್' ಎನ್ನುವುದು ಇಲ್ಲವೆಂದೇ ಅಲ್ಲವೇ ಅರ್ಥ. ಮನೆಯನ್ನು ನಿರ್ಮಿಸಿರಿ ಎಂದರೇ ಮನೆಯಿಲ್ಲ, ಮನೆಯನ್ನು ತಯಾರಿ ಮಾಡಬೇಕೆಂದೇ ಅಲ್ಲವೆ ಅರ್ಥ. ನಮಾಜನ್ನು ನೆಲೆಗೊಳಿಸಿರಿ ಎಂದು ದೇವರೇ ಹೇಳಿರುವಾಗ ನಮಾಜ್ ಭೂಮಿಮೇಲೆ ಇಲ್ಲ ಅದನ್ನು ನೀವು ಮಾಡಿರೆಂದೇ ಅಲ್ಲವೇ! ಅರ್ಥ. ಈದಿನ ಬಹಳಜನ 'ನಮಾಜ್' ಎಂಬ ಹೆಸರಿನಿಂದ ಮಾಡುವ ಪ್ರಾರ್ಥನೆಗಳು ದೇವರಲ್ಲಿ ಐಕ್ಯವಾಗುವುದಕ್ಕೆ ಅಲ್ಲವೆಂದು, ನಮಾಜ್ ಆಚರಣೆ ಹಿಂದೂಗಳ ತಪಸ್ಸನ್ನು ಹೋಲಿದೆಯೆಂದು, ನಮಾಜ್‌ನಿಂದ ಸ್ವರ್ಗ ಲಭ್ಯವಾಗಬಹುದು ಆದರೇ ಪರಲೋಕ (ಮೋಕ್ಷ) ಲಭ್ಯವಾಗುವು ದಿಲ್ಲವೆಂದು ತಿಳಿಯುತ್ತಿದೆ. ನಮಾಜ್‌ನಲ್ಲಿ ಪರಲೋಕವನ್ನು ಅಥವಾ ಮೋಕ್ಷವನ್ನು, ಅಥವಾ ದೇವರಲ್ಲಿ ಐಕ್ಯವಾಗುವ ವಿಧಾನವನ್ನು ಅರ್ಥಿಸುವುದು ಇಲ್ಲವೇ ಇಲ್ಲ. ನಮಾಜ್ ಮಾಡುವ ಪ್ರತಿಯೊಬ್ಬರಿಗೂ ಅವರ ಉದ್ದೇಶದಲ್ಲಿ ದೇವರಲ್ಲಿ ಸೇರಿಹೋಗಬೇಕೆಂದು. ನಂತರ ಜನ್ಮಗಳಿಗೆ ಬರಬಾರದೆಂಬ ಭಾವನೆಯೇ ಇಲ್ಲ. ಆದ್ದರಿಂದ ಮನುಷ್ಯರು ಮಾಡುವುದು ಪ್ರಾರ್ಥನೆ ಎನಿಸಿಕೊಂಡರೂ ನಿಜವಾದ ಅರ್ಥದಿಂದ ಕೂಡಿರುವ ನಮಾಜ್ ಎನಿಸಿಕೊಳ್ಳುವುದಿಲ್ಲ. ಎಲ್ಲ ವಿಧಗಳಲ್ಲಿಯೂ ಮೂರು ಮತದವರು ಮಾಡುವ ಆರಾಧನೆಗಳಲ್ಲಿ 'ಪ್ರಾರ್ಥನೆ' ಎನ್ನುವ ಅಂಶವಿದ್ದರೂ, ಅದು ಪೂರ್ತಿ ಸಾರ್ಥಕತೆಯಿಂದ ಕೂಡಿಕೊಂಡಿರುವು ದಾಗಿ, ದೇವರಲ್ಲಿ ಸೇರಿ ಪುನಃ ಹುಟ್ಟಬಾರದೆನ್ನುವ ಉದ್ದೇಶದಿಂದ ಮಾಡುವುದು ಇಲ್ಲದಿರುವುದರಿಂದ ಪ್ರತಿಮನುಷ್ಯ, ಪ್ರತಿ ಮತಸ್ಥನು ಪ್ರಾರ್ಥನೆ ವಿಷಯದಲ್ಲಿ ಪುನಃ ಪರಿಶೀಲಿಸಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ. ನೀವು ದೇವರ ಮಾರ್ಗದಲ್ಲಿ ಮುಂದಕ್ಕೆ ಹೋಗಬೇಕೆಂಬ ಉದ್ದೇಶದಿಂದ ನಿಮ್ಮನ್ನು ನೋಯಿಸಿ ಹೇಳಬೇಕಾಗಿ ಬಂದಿದೆ. **'ಬುದ್ಧಿ ಹೇಳುವವನು ಗುದ್ದಿ ಹೇಳುವನು'** ಎಂಬ ಹಿರಿಯರ ಗಾದೆಯ

ಪ್ರಕಾರ ನಿಮಗೆ ಒಳ್ಳೆಯದನ್ನು ಹೇಳುವುದಕ್ಕೆ ನಾನು ಕೆಟ್ಟದಾಗಿ ಕಾಣಿಸಿದರೂ ಪರವಾಗಿಲ್ಲವೆಂದು ಭಾವಿಸಿ ಹೇಳುವುದಾಗಿದೆ.

# ನಮ್ಮ ಗ್ರಂಥ ದೊಡ್ಡದು

**ಪ್ರಶ್ನೆ :– ನಾವು ಮುಸ್ಲಿಮ್‌ರೊಂದಿಗೆ ಕೆಲವು ಆಧ್ಯಾತ್ಮಿಕ ವಿಷಯಗಳನ್ನು ಚರ್ಚಿಸಿದಾಗ ಅವರು ಕೇಳದೇ ನಮ್ಮದು ಅಂತಿಮ ದೈವಗ್ರಂಥ, ಇದು ಇಲ್ಲದಿರುವಾಗ ಮೊದಲಿರುವ ಗ್ರಂಥವನ್ನು ಅನುಸರಿಸಬೇಕು. ಇದು ಬಂದ ನಂತರ ಹಳೆಯ ಗ್ರಂಥಗಳೊಂದಿಗೆ ಇನ್ನು ಕೆಲಸವಿಲ್ಲ. ಇದೇ ಕೊನೆಯ ಗ್ರಂಥವಾದ್ದರಿಂದ ಎಲ್ಲರೂ ಇದರ ಪ್ರಕಾರವೇ ನಡೆಯಬೇಕು. ದೇವರು ಆ ಗ್ರಂಥಗಳನ್ನು ಬಿಟ್ಟುಹಾಕಿರೆಂದು ಈ ಕೊನೆಯ ಗ್ರಂಥವನ್ನು ಕಳುಹಿಸಿದ್ದಾನೆ. ದೇವರು ಕೊಟ್ಟಿರುವ ಕೊನೆಯ ಗ್ರಂಥದ ಪ್ರಕಾರವೇ ಎಲ್ಲರೂ ನಡೆದುಕೊಳ್ಳಬೇಕೆಂದು ಹೇಳುತ್ತಿದ್ದಾರೆ. ಇದನ್ನು ಕುರಿತು ಅವರು ಹೇಳುವ ಮಾತು ನಿಜವೇನಾ? ನೀವೇನು ಹೇಳುತ್ತೀರಿ?**

**ಉತ್ತರ :–** ನಾವು ಕೂಡಾ ಬಹಳಕಡೆಗಳಲ್ಲಿ ಇದೇ ವಿಷಯವನ್ನೇ ಕೇಳಿದ್ದೇವೆ. ಮುಸ್ಲಿಮ್‌ರಲ್ಲಿ ಬೋಧಕರಾದವರೇ ಆ ವಿಧವಾಗಿ ಹೇಳುತ್ತಿರುವಾಗ ಸಾಧಾರಣ ಮುಸ್ಲಿಮ್‌ರು ಅವರನ್ನೇ ಅನುಸರಿಸುತ್ತಿದ್ದಾರೆ. ಖುರಾನ್ ಗ್ರಂಥಕ್ಕೆ **'ಅಂತಿಮ ದೈವಗ್ರಂಥ'** ಎನ್ನುವ ಹೆಸರು ಬಂದಿರುವುದು ವಾಸ್ತವವೇ. ಆದ್ದರಿಂದ ನಾವು ಖುರಾನ್ ಗ್ರಂಥವನ್ನು ಹೆಚ್ಚಾಗಿ ಅಂತಿಮ ದೈವಗ್ರಂಥವೆಂದೇ ಕರೆಯುತ್ತಿರುತ್ತೇವೆ. ಮೊದಲು ಬಂದಿರುವ ಎರಡು ಗ್ರಂಥಗಳನ್ನು ಅಲ್ಲಗಳೆದು ಈ ಗ್ರಂಥವನ್ನೇ ನೋಡಿರೆಂದು ದೇವರು ಖುರಾನ್ ಗ್ರಂಥದಲ್ಲಾಗಲೀ, ಉಳಿದ ಎರಡು ಗ್ರಂಥಗಳಲ್ಲಾಗಲೀ ಎಲ್ಲೂ ಹೇಳಲಿಲ್ಲ. ಇದೇ ಖುರಾನ್ ಗ್ರಂಥದಲ್ಲಿ ಸೂರಾ 5, ಆಯತ್ 48ರಲ್ಲಿ ಹೀಗಿದೆ ನೋಡಿರಿ. **(5-48) "ನಾವು ನಿಮ್ಮಕಡೆಗೆ ಈ ಖುರಾನ್ ಗ್ರಂಥವನ್ನು ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತದೆ. ನಿನ್ನ ಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನ ಇಚ್ಛೆಯಂತೆ**

**ಅನುಸರಿಸಬೇಡ"** ಇಲ್ಲಿ ಈ ವಾಕ್ಯವನ್ನು ಗಮನಿಸಿದರೇ ಮುಸ್ಲಿಮ್‌ರು ಖುರಾನ್ ಗ್ರಂಥವೇ ಎಲ್ಲ ಗ್ರಂಥಗಳಿಗಿಂತಲೂ ದೊಡ್ಡದೆಂದು ಹೇಳಿದಂತೆ ಖುರಾನ್ ಗ್ರಂಥದಲ್ಲಿ ಎಲ್ಲೂ ಇಲ್ಲ. ಆದರೂ ಅವರು ಯಾಕೆ ಹಾಗೆ ಹೇಳುತ್ತಿದ್ದಾರೆಂದರೇ ಅದಕ್ಕೆ ಒಂದೇ ಒಂದು ಕಾರಣ ಮತ. 'ನನ್ನ ಮತ' ಎನ್ನುವುದೇ ಅಷ್ಟಾಗಿ ಅಸತ್ಯವನ್ನು ಹೇಳಿಸುತ್ತಿದೆ. ಇಂಥವರು ತಯಾರಾಗುತ್ತಾರೆನ್ನುವ ಉದ್ದೇಶದಿಂದಲೇ ದೇವರು ಮೊದಲೇ ತನ್ನ ಖುರಾನ್ ಗ್ರಂಥದಲ್ಲಿ (5–48) ಆಯತ್‌ನು ಹೇಳಿದ್ದಾನೆ. ಈ ಆಯತ್ (ವಾಕ್ಯದ)ಲ್ಲಿ **"ಖುರಾನ್‌ಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತಿದೆ"** ಎಂದು ಪ್ರತ್ಯೇಕವಾಗಿ ಹೇಳಿದ್ದರೂ ದೇವರ ಮಾತನ್ನು ಅಲ್ಲಗಳೆದು ಖುರಾನ್ ಮುಂದೆ ಭಗವದ್ಗೀತೆಯಾಗಲೀ, ಬೈಬಲ್‌ಆಗಲಿ ಕೆಲಸಕ್ಕೆ ಬರುವುದಿಲ್ಲ. ಈ ಗ್ರಂಥವು ಬಾರದಿರುವಾಗ ಆ ಗ್ರಂಥಗಳ ಅವಶ್ಯವಿತ್ತು. ಇದು ಬಂದಿರುವ ನಂತರ ಅವುಗಳ ಅವಶ್ಯಕತೆ ಇಲ್ಲವೆಂದು ಹೇಳುತ್ತಿದ್ದಾರೆ. ಅಂತಿಮ ದೈವಗ್ರಂಥವು ಬಂದ ನಂತರ ಮೊದಲು ಬಂದಿರುವ ಎರಡು ಗ್ರಂಥಗಳು ಇದರ ಕೆಳಗೆ ಬಿದ್ದುಹೋಗಿವೆ. ಆ ಎರಡು ಗ್ರಂಥಗಳಿಗಿಂತಲೂ ಉನ್ನತವಾದ ಜ್ಞಾನವನ್ನು ಈ ಗ್ರಂಥದಲ್ಲಿ ದೇವರು ಕೊಟ್ಟಿದ್ದಾನೆ. ಆದ್ದರಿಂದ ಎಲ್ಲರಿಗೂ ಆಧಾರ ಖುರಾನ್ ಗ್ರಂಥವೇ ಎನ್ನುತ್ತಿದ್ದಾರೆ. ಎಲ್ಲರೂ ಖುರಾನ್ ಗ್ರಂಥವನ್ನು ಅನುಸರಿಸಬೇಕಾಗಿರುವುದೇ ಎಂದು ಹೇಳುತ್ತಿದ್ದಾರೆ. ಆ ಮಾತು ನಿಜವೇನೋಯೆಂದು ಅವರ ಮಾತನ್ನು ನಂಬಿ ತಮ್ಮ ಮತಗಳನ್ನು ಬಿಟ್ಟು ಇಸ್ಲಾಮ್ ಮತವನ್ನು ಸ್ವೀಕರಿಸಿದವರು ಕೂಡಾ ಇದ್ದಾರೆ. ಈ ಮಾತುಗಳೆಲ್ಲವೂ ಮತಪ್ರಚಾರಕ್ಕಾಗಿಯೇ ಎಂದು ತಿಳಿದುಹೋಗುತ್ತಿದೆ. ಅವರು ಹೇಳಿರುವ ಒಂದು ಮಾತು ಕೂಡಾ ಖುರಾನ್ ಗ್ರಂಥದಲ್ಲಿ ಇಲ್ಲ. ಖುರಾನ್ ದೈವಗ್ರಂಥವು, ಅಂತಹ ಗ್ರಂಥದಲ್ಲಿ ಮತಕ್ಕೆ ಸಂಬಂಧಿಸಿರುವ ಮಾತುಗಳೇ ಇಲ್ಲ. (5–48)ನೇ ವಾಕ್ಯದಲ್ಲಿ **"ಖುರಾನ್ ತನಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢೀಕರಿಸುತ್ತಿದೆ, ಸಾಕ್ಷ್ಯವನ್ನು ಕೊಡುತ್ತಿದೆಯೆಂದು"** ಹೇಳಿರುವಾಗ, ನೀವು ಹೇಳುವ ಮಾತುಗಳೆಲ್ಲ ಅಸತ್ಯಗಳಲ್ಲವೇ! ಆದ್ದರಿಂದ ಆ ಆಯತ್ ಕೊನೆಯಲ್ಲಿ ಹೀಗೆ ಹೇಳಿದ್ದಾನೆ. **"ನಿನ್ನ ಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನ ಇಚ್ಛೆಯನ್ನು**

**ಅನುಸರಿಸಬೇಡ"** ಎಂದು ಇದೆ. ನಿನ್ನ ಬಳಿಗೆ ಬಂದಿರುವ ಸತ್ಯ ಎಂದರೇ ನೀನು ಹಿಂದೂವಾದರೇ ನಿನ್ನ ಬಳಿಗೆ ಬಂದಿರುವ ಸತ್ಯವು **ಪ್ರಥಮ ದೈವಗ್ರಂಥವಾದ ಭಗವದ್ಗೀತೆ** ಎಂದು ಜ್ಞಾಪಕವಿಟ್ಟುಕೋ, ಒಂದು ವೇಳೆ ನೀನು ಕ್ರೈಸ್ತನಾದರೇ ನಿನಗೆ ದೇವರು ಕೊಟ್ಟಿರುವ ಗ್ರಂಥವು **ದ್ವಿತೀಯ ದೈವಗ್ರಂಥ ಬೈಬಲ್**. ಮುಸ್ಲಿಮ್ ಆದರೇ ನಿನ್ನ ಗ್ರಂಥವು **ಅಂತಿಮ ದೈವಗ್ರಂಥ ಖುರಾನ್,** ಈ ಮೂರು ನೀನಿರುವ ಮತವನ್ನನುಸರಿಸಿ ನಿನ್ನ ಬಳಿಗೆ ಬಂದಿರುವ ಸತ್ಯಗಳೆಂದೂ, ಸತ್ಯಗ್ರಂಥಗಳೆಂದು ನೆನಪಿಟ್ಟುಕೋ. ನೀನು ಯಾವ ಮತಸ್ಥ ನಾದರೂ ನಿನ್ನ ಗ್ರಂಥ ಯಾವುದೋ ನಿನಗೆ ತಿಳಿದಿದೆ ಅಲ್ಲವೇ! ಹಾಗಿರುವಾಗ ಇತರ ಮತಸ್ಥರು ಬಂದು 'ನಿನ್ನ ಬಳಿಗೆ ಬಂದಿರುವ ಸತ್ಯ ಗ್ರಂಥವನ್ನು ಅಲ್ಲಗಳೆದು, ಅವರ ಬಳಿಯಿರುವ ಗ್ರಂಥವೇ ಸತ್ಯವಾದುದೆಂದು' ಹೇಳಿದರೇ ಅವರ ಮಾತುಗಳನ್ನು ನೀನು ಕೇಳಬೇಡ ಎಂದು ಹೇಳುತ್ತಾ "ನಿನ್ನಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನ ಇಚ್ಛೆಯನ್ನು ಅನುಸರಿಸಬೇಡ" ಎಂದು ದೇವರೇ ಹೇಳಿದ್ದಾನೆ.

ದೇವರು ಮನುಷ್ಯರೆಲ್ಲರನ್ನು ಒಂದು ಮತವಾಗಿ ಹುಟ್ಟಿಸಬೇಕೆಂದು ಕೊಂಡಿದಿದ್ದರೆ ಹಾಗೆಯೇ ಹುಟ್ಟಿಸುತ್ತಿದ್ದನು. ಆದರೇ ದೇವರು ಹಾಗೆ ಮಾಡಲಿಲ್ಲ. ಯಾರ ಮತದಲ್ಲಿ ಅವರು ಇರುವುದಕ್ಕೆ ಅವರಿಗೆ ಧರ್ಮ ಶಾಸನವಾದ ಗ್ರಂಥವನ್ನು ಕೊಟ್ಟು ಅದರ ಪ್ರಕಾರವೇ ಜೀವಿಸಿರೆಂದಿದ್ದಾನೆ. ಹಾಗೆಂದು ಧರ್ಮಗಳು ಬೇರೆಯಾಗಿ ಇಲ್ಲ **ದೇವರು ಒಬ್ಬನೇ, ಧರ್ಮವು ಒಂದೇ**. ಎಲ್ಲ ಮತಗಳಲ್ಲಿ ಒಂದೇ ಧರ್ಮವಿದ್ದರೂ ಅದನ್ನು ಹೇಳುವುದು ಬೇರೆಯಾಗಿರುವುದರಿಂದ ಬೇರೆ ಮತ ಧರ್ಮಗಳೆಂದು ಮನುಷ್ಯರು ಅಂದುಕೊಂಡಿದ್ದಾರೆ. ಒಂದೇ ಧರ್ಮವನ್ನು ಮೂರು ವಿಧಗಳಾಗಿ ಹೇಳಬಹುದು. ಆಗ ಆ ಧರ್ಮವನ್ನು ಮೂರು ಬೇರೆಬೇರೆ ಮತಗಳದ್ದೆಂದು ಹೇಳಬಹುದಾ? ಒಂದೇ ಮಾತನ್ನು ಮೂರು ವಿಧಗಳಾಗಿ ಹೇಳಬಹುದು. ಆಗ ಆ ಮಾತು ಮೂರು ಬೇರೆಬೇರೆ ಜಾತಿಗಳದ್ದೆಂದು ಹೇಳಬಹುದಾ? ಒಂದೇ ಮಾತನ್ನು ಮುಂದೆ ಹಿಂದೆ ಪದಗಳನ್ನು

ಬದಲಾಯಿಸಿ ಹೇಳಬಹುದು. ಹಾಗೆಯೇ ಭಾವನೆಯನ್ನು ಬೇರೆ ಮಾತುಗಳಲ್ಲಿ ಹೇಳಬಹುದು. ಪದಗಳನ್ನು ಮುಂದೆ ಹಿಂದೆ ಬದಲಾಯಿಸಿ ಹೇಳಿದರೂ ಒಂದೇ, ಭಾವನೆಯನ್ನು ಬೇರೆಬೇರೆ ಮಾತುಗಳಲ್ಲಿ ಹೇಳಿದರೂ ಒಂದೇ. ಉದಾಹರಣೆಗೆ ಒಂದೇ ಭಾವನೆಯಿರುವ ಮೂರು ವಿಧಗಳ ಮಾತುಗಳನ್ನು ನೋಡೋಣ.

**ನನ್ನ ಆರೋಗ್ಯ ಚೆನ್ನಾಗಿ ಇದೆ.**
**ಚೆನ್ನಾಗಿ ಇದೆ ನನ್ನ ಆರೋಗ್ಯ.**
**ನನಗೆ ಯಾವ ರೋಗವು ಇಲ್ಲ.**

ಈ ಮೂರು ಮಾತುಗಳು ಬೇರೆಬೇರೆಯಾಗಿ ಕಾಣಿಸಿದರೂ ಒಂದೇ ಭಾವನೆಯನ್ನು ಹೊಂದಿವೆ. ಅಷ್ಟೇ ಹೊರತು ಇವುಗಳನ್ನು ಮೂರು ಮತಗಳಿಗೆ ಸೇರಿದ ಮೂರು ಬೇರೆಬೇರೆ ವಾಕ್ಯಗಳೆಂದು ಹೇಳುವುದಕ್ಕೆ ಸಾಧ್ಯವಿಲ್ಲ ಅಲ್ಲವೇ! ಹಾಗೆಯೇ ದೇವರ ಧರ್ಮವನ್ನು ಮೂರು ವಿಧಗಳಾಗಿ ಹೇಳಿದರೂ ಅದು ಒಂದೇ ಭಾವನೆಯನ್ನು ಹೊಂದಿರುತ್ತದೆ. ಅಷ್ಟೇ ಹೊರತು ಭಾವನೆಯಲ್ಲಿ ಬದಲಾವಣೆ ಇರುವುದಿಲ್ಲ. ಒಂದೇ ಧರ್ಮವನ್ನು ಮೂರು ವಿಧಗಳಾಗಿ ಕಾಣಿಸುವಂತೆ ಹೇಳಿದರೂ, ದೇವರು ಒಬ್ಬನೇ ಆತನ ಧರ್ಮವು ಒಂದೇಯೆಂದು ತಿಳಿಯಬೇಕು. ಹಾಗೆ ತಿಳಿಯದವರು ನಮ್ಮ ಮತ ಧರ್ಮ ಬೇರೆ, ಅವರ ಮತಧರ್ಮವು ಬೇರೆಯೆಂದು, ಉಳಿದ ಮತ ಧರ್ಮಗಳಿಗಿಂತಲೂ ನಮ್ಮ ಮತ ಧರ್ಮವೇ ಉತ್ತಮವಾದುದೆಂದು ಹೇಳಿಕೊಳ್ಳುತ್ತಿರುತ್ತಾರೆ. ಅವರ ಮಾತುಗಳನ್ನು ನಂಬಬೇಡಿರೆಂದು ಖುರಾನ್ ಗ್ರಂಥದಲ್ಲಿ ಹೇಳಿದಂತೆ ಇಲ್ಲಿಯವರೆಗು ನೋಡಿದ್ದೇವೆ.

(5–48) ವಾಕ್ಯದಲ್ಲಿ ಇನ್ನೂ ಸ್ವಲ್ಪ ಬರೆಯಲಾಗಿದೆ. **"ನಿಮ್ಮಲ್ಲಿ ಪ್ರತಿಯೊಂದು ಸಂಘಕ್ಕೆ ಒಂದು ಧರ್ಮ ಶಾಸನವನ್ನು ಮತ್ತು ಒಂದು ಜೀವನ ಮಾರ್ಗವನ್ನು ನೇಮಿಸಿದ್ದೇವೆ. ಒಂದುವೇಳೆ ಅಲ್ಲಾಹ್ ಅಂದುಕೊಂಡರೇ ನಿಮ್ಮನ್ನೆಲ್ಲಾ**

**ಒಂದೇ ಒಂದು ಸಂಘವಾಗಿ ರೂಪಿಸುತ್ತಿದ್ದನು. ಆದರೇ ನಿಮಗೆ ಕೊಟ್ಟಿರುವು ದರೊಂದಿಗೆ (ಧರ್ಮದಿಂದ) ನಿಮ್ಮನ್ನು ಪರೀಕ್ಷಿಸುವುದಕ್ಕೆ ಹಾಗೆ ಮಾಡಿದ್ದಾನೆ. ಆದ್ದರಿಂದ ನೀವು ಒಳ್ಳೆಯ ಕೆಲಸಗಳು ಮಾಡುವುದರಲ್ಲಿ ಒಬ್ಬರೊಂದಿಗೆ ಒಬ್ಬರು ಪೋಟಿ ಬೀಳಿರಿ. ಅಲ್ಲಾಹ್ ಹತ್ತಿರಕ್ಕೇ ನೀವೆಲ್ಲಾ ಹೋಗಬೇಕಾಗಿದೆ. ಆಗ ಆತನು ನಿಮಗಿರುವ ಬೇದಾಭಿಪ್ರಾಯಗಳನ್ನು ಕುರಿತು ನಿಮಗೆ ತಿಳಿಸುತ್ತಾನೆ"** ಎಂದು ವಾಕ್ಯದಲ್ಲಿದೆ. ಮೂರು ಮತಗಳಲ್ಲಿ ನಿನ್ನನ್ನು ಯಾವ ಮತದಲ್ಲಿ ಹುಟ್ಟಿಸಬೇಕೋ ಆ ಮತದಲ್ಲಿಯೇ ದೇವರು ಹುಟ್ಟಿಸಿದ್ದಾನೆ. ದೇವರು ಮೂರು ಮತಗಳು ಇಲ್ಲದೇ ಒಂದೇ ಮತವಾಗಿ ಎಲ್ಲರನ್ನು ಹುಟ್ಟಿಸಬೇಕೆಂದು ಕೊಂಡಿದ್ದರೇ ಭೂಮಿಮೇಲೆ ಮತವಿಲ್ಲದಂತೆ ಮಾಡುತ್ತಿದ್ದನು. ಆದರೇ ನಿಮಗೆ ಕೊಟ್ಟಿರುವ ಮತಧರ್ಮದಿಂದಲೇ ನೀವು ಜೀವಿಸುವುದಕ್ಕೆ ಮಾರ್ಗವನ್ನು ಕಲ್ಪಿಸಿದ್ದಾನೆ. ನಿಮ್ಮನ್ನು ನಿಮಗೆ ಕೊಟ್ಟಿರುವ ಧರ್ಮಗಳಲ್ಲಿಯೇ ನಡೆಯಬೇಕೆಂದಿದ್ದಾನೆ. ಹಾಗಲ್ಲದೇ ಭೇದಾಭಿಪ್ರಾಯಗಳನ್ನು ತೋರಿಸುವವನನ್ನು ದೇವರಬಳಿಗೆ ಹೋದಾಗ ಅವನ ತಪ್ಪನ್ನು ಆಗ ತೋರಿಸುವನು. ಈಗ ಮತಗಳ ಮಧ್ಯೆ ಭೇದಗಳನ್ನು ತೋರಿಸಿದವನಿಗೆ ತಕ್ಕ ಶಿಕ್ಷೆ ದೇವರ ತೀರ್ಪಿನಲ್ಲಿರುತ್ತದೆ. ಈ ವಿಷಯವನ್ನು 5–48 ಆಯತ್‌ನಲ್ಲಿ ಎಲ್ಲರಿಗೂ ಅರ್ಥವಾಗುವಂತೆ ಹೇಳಿದ್ದರೂ, ಅದೂ ಖುರಾನ್ ಗ್ರಂಥದಲ್ಲಿಯೇ ಹೇಳಿದ್ದರೂ ಮುಸ್ಲಿಮ್‌ರು ನಮ್ಮ ಅಂತಿಮ ದೈವಗ್ರಂಥವೇ ಉಳಿದ ಗ್ರಂಥಗಳಿಗಿಂತ ದೊಡ್ಡದೆಂದು, ನಮ್ಮ ಮತವು ದೊಡ್ಡದೆಂದು, ನಿಮ್ಮ ಮತಗಳನ್ನು ಬಿಟ್ಟು ನಮ್ಮ ಮತದಲ್ಲಿ ಸೇರಿರೆಂದು ಹೇಳುವುದನ್ನು ನೋಡಿದರೇ ಅವರು ನಮ್ಮ ಗ್ರಂಥವೆಂದು ಹೇಳಿಕೊಳ್ಳುವ ಖುರಾನ್ ಗ್ರಂಥವನ್ನೇ ಓದಲಿಲ್ಲವೆಂದು ತಿಳಿಯುತ್ತಿದೆ. ಒಂದುವೇಳೆ ಅವರು ಖುರಾನ್ ಗ್ರಂಥವನ್ನು ಓದಿದ್ದರೇ ನಮ್ಮ ಗ್ರಂಥವು ದೊಡ್ಡದೆಂದು, ನಮ್ಮ ಮತವು ದೊಡ್ಡದೆಂದು ಅವರು ಹೇಳುವುದಿಲ್ಲ. ಮರಣಿಸಿದ ನಂತರ ದೇವರ ತೀರ್ಪು ಕಠಿಣವಾಗಿ ಇರುತ್ತದೆಂದು ತಿಳಿಯದವರೇ ಹಾಗೆ ಹೇಳುತ್ತಿರುತ್ತಾರೆ. ಹಾಗೆ ಹೇಳುವವರಿಗೆ ಅವರ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 5–48 ಆಯತ್‌ನ್ನು ಓದಿರೆಂದು ಹೇಳಿರಿ.

# ಗಗನ ಯಾತ್ರೆ (ಮೇರಾಜ್)

**ಪ್ರಶ್ನೆ :– ಮುಸ್ಲಿಮ್‌ರು ಐದು ಹೊತ್ತು ನಮಾಜ್ ಮಾಡುತ್ತಿರುತ್ತಾರೆ. ಎಲ್ಲರೂ ಮಾಡದಿದ್ದರೂ ಕೆಲವರು ವಿಧಿಯಾಗಿ ಐದುಹೊತ್ತು ನಮಾಜ್ ಮಾಡುತ್ತಿರುತ್ತಾರೆ. ಅವರ ಪ್ರಾರ್ಥನೆ (ನಮಾಜ್) ಐದುಹೊತ್ತು ಮಾಡಬೇಕೆಂದು ಹೇಳುತ್ತಿರುತ್ತಾರೆ. ಅದಕ್ಕೆ ಏನಾದರೂ ಕಾರಣವಿದೆಯಾ?**

**ಉತ್ತರ :–** ಹಿಂದೂಗಳಲ್ಲಿ ಪುರಾಣಕಥೆಗಳಿರುವಂತೆ, ಆ ಕಥೆಗಳಲ್ಲಿ ಎಷ್ಟೋ ದೇವತೆಗಳಿರುವಂತೆ, ಆ ದೇವತೆಗಳು ವರಗಳೋ ಅಥವಾ ಶಾಪಗಳೋ ಕೊಡುವವರಿರುವಂತೆ, ಆ ದೇವತೆಗಳ ಶಾಪ ತೀರುವುದಕ್ಕೆ ಇಷ್ಟು ಯಜ್ಞಗಳು ಮಾಡಬೇಕೆಂದೋ ಅಥವಾ ವರಗಳು ನೆರವೇರುವುದಕ್ಕೆ ಇಷ್ಟು ದಿನಗಳು ತಪಸ್ಸು ಮಾಡಬೇಕೆಂದೋ ಹೇಳಿದಂತೆ, ಹಾಗೆಯೇ ಶಾಪಗ್ರಸ್ತರು ತಮ್ಮ ಶಾಪಗಳು ಇಲ್ಲದೇ ಹೋಗುವುದಕ್ಕೆ ಯಜ್ಞಗಳನ್ನು ಮಾಡಿದಂತೆ ಅಥವಾ ವರಗಳಿಗಾಗಿ ತಪಸ್ಸುಗಳು ಮಾಡಿದಂತೆ, ಮುಸ್ಲಿಮ್‌ರಲ್ಲಿ ಕೂಡಾ ಐದು ನಮಾಜುಗಳಿಗೆ ಒಂದು ಪುರಾಣ ಕಥೆಯಂಥದ್ದನ್ನು ಹೇಳಿದ್ದಾರೆ. ಅದನ್ನೇ ಮುಹಮ್ಮದ್ ಪ್ರವಕ್ತರವರ "ಗಗನ ಯಾತ್ರೆ" ಅಥವಾ "ಮೇರಾಜ್" ಎಂದು ಹೆಸರಿಟ್ಟು ಹೇಳಿದ್ದಾರೆ.

ಹಜರತ್ ಮುಹಮ್ಮದ್ (ಸಅಸಂ) ರವರು ಪ್ರವಕ್ತರಾಗಿ 10 ವರ್ಷಗಳು ಕಳೆದಿವೆ. ಈ ಹತ್ತು ವರ್ಷಗಳು ಕೂಡಾ ಅವರು ಧರ್ಮ ಪ್ರಚಾರಕ್ಕಾಗಿಯೇ ವಿನಿಯೋಗಿಸಿದ್ದಾರೆ. ಎಷ್ಟು ಕಷ್ಟಗಳು ಬಂದರೂ ಧೈರ್ಯವಾಗಿ ಎದುರಿಸುತ್ತಾ ಮುಂದಕ್ಕೆ ಸಾಗಿಹೋಗಿದ್ದಾರೆ. ಆದರೆ ಜನಾಬ್ ಅಬೂತಾಲಿಬ್, ಬೀಬೀ ಖತೀಜಾ (ರಜಿ) ರವರ ಮರಣಗಳು ಪ್ರವಕ್ತ (ಸಅಸಂ) ರವರಿಗೆ ಬಹಳ ಬಾಧೆಯನ್ನು ಉಂಟುಮಾಡಿವೆ. ತಾಯಾಫ್‌ರವರು ಇಟ್ಟಿರುವ ಕಷ್ಟಗಳು ಅವರ ಬಾಧೆಯನ್ನು ಇನ್ನು ಹೆಚ್ಚು ಮಾಡಿವೆ. ಜನಾಬ್ ಅಬೂತಾಲಿಬ್, ಬೀಬೀ ಖತೀಜಾ (ರಜಿ) ರವರು ಮರಣಿಸಿದ ವರ್ಷಕ್ಕೆ ಪ್ರವಕ್ತ (ಸಅಸಂ) ಶೋಕ ವರ್ಷ (ಅಮುಲ್ ಹುಜ್ನ್) ಆಗಿ ಪ್ರಶಂಸಿಸಿದ್ದಾರೆ.

ಅದೇ ವರ್ಷವೇ ಒಂದುದಿನ ರಾತ್ರಿ ಮುಹಮ್ಮದ್ (ಸಅಸಂ) ದೈವನಾಮಸ್ಮರಣೆ ನಂತರ, ಕಾಬತುಲ್ಲಾ ಬಳಿ ನಿದ್ರಿಸಿದ್ದಾರೆ. ಇನ್ನೂ ಅವರಿಗೆ ಪೂರ್ತಿಯಾಗಿ ನಿದ್ದೆ ಬರಲಿಲ್ಲ. ಅಷ್ಟರಲ್ಲಿ ಜಿಬ್ರಯೇಲ್ ದೂತ 'ಬುರಾಖ್' ಎನ್ನುವ ಸ್ವರ್ಗ ವಾಹನದಿಂದ ಪ್ರತ್ಯಕ್ಷವಾಗಿ ಅವರನ್ನು ಎಚ್ಚರಗೊಳಿಸಿ, ದೈವ ಆಹ್ವಾನವನ್ನು ತಿಳಿಸಿದ್ದಾರೆ. ನಂತರ ಮುಹಮ್ಮದ್ ಪ್ರವಕ್ತ (ಸಅಸಂ) ನನ್ನು 'ಜಮ್‌ಜಮ್' ಬಾವಿಬಳಿಗೆ ಕರೆದುಕೊಂಡು ಹೋಗಿ, ಅಲ್ಲಿ ಮಲಗಿಸಿ ಅವರ ಎದೆಯನ್ನು ಛೇದಿಸಿ, ಹೃದಯಶುದ್ಧಿ ಗೊಳಿಸಿ, ಅದರಲ್ಲಿ ದಿವ್ಯ ಜ್ಞಾನಜ್ಯೋತಿ ಯನ್ನು ತುಂಬಿ, ಯಥಾರೀತಿ ನಿರ್ವಹಿಸಿದ್ದಾರೆ. ಆ ನಂತರ 'ಬುರಾಖ್' ಏರಿ ತನ್ನನ್ನು ಹಿಂಬಾಲಿಸಬೇಕೆಂದು ಜಿಬ್ರೀಲ್ ದೂತ ಪ್ರವಕ್ತನನ್ನು ಕೋರಿದ್ದಾರೆ. ಮುಹಮ್ಮದ್ ಪ್ರವಕ್ತ (ಸಅಸಂ) 'ಬುರಾಖ್' ಏರಿ 'ಜಿಬ್ರೀಲ್' (ಅ) ಹಿಂದೆ 'ಜೆರೂಷಲೆಮ್' ಹೊರಟಿದರು. ದಾರಿಯಲ್ಲಿ ಅವರು 'ಯಸ್‌ರಬ್' 'ಮದಯಾನ್' 'ಸಿನಾಯ'ದಲ್ಲಿ ಸ್ವಲ್ಪಹೊತ್ತು ನಿಲ್ಲಿಸುತ್ತಾ 'ಜೆರೂಷಲೇಮ್' ನಲ್ಲಿನ 'ಬೈತುಲ್ ಮುಖದ್ದಸ್' ಸೇರಿಕೊಂಡಿದ್ದಾರೆ.

ಅಲ್ಲೊಂದು ದೊಡ್ಡ ಜನ ಸಮೂಹ ಪ್ರವಕ್ತ (ಸಅಸಂ) ಬರುವಿಕೆಗಾಗಿ ಎದುರು ನೋಡುತ್ತಿತ್ತು. ಅವರು ಬಂದ ಕೂಡಲೇ ಆ ಜನಸಮೂಹವೆಲ್ಲ ಹೆಚ್ಚಿನ ಸಂಖ್ಯೆಯಲ್ಲಿ ನಿಂತಿದೆ. 'ಜಿಬ್ರೀಲ್' ದೂತ ಮುಹಮ್ಮದ್ (ಸಅಸಂ) ನನ್ನು 'ಇಮಾಮ್' ಸ್ಥಾನದಲ್ಲಿ ನಿಲ್ಲಿಸಿ ಪ್ರಾರ್ಥನೆಯನ್ನು ನಿರ್ವಹಿಸಬೇಕಾಗಿ ಕೋರಿದ್ದಾರೆ. ಅವರ ಅಭ್ಯರ್ಥನೆಯ ಮೇರೆಗೆ ಮಹಾಪ್ರವಕ್ತ (ಸಅಸಂ) ಎರಡು ವಿಧಗಳ ನಮಾಜನ್ನು ನಿರ್ವಹಿಸಿದ್ದಾರೆ. ಎಲ್ಲರೂ ಮಹಾಪ್ರವಕ್ತರವರ ನಾಯಕತ್ವದಲ್ಲಿ ಪ್ರಾರ್ಥನೆಯನ್ನು ಮುಕ್ತಾಯಗೊಳಿಸಿದರು. ನಂತರ ಜಿಬ್ರೀಲ್ ದೂತ "ರಸೂಲುಲ್ಲಾ! ನಿಮ್ಮ ಹಿಂದೆ ಪ್ರಾರ್ಥನೆಯನ್ನು ನಿರ್ವಹಿಸಿರುವವರೆಲ್ಲರೂ ಯಾರೋ ತಿಳಿದಿದೆಯಾ? ಇವರೆಲ್ಲರೂ ಹಿಂದಿನ ದೈವಪ್ರವಕ್ತರು. ಈದಿನ ಅವರೆಲ್ಲರಿಗೂ ನೀವು ನಾಯಕರಾಗಿದ್ದೀರೆನ್ನುವ ಮಾತು. ಅದನ್ನು ನಿರೂಪಿಸುವುದಕ್ಕೇ ದೇವರು ಈ ಏರ್ಪಾಟನ್ನು ಮಾಡಿದ್ದಾನೆಂದು" ತಿಳಿಸಿದ್ದಾರೆ. ಆ ಮಾತುಗಳು ಕೇಳಿದ ಮಹಾ ಪ್ರವಕ್ತ ಬಹಳ ಸಂತೋಷಿಸಿದರು. ಆ

ನಂತರ ಮುಹಮ್ಮದ್ ಪ್ರವಕ್ತ 'ಬುರಾಖ್' ಏರಿ 'ಜಿಬ್ರೀಲ್' ಹಿಂದೆ ಗಗನ ಪ್ರಯಾಣವನ್ನು ಸಾಗಿಸಿದರು.

ಪ್ರಯಾಣವು ಮಿಂಚಿನಂತೆ ಸಾಗಿಹೋಗುತ್ತಿದೆ. ಆಕಾಶ ಮಾರ್ಗದಲ್ಲಿ ಒಂದುಕಡೆ ಚೆನ್ನಾಗಿ ಸಿಂಗಾರಿಸಿಕೊಂಡ ಒಬ್ಬ ಸುಂದರಾಂಗಿ ಎದುರಾಗಿ, ಮಹಾಪ್ರವಕ್ತ (ಸಅಸಂ) ನನ್ನು ಸನ್ನೆ ಮಾಡಿ ಕರೆದಳು. ಆದರೇ ಅವರು ಆಕೆಯಕಡೆ ನೋಡದೇನೆ ಮುಂದಕ್ಕೆ ಸಾಗಿಹೋದರು. ಅದು ಗಮನಿಸಿದ ಜಿಬ್ರೀಲ್ ದೂತ ಮುಗುಳ್ನಗೆಯಿಂದ 'ರಸೂಲುಲ್ಲಾ! ನೀವು ಆಕೆಯ ಕಡೆ ನೋಡದೆ ಹೋಗುವುದು ಬಹಳ ಒಳ್ಳೆಯದಾಯಿತು. ಇಲ್ಲದಿದ್ದರೇ ನಿಮ್ಮ ಉಮ್ಮತೀಯರೆಲ್ಲರೂ ಆಕೆ ಪ್ರಭಾವಕ್ಕೆ ಒಳಗಾಗಿರುತ್ತಿದ್ದರು" ಎಂದು ವಿವರಿಸಿದ್ದಾರೆ. ಆ ಮಾತುಗಳನ್ನು ಕೇಳಿದ ಮಹಾ ಪ್ರವಕ್ತ (ಸಅಸಂ) "ಈಕೆ ಯಾರು?" ಎಂದು ಪ್ರಶ್ನಿಸಿದರು. "ಈಕೆ ಪ್ರಪಂಚಕ್ಕೆ ಒಂದು ಚಿಹ್ನೆ. ಮಾನವರೆಲ್ಲರನ್ನು ತನ್ನಕಡೆ ಸೆಳೆದುಕೊಳ್ಳುವ ಸ್ವಭಾವ ಆಕೆಗಿದೆ. ಆಕೆಯ ವ್ಯಾಮೋಹಕ್ಕೆ ಒಳಗಾಗದವರು ಧನ್ಯರಾಗುತ್ತಾರೆ" ಎಂದು ಜಬ್ರೀಲ್ (ಅ) ಉತ್ತರ ಕೊಟ್ಟರು. ಹಾಗೆ ಸ್ವಲ್ಪ ದೂರ ಹೋದ ನಂತರ ಕೈಕೋಲು ಸಹಾಯದಿಂದ ನಡೆಯುತ್ತಿರುವ ಒಬ್ಬ ಮುದುಕಿ ಎದುರಾಗಿ ತನ್ನಕಡೆ ಬರಬೇಕಾಗಿ ಪ್ರವಕ್ತ (ಸಅಸಂ) ನನ್ನು ಕೋರಿದಳು. ಆದರೇ ಅವರು ಆಕೆಯ ಕರೆಯನ್ನು ಕೂಡಾ ಖಾತ್ರಿ ಮಾಡದೆ ಮುಂದಕ್ಕೆ ಸಾಗಿಹೋಗಿದ್ದಾರೆ. "ಜಿಬ್ರೀಲ್! ಈ ಮುದುಕಿ ಯಾರು?" ಎಂದು ಪ್ರವಕ್ತ ಪ್ರಶ್ನಿಸಿದರು. ಅದಕ್ಕೆ ಸಮಾಧಾನವಾಗಿ "ಈಕೆ ಕೂಡಾ ಪ್ರಪಂಚಕ್ಕೆ ಮತ್ತೊಂದು ಚಿಹ್ನೆ, ಈಕೆ ವಯಸ್ಸನ್ನನುಸರಿಸಿ ಪ್ರಪಂಚವೊಂದರ ಆಯುವು ಇನ್ನೂ ಎಷ್ಟು ಉಳಿದಿದೆ ಊಹಿಸಿಕೊಳ್ಳಬಹುದು." ಎಂದು ಜಿಬ್ರೀಲ್ ವಿವರಿಸಿದ್ದಾರೆ. ಇನ್ನು ಸ್ವಲ್ಪದೂರ ಹೋದನಂತರ ಒಬ್ಬಯುವಕನು ಎದುರಾಗಿ ತನ್ನಬಳಿಬಂದು ಹೋಗಬೇಕಾಗಿ ಪ್ರವಕ್ತ (ಸಅಸಂ) ನನ್ನು ಕೋರಿದ್ದಾನೆ. ಆದರೆ ಮಹಾಪ್ರವಕ್ತ (ಸಅಸಂ) ಆತನ ಕಡೆ ನೋಡದೇನೇ ತಮ್ಮ ಪ್ರಯಾಣವನ್ನು ಮುಂದುವರೆಸಿದರು. "ಈ ಯುವಕನ್ಯಾರು?' ಎಂದು ಪ್ರವಕ್ತ ಜಿಬ್ರೀಲ್ ದೂತನನ್ನು

ಪ್ರಶ್ನಿಸಿದರು. "ಈತನು ಮಾನವರೆಲ್ಲರನ್ನು ಪಕ್ಕದಾರಿಯನ್ನು ಹಿಡಿಸುತ್ತಿರುವ ಸೈತಾನ್" ಎಂದು ಜಿಬ್ರೀಲ್ ದೂತ ಪ್ರವಕ್ತ (ಸಅಸಂ) ಗೆ ಉತ್ತರ ಕೊಟ್ಟರು.

ಪ್ರಯಾಣವು ಅತಿವೇಗವಾಗಿ ಸಾಗಿತು. ಇನ್ನು ಇಬ್ಬರೂ ಮೊದಲ ಆಕಾಶವನ್ನು ಸೇರಿಕೊಂಡರು. ಜಿಬ್ರೀಲ್ ದೂತ ಆಕಾಶ ದ್ವಾರವನ್ನು ತೆರೆಯಬೇಕಾಗಿರುವುದೆಂದು ದರ್ಬಾನ್ (ದ್ವಾರಪಾಲಕ)ನನ್ನು ಕೋರಿದರು. ದರ್ಬಾನ್ ಬಾಗಿಲುಗಳನ್ನು ತೆರೆದನು. ಮಹಾಪ್ರವಕ್ತ ಮೊದಲ ಆಕಾಶದ ಮೇಲೆ ಹೆಜ್ಜೆ ಇಟ್ಟರು. ಕೂಡಲೇ ಅವರ ದೃಷ್ಠಿ ಎದುರಗಡೆ ಕುಳಿತುಕೊಂಡಿರುವ ಮಹಾಪುರುಷನ ಮೇಲೆ ಬಿದ್ದಿದೆ. ಅವರ ಮುಖವು ತೇಜೋವಂತವಾಗಿ ಪ್ರಕಾಶಿಸುತ್ತಿದೆ. ಅವರಿಗೆ ಎರಡೂ ಕಡೆ ದೊಡ್ಡ ಜನ ಸಮೂಹ ಕುಳಿತುಕೊಂಡಿದೆ. ಆದರೇ ಅವರು ತಮ್ಮ ಬಲಗಡೆಯಿರುವವರನ್ನು ನೋಡಿ ಸಂತೋಷಿಸುತ್ತಿರುವುದು, ಎಡಗಡೆಯಿರುವವರನ್ನು ನೋಡಿ ಬಾಧೆ ಪಡುತ್ತಿರುವುದು ಮಹಾಪ್ರವಕ್ತ ಗಮನಿಸಿ "ಜಿಬ್ರೀಲ್! ಯಾರೀ ಮಹಾನುಭಾವನು? ಏನೀ ವಿಚಿತ್ರ ದೃಶ್ಯ?" ಎಂದು ಪ್ರಶ್ನಿಸಿದರು. ಅದಕ್ಕೆ ಜಿಬ್ರೀಲ್ ದೂತ "ರಸೂಲುಲ್ಲಾ! ಇವರು ನಿಮ್ಮ ತಂದೆಯವರಾದ ಹಜರತ್ ಆದಂ (ಅ) ಅವರಿಗೆ ಎರಡು ಬದಿಯಲ್ಲೂ ಇರುವವರು ಅವರ ಸಂತಾನ. ಬಲಗಡೆಯಿರುವವರು ಪುಣ್ಯಾತ್ಮರು. ಎಡಗಡೆ ಇರುವವರು ಪಾಪಾತ್ಮರು. ಪುಣ್ಯಾತ್ಮರಾದ ತಮ್ಮ ಸಂತಾನವನ್ನು ನೋಡಿ ಆನಂದಿಸುವುದು, ಪಾಪಾತ್ಮರಾದವರನ್ನು ನೋಡಿ ಬಾಧೆಪಡುವುದು ನಡೆಯುತ್ತಿದೆ" ಎಂದು ವಿವರಿಸಿದ್ದಾರೆ. ನಂತರ ಇಬ್ಬರೂ ಹಜರತ್ ಆದಂ ಬಳಿಹೋದರು. ಮುಹಮ್ಮದ್ ಪ್ರವಕ್ತರನ್ನು, ಜಿಬ್ರೀಲ್ ದೂತ ಆದಂ ಅಲೈಹಿಸ್ಸಲಾಂಗೆ ಪರಿಚಯ ಮಾಡಿದ್ದಾರೆ. ಆದಿಮಾನವರಾದ ಹಜರತ್ ಆದಂ ಅಲೈಹಿಸ್ಸಲಾಂ ಮುಹಮ್ಮದ್ ಪ್ರವಕ್ತರಿಗೆ ಮಹಾನಂದದಿಂದ ಸ್ವಾಗತಕೊಟ್ಟು ಗೌರವಿಸಿದರು.

ನಂತರ ಆದಂ ಅಲೈಹಿಸ್ಸಲಾಮ್‌ರೊಂದಿಗೆ ಅನುಮತಿ ತೆಗೆದುಕೊಂಡು, ಇಬ್ಬರೂ ಎರಡನೆಯ ಆಕಾಶವನ್ನು ಸೇರಿಕೊಂಡರು. ಎರಡನೆಯ ಆಕಾಶದಮೇಲೆ ಮುಹಮ್ಮದ್ ಪ್ರವಕ್ತ (ಸಅಸಂ) ಹಜರತ್ "ಈಸಾ" (ಅ), ಹಜರತ್ 'ಎಹ್‌ಯಾ' (ಅ) ಪ್ರವಕ್ತರನ್ನು ಭೇಟಿಯಾದರು.

ಆ ನಂತರ ಮೂರನೆಯ ಆಕಾಶದ ಮೇಲೆ ಕರೆದುಕೊಂಡು ಹೋಗುವುದು ನಡೆದಿದೆ. ಅಲ್ಲಿ ಆತನು (ಸ) ಹಜ್ರತ್ ಯೂಸುಫ್ (ಅ.ಸ) ನನ್ನು ನೋಡಿ ಸಲಾಮ್ ಮಾಡಿದರು. ಆತನಿಗೆ ಉತ್ತರವಾಗಿ ಪ್ರತಿ ಸಲಾಮ್ ಮಾಡುತ್ತಾ ಆತನಿಗೆ ಶುಭಾಕಾಂಕ್ಷೆಗಳು ತಿಳಿಸಿ ಆತನ (ಸ) ದೈವದೌತ್ಯವನ್ನು ದೃಢೀಕರಿಸಿದ್ದಾರೆ.

ಆ ನಂತರ ಆತನನ್ನು (ಸ) ನಾಲ್ಕನೆಯ ಆಕಾಶದ ಮೇಲಕ್ಕೆ ಕರೆದು ಕೊಂಡು ಹೋಗುವುದು ನಡೆಯಿತು. ಅಲ್ಲಿ ದೈವ ಪ್ರವಕ್ತ (ಸ) ಇದ್ರೀಸ್ (ಅ.ಸ.) ನನ್ನು ನೋಡಿ ಸಲಾಮ್ ಮಾಡಿದರು. ಉತ್ತರವಾಗಿ ಇದ್ರೀಸ್ (ಅ.ಸ) ಪ್ರತಿ ಸಲಾಮ್ ಮಾಡುತ್ತಾ ಆತನಿಗೆ ಶುಭಾಕಾಂಕ್ಷೆಗಳು ತಿಳಿಸುತ್ತಾ ಆತನು (ಸ) ದೈವದೌತ್ಯವನ್ನು ದೃಢೀಕರಿಸಿದರು.

ಆ ನಂತರ ಐದನೆಯ ಆಕಾಶಕ್ಕೆ ಹೋದಾಗ, ಅಲ್ಲಿ ಆತನು (ಸ) ಹಜ್ರತ್ ಹಾರೂನ್ ಬಿನ್ ಇಮ್ರಾನ್ (ಅ.ಸ.) ನನ್ನು ನೋಡಿದರು. ಆತನಿಗೆ ಸಲಾಮ್ ತಿಳಿಸಿದರು. ಉತ್ತರವಾಗಿ ಹಾರೂನ್ (ಅ.ಸ.) ಪ್ರತಿ ಸಲಾಮ್ ಮಾಡುತ್ತಾ ಶುಭಾಕಾಂಕ್ಷೆಗಳನ್ನು ತಿಳಿಸುತ್ತಾ ಆತನು (ಸ) ದೈವದೌತ್ಯವನ್ನು ದೃಢಪಡಿಸಿದರು.

ದೈವಪ್ರವಕ್ತ (ಸ) ನನ್ನು ಆರನೆಯ ಆಕಾಶದ ಮೇಲಕ್ಕೆ ಕರೆದುಕೊಂಡು ಹೋದಾಗ, ಅಲ್ಲಿ ಆತನು (ಸ) ಹಜ್ರತ್ ಮೂಸಾ ಬಿನ್ ಇಮ್ರಾನ್ (ಅ.ಸ.) ನನ್ನು ನೋಡುವುದು ನಡೆಯಿತು. ಆತನಿಗೆ ಸಲಾಮ್ ತಿಳಿಸಿದಾಗ ಪ್ರತಿ ಸಲಾಮ್ ಮಾಡುತ್ತಾ ಮರ್ಹಬಾ ಎಂದು ಶುಭಾಶಯಗಳನ್ನು ತಿಳಿಸಿದರು. ಮಹಾಪ್ರವಕ್ತ (ಸ) ರವರ ದೈವದೌತ್ಯವನ್ನು ದೃಢಪಡಿಸುವುದು ನಡೆಯಿತು. ಆದರೇ, ಆತನು ಮುಂದಕ್ಕೆ ನಡೆಯುತ್ತಿರುವಾಗ ಮೂಸಾ (ಅ.ಸ.) ಅಳುವುದಕ್ಕಾರಂಭಿಸಿದರು. ನೀವೇಕೆ ಅಳುತ್ತಿದ್ದೀರೆಂದು ಪ್ರವಕ್ತ (ಸ) ಕೇಳಿದಾಗ, ಆತನು, "ನನ್ನ ನಂತರ ಒಬ್ಬ ಯುವಕನು ಪ್ರಭಾವಿತನಾಗಲ್ಪಟ್ಟಿದ್ದಾನೆ. ಆತನ ಸಮಾಜ, ನನ್ನ ಸಮಾಜಕ್ಕಿಂತಲೂ ಸಂಖ್ಯೆಯಲ್ಲಿ ಅಧಿಕವಾಗಿದ್ದು ಸ್ವರ್ಗ ಪ್ರವೇಶ ಮಾಡುತ್ತದೆ. ಆ ಕಾರಣವಾಗಿ ನನಗೆ ಅಳು ನಿಲ್ಲಲಿಲ್ಲ" ಎಂದು ಹೇಳಿದರು.

ಅಷ್ಟರಲ್ಲಿ ಮುಹಮ್ಮದ್ ಪ್ರವಕ್ತ (ಸಅಸಂ) ಗೆ, ಸ್ವರ್ಗ (ಜನ್ನತ್) ನರಕಂ (ದೋಜಖ್) ಗಳನ್ನು ತೋರಿಸಬೇಕಾಗಿ ಜಿಬ್ರೀಲ್ ದೂತಗೆ ದೈವಾದೇಶ ಆಯಿತು. ದೈವಾದೇಶದ ಮೇರೆಗೆ ಜಿಬ್ರೀಲ್ ದೂತ ಮಹಾಪ್ರವಕ್ತ (ಸಅಸಂ) ನನ್ನು ಮೊದಲು ದೋಜಖ್ ಬಳಿಗೆ ಕರೆದುಕೊಂಡು ಹೋಗಿ, ಪಾಪಾತ್ಮರನುಭವಿ ಸುತ್ತಿರುವ ಶಿಕ್ಷೆಗಳನ್ನು ತೋರಿಸಿದರು. ನರಕ ಬಾಧೆಗಳನ್ನನುಭವಿಸುತ್ತಿರುವ ಜನರನ್ನು ನೋಡಿ ಮಹಾಪ್ರವಕ್ತ ಬಹಳ ಬಾಧೆಪಟ್ಟರು. ನಂತರ ಇಬ್ಬರು ಜನ್ನತ್ ಬಳಿ ಹೋದರು. ಸ್ವರ್ಗ ಲೋಕದಲ್ಲಿ ಪುಣ್ಯಾತ್ಮರು ಅನುಭವಿಸುತ್ತಿರುವ ಸೌಖ್ಯಗಳನ್ನು ನೋಡಿ ಮಹಾಪ್ರವಕ್ತ (ಸಅಸಂ) ಬಹಳ ಆನಂದಿಸಿದರು.

ಆ ನಂತರ ಅಲ್ಲಿನಿಂದ ಹೊರಟು 'ಸಿದ್ ರತುಲ್ ಮುನ್‌ತಹಾ' ಎನ್ನುವ ಸರಹದ್ದನ್ನು ಸೇರಿಕೊಂಡರು. ಜಿಬ್ರೀಲ್ ದೂತ ಆ ಸರಹದ್ದಿನ ಬಳಿಯೇ ನಿಂತುಹೋಗುತ್ತಾ "ರಸೂಲುಲ್ಲಾ! ಇಲ್ಲಿಂದ ನಾನು ಒಂದು ಹೆಜ್ಜೆ ಕೂಡಾ ಮುಂದಕ್ಕೆ ಹಾಕಲಾರೆನು. ಅಷ್ಟು ಶಕ್ತಿ ನನಗಿಲ್ಲ. ಅಸಲು ಇಲ್ಲಿಯವರೆಗು ಈ ಹದ್ದನು ದಾಟಿ ಯಾರೂ ಸಹ ಹೋಗಲಿಲ್ಲ. ಆ ಶಕ್ತಿ ದೇವರು ನಿಮಗೊಬ್ಬರಿಗೇ ಪ್ರಸಾದಿಸಿದ್ದಾನೆ. ಇನ್ನು ನೀವು ಮುಂದಕ್ಕೆ ಹೋಗಬಹುದು" ಎಂದು ತಿಳಿಸಿದರು.

ಮಹಾಪ್ರವಕ್ತ 'ಸಿದ್‌ರತುಲ್ ಮುನ್‌ತಹಾ' ದಿಂದ 'ರಫ್‌ರಫ್' ಎನ್ನುವ ಮತ್ತೊಂದು ವಾಹನದ ಮೇಲೆ ಪಯಣಿಸಿ ದೇವರ ಆಸ್ಥಾನ (ಅರ್ಷ್) ವನ್ನು ಸೇರಿಕೊಂಡರು. ಸರ್ವ ಲೋಕಗಳಿಗೆ ಪ್ರಭುವಾದ ಅಲ್ಲಾಹ್ ತನ್ನ ಪ್ರವಕ್ತನನ್ನು ಸಲಾಮ್ ಮಾಡಿ ಆಹ್ವಾನಿಸಿದನು. ಎಷ್ಟೋ ಅದ್ಭುತಗಳನ್ನು, ಮಹಿಮೆಗಳನ್ನು ತೋರಿಸಿ ಆನಂದಪಡಿಸಿದನು. ಈ ಸಂದರ್ಭದಲ್ಲಿ ಅತಿಮುಖ್ಯವಾದ ಕೆಲವು ಅದೇಶಗಳನ್ನು ಕೂಡಾ ದೇವರು ಅವರಿಗೆ ಒಪ್ಪಿಸಿದನು. ಇದೇ ಸಂದರ್ಭದಲ್ಲಿ 50 ಹೊತ್ತು ನಮಾಜನ್ನು ಕೂಡಾ ಫರಜ್ (ವಿಧಿ) ವಹಿಸಿದ್ದಾರೆ. ಆ ನಂತರ ಮಹಾಪ್ರವಕ್ತ ದೇವರೊಂದಿಗೆ ಅಪ್ಪಣೆ ತೆಗೆದುಕೊಂಡು ಮಹದಾನಂದದಿಂದ ಭೂಲೋಕಕ್ಕೆ ತಿರುಗು ಪ್ರಯಾಣವಾದರು.

ಹಜರತ್ ಮೂಸಾ (ಅ) ಎದುರಾಗಿ ದೇವರ ಆಸ್ಥಾನ ವಿಶೇಷಗಳನ್ನು ವಿವರಿಸಬೇಕಾಗಿ ಕೋರಿದರು. ಮುಹಮ್ಮದ್ ಪ್ರವಕ್ತ (ಸಅಸಂ) ನಡೆದಿರುವುದೆಲ್ಲಾ ಅವರೊಂದಿಗೆ ವಿವರಿಸಿದರು. ಮುಹಮ್ಮದ್ (ಸಅಸಂ) ಗೆ ಲಭ್ಯವಾದ ಔನ್ನತ್ಯಕ್ಕೆ ಮೂಸಾ (ಅ) ಆಶ್ಚರ್ಯಪಟ್ಟರು. ನಂತರ ಮಹಾಪ್ರವಕ್ತ (ಸಅಸಂ) ರೊಂದಿಗೆ "ಆರ್ಯಾ! ನಿಮ್ಮ ಉಮ್ಮತೀಯರು 50 ಹೊತ್ತು ನಮಾಜನ್ನು ಆಚರಿಸಲಾರರು. ಬನೀ ಇಸ್ರಾಯರೊಂದಿಗೆ ನನಗಿರುವ ಅನುಭವದಿಂದ ನಿಮಗೆ ಹೇಳುತ್ತಿದ್ದೇನೆ. ಹೋಗಿ ಅಲ್ಲಾಹ್‌ನನ್ನು ಅರ್ಥಿಸಿ, ನಮಾಜ್ ಸಂಖ್ಯೆಯನ್ನು ತಗ್ಗಿಸಿಕೊಳ್ಳಿ" ಎಂದು ಸಲಹೆ ಕೊಟ್ಟರು. ಮೂಸಾ ಪ್ರವಕ್ತ (ಅ.ಸ.) ಸಲಹೆ ಮೇರೆಗೆ ಮುಹಮ್ಮದ್ ಪ್ರವಕ್ತ (ಸಅಸಂ) ಅಲ್ಲಾಹ್ ಸನ್ನಿಧಿಯನ್ನು ಸೇರಿ ನಮಾಜ್ ಸಂಖ್ಯೆಯನ್ನು ತಗ್ಗಿಸಬೇಕಾಗಿ ಅಭ್ಯರ್ಥಿಸಿದರು (ಕೇಳಿಕೊಂಡರು). ಪ್ರವಕ್ತರ ಅಭ್ಯರ್ಥನೆಯ ಮೇರೆಗೆ ದೇವರು ನಮಾಜ್ ಸಂಖ್ಯೆಯನ್ನು ಅರ್ಧಕ್ಕೆ ತಗ್ಗಿಸಿದನು. ನಮಾಜ್ ಸಂಖ್ಯೆಯನ್ನು ತಗ್ಗಿಸಿಕೊಂಡು ಮಹಾಪ್ರವಕ್ತ ತಿರುಗು ಪ್ರಯಾಣವಾದರು. ಆದರೇ ಅವರಿಗೆ ಮೂಸಾ ಪ್ರವಕ್ತ (ಅ.ಸ.) ಮತ್ತೆ ಎದುರಾಗಿ "25 ಹೊತ್ತು ನಮಾಜನ್ನು ಕೂಡಾ ನಿಮ್ಮ ಉಮ್ಮತೀಯರಿಗೆ ಕಷ್ಟವೇ. ಹೋಗಿ ಇನ್ನೂ ತಗ್ಗಿಸಿಕೊಳ್ಳಿ" ಎಂದು ಸಲಹೆ ಕೊಟ್ಟರು. ಹಾಗೆ ಕೆಲವುಬಾರಿ ನಡೆಯಿತು. ಕೊನೆಗೆ ಐದು ಹೊತ್ತು ನಮಾಜ್ ಮಾತ್ರವೇ ಫರಜ್ ಮಾಡಲಾಯಿತು. ಈ ಐದು ಹೊತ್ತು ನಮಾಜ್‌ಗೆ ಶೇ.ಹತ್ತರಷ್ಟು ಪುಣ್ಯ ಅನುಗ್ರಹಿಸಲ್ಪಡುವುದೆಂಬ ವಾಗ್ದಾನವು ಕೂಡಾ ಅವರಿಗೆ ಲಭ್ಯವಾಯಿತು.

ಇನ್ನು ಮಹಾಪ್ರವಕ್ತ (ಸಅಸಂ), ಮಹಾನಂದದಿಂದ ಬುರಾಖ್ ಮೇಲೆ ಪ್ರಯಾಣ ಮಾಡಿ ಮಕ್ಕಾಗೆ ತಿರುಗಿ ಬಂದುಬಿಟ್ಟರು. ಇದೆಲ್ಲಾ ಕೇವಲ ಆ ರಾತ್ರಿಯಲ್ಲಿನ ಒಂದು ಗಳಿಗೆಯಲ್ಲಿಯೇ ನಡೆದುಹೋಯಿತು.

ಬೆಳಗಾದ ನಂತರ ಮಹಾಪ್ರವಕ್ತ (ಸಅಸಂ) ತಮ್ಮ ಗಗನಯಾನವನ್ನು ಕುರಿತು ಸಹಪಾಠಿಗಳಿಗೆ ಪರಿಚಯ ಮಾಡಿದನು. ಸಹಪಾಠಿಗಳೆಲ್ಲರೂ ಎಂತಹ ಸಂಕೋಚವಿಲ್ಲದೇ ವಿಶ್ವಾಸಿಸುವುದೇ ಅಲ್ಲದೇ, ಮಹಾಪ್ರವಕ್ತರಿಗೆ ಮೇರಾಜ್‌ನಂತಹ ಔನ್ನತ್ಯವನ್ನು ಪ್ರಸಾದಿಸಿರುವುದಕ್ಕೆ ದೇವರಿಗೆ ಕೃತಜ್ಞತೆಯನ್ನು ಸಲ್ಲಿಸಿದರು.

ಇದು ಮುಸ್ಲಿಮ್‌ರಲ್ಲಿ ಹಬ್ಬಿರುವ ಕಥೆ. ಒಂದು ವಿಧವಾಗಿ ಇದೆಲ್ಲವೂ ಸುಮಾರು ಅರ್ಧಗಂಟೆ ಕಾಲ ಅಥವಾ ಅದಕ್ಕಿಂತಲೂ ಕಡಿಮೆ ಸಮಯದಲ್ಲಿ ಒಂದು ದಿನ ರಾತ್ರಿ ಸ್ವಪ್ನದಲ್ಲಿ ನಡೆದ ಸಂಘಟನೆಯಾಗಿದೆ. ಜಾಗ್ರತೆಯಲ್ಲಿ (ಎಚ್ಚರದಲ್ಲಿ) ಆದರೂ, ಕನಸಿನಲ್ಲಾದರೂ ದೇವರ ಆದೇಶವು ಜ್ಞಾಪಕವಿದ್ದರೇ ತಪ್ಪದೇ ಆಚರಿಸಬೇಕಾಗಿರುವುದೇ. ಆದ್ದರಿಂದ ದೈವಾದೇಶದ ಪ್ರಕಾರ ಈದಿನ **ಐದುಹೊತ್ತು ನಮಾಜನ್ನು (ಪ್ರಾರ್ಥನೆಯನ್ನು)** ಆಚರಿಸುವುದು ದೊಡ್ಡ ಕಾರ್ಯವೇ ಆಗುತ್ತದೆ. ದೇವರ ಆಜ್ಞೆಯ ಮೇಲೆ ಎಷ್ಟು ದೊಡ್ಡ ನಂಬಿಕೆ ಇದೆಯೋ ಇದರ ಮೂಲವಾಗಿ ತಿಳಿಯುತ್ತಿದೆ. ಇತರೆ ಮತಗಳಲ್ಲಿ ಇಲ್ಲದ ಪ್ರಾರ್ಥನಾ ವಿಧಾನವನ್ನು ನೋಡಿ ಪ್ರಶಂಶಿಸಬೇಕಾದ್ದೆ. ಈ ಒಂದು ಪ್ರಾರ್ಥನೆಯಲ್ಲಿಯೇ ಉಳಿದವರಿಗಿಂತಲೂ ದೇವರ ಮಾರ್ಗದಲ್ಲಿ ಮುಸ್ಲಿಮ್‌ರು ಬಹಳ ಹತ್ತಿರವಾಗಿ ಇದ್ದಾರೆಂದು ಹೇಳಬಹುದು. ಮುಹಮ್ಮದ್ ಪ್ರವಕ್ತರವರು ಐದುಬಾರಿ ವಿಧಿಯಾಗಿ ಆಚರಿಸುವುದನ್ನು ನೋಡಿದ ಉಳಿದ ಮುಸ್ಲಿಮ್‌ರೆಲ್ಲರೂ ಅದೇ ವಿಧಾನವನ್ನು ಅನುಸರಿಸಿದರು. ಪ್ರವಕ್ತರವರ ಪ್ರಕಾರ ದಿನಕ್ಕೆ ಐದುಬಾರಿ ನಮಾಜ್ ಯಾಕೆ ಮಾಡಬೇಕು? ಎನ್ನುವ ಪ್ರಶ್ನೆಗೆ ಅವರು ಮೇರಾಜ್ (ಗಗನ ಯಾತ್ರೆ) ಕಥೆಯನ್ನು ಹೇಳುತ್ತಿದ್ದಾರೆ.

ಮುಸ್ಲಿಮ್‌ರು ಐದು ನಮಾಜ್‌ಗಳಿಗೆ ಕಾರಣವನ್ನು ಹೇಳಿರುವ ವಿಧಾನದಲ್ಲಿ ಅಂದರೇ ಮುಹಮ್ಮದ್ ಪ್ರವಕ್ತರವರು ಗಗನಯಾತ್ರೆ ಮಾಡಿದಾಗ ನಡೆದ ಸಮಾಚಾರದಲ್ಲಿ **ನಾಲಕ್ಕು** ಅನುಮಾನಗಳು ಬಂದವು. **ಒಂದು,** ಏಳು ಆಕಾಶಗಳ ವಿಷಯದಲ್ಲಿ ಅನುಮಾನ ಬಂದಿದೆ. ಏಳು ಆಕಾಶಗಳು ಮೇಲೆ ಇಲ್ಲ ಅವು ನಮ್ಮ ಶರೀರದಲ್ಲಿಯೇ ಇವೆಯೆಂದು ನಾವು ಬಹಳ ಜನರಿಗೆ ನಿರೂಪಣೆಯಾಗಿ ಹೇಳಿದ್ದೇವೆ. ಅಷ್ಟೇ ಅಲ್ಲದೇ ಖುರಾನ್ ಗ್ರಂಥದಲ್ಲಿ **ಸೂರಾ 2, ಆಯತ್ 186ರಲ್ಲಿ 'ದೇವರು ನಿನಗೆ ಅತ್ಯಂತ ಸಮೀಪದಲ್ಲಿದ್ದಾನೆ. ನೀನು ಹೇಳುವ ಪ್ರತಿಮಾತನ್ನು ಕೇಳಿಸಿಕೊಳ್ಳುತ್ತಿದ್ದಾನೆ'** ಎಂದು ಇದೆ. ಹಾಗಿರುವಾಗ ಎಲ್ಲೋ ಮೇಲೆ ಏಳು ಆಕಾಶಗಳೆನ್ನುವುದರಲ್ಲಿ ಅನುಮಾನ ಬಂದಿದೆ. **ಎರಡು,**

ಎರಡನೆಯ ಆಕಾಶದಲ್ಲಿ ಈಸಾ (ಯೇಸು) ಇದ್ದಾನೆಂದು ಹೇಳುವುದು ಕೂಡಾ ಅನುಮಾನ ಬಂದಿದೆ. ಯೇಸು ದೇವರ ಅವತಾರಗಳಲ್ಲಿ ಎರಡನೆಯ ಅವತಾರವೆಂದು ಕೆಲವು ನಿದರ್ಶನಗಳಿಂದಲೂ ಸಹ ನಾನೇ ಹೇಳಿರುವುದರಿಂದ ಸ್ವಲ್ಪ ಅನುಮಾನ ಬರುವುದು ನಡೆದಿದೆ. **ಮೂರು,** ಆರನೆಯ ಆಕಾಶದಲ್ಲಿ ಮೂಸಾ ಪ್ರವಕ್ತ ಇದ್ದಾನೆಂದು ಹೇಳಿದ್ದಾರೆ. ಮೂಸಾ ಪ್ರವಕ್ತರಿರುವುದೇ ಅಲ್ಲದೇ ಮುಹಮ್ಮದ್ ಪ್ರವಕ್ತನನ್ನು ನೋಡಿ ಕಣ್ಣೀರುಹಾಕಿದ್ದಾನೆಂದು ಓದಿದ್ದೇವೆ. ಮುಹಮ್ಮದ್ ಪ್ರವಕ್ತನನ್ನು ನೋಡಿ ಮೂಸಾ ಅಸೂಯೆಯಿಂದ ಕಣ್ಣೀರುಹಾಕಿದಂತೆ ನನಗೆ ಅರ್ಥವಾಗಿದೆ. ಅದು ಕೂಡಾ ಒಂದು ಅನುಮಾನವೇ! ಮೂಸಾ ಪ್ರವಕ್ತ ಮಹಾಜ್ಞಾನಿಯಾಗಿದ್ದು ಯಾಕೆ ದುಃಖಿಸಿದನು? ಎನ್ನುವ ಸಂಶಯವು ಏರ್ಪಡುತ್ತಿದೆ. ಕೊನೆಯ **ನಾಲ್ಕನೆಯ** ಅನುಮಾನದಲ್ಲಿ ಸಾಕ್ಷಾತ್ತು ಅಲ್ಲಾಹ್ ಏಳನೆಯ ಆಕಾಶದಲ್ಲಿ ಇರುವುದು, ಅಲ್ಲಾಹ್ ಪ್ರವಕ್ತರವರಿಗೆ ಸಲಾಮ್ ಮಾಡುವುದು ಓದಿದ್ದೇನೆ. ಅಲ್ಲಾಹ್‌ಗೆ ಎಲ್ಲರು ಸಲಾಮ್ ಮಾಡಬೇಕೆ ಹೊರತು ಅಲ್ಲಾಹ್ ಸಲಾಮ್ ಮಾಡುವುದೇನು? ಎಂದು ಅನುಮಾನ ಬಂದಿದೆ. ಈ ಅನುಮಾನಗಳನ್ನು ತೀರಿಸುವುದಕ್ಕೆ ಮುಸ್ಲಿಮ್ ಹಿರಿಯರನ್ನೇ ಕೇಳಬೇಕೆಂದು ಕೊಂಡಿದ್ದೇನೆ.

ಒಂದು ದಿನ ಜಮಾಯಾತೆ ಇಸ್ಲಾಮ್ ವರ್ಗಕ್ಕೆ ಸಂಬಂಧಿಸಿದ ಒಬ್ಬ ಮುಸ್ಲಿಮ್ ಹಿರಿಯರನ್ನು ಕೇಳಿದ್ದೇನೆ. ಆತನನ್ನು ಕೇಳಿದರೇ ಮೊದಲಿಗೇ ಮೋಸವೆನ್ನುವಂತೆ ಆತನು **"ಮೇರಾಜ್ (ಗಗನ ಯಾತ್ರೆ) ಎನ್ನುವುದು ನಡೆಯಲಿಲ್ಲ. ಅಲ್ಲಾಹ್ ಅನೇಕಬಾರಿ ನಮಾಜುಗಳನ್ನು ಕುರಿತು ತಗ್ಗಿಸಿ ಹೇಳಲಿಲ್ಲ. ಅಲ್ಲಾ ಮಾತನಾಡಿದ್ದಾನೆಂದರೇ ಅದು ತಪ್ಪಾಗುತ್ತದೆ. ಅಲ್ಲಾಹ್ ಯಾವ ಮನುಷ್ಯರೊಂದಿಗೆ ಮಾತನಾಡುವುದಿಲ್ಲ, ಅಲ್ಲಾಹ್ ಮಾತನಾಡುವುದಿಲ್ಲ ಎಂದು ಖುರಾನ್ ಗ್ರಂಥದಲ್ಲಿಯೇ (3–7) ರಲ್ಲಿ ಹೇಳಲ್ಪಟ್ಟಿದೆ. ಐದು ನಮಾಜುಗಳು ಮುಸ್ಲಿಮ್‌ರು ವಿಧಿಯಾಗಿ ಮಾಡಬೇಕೆನ್ನುವುದು ವಾಸ್ತವವೇ ಆದರೂ ಅದು ಅಲ್ಲಾಹ್ ಹೇಳಿರುವುದಲ್ಲ. ಖುರಾನ್ ಗ್ರಂಥವನ್ನು ಜಿಬ್ರಯೇಲ್ ಹೇಳಿದಾಗಲೇ ಜಿಬ್ರಯೇಲ್**

**ರವರೇ ಐದು ನಮಾಜ್‌ಗಳ ವಿಷಯವನ್ನು ಹೇಳಿರುತ್ತಾನೆ. ಅದು ತಿಳಿಯದೆ ಐದು ನಮಾಜುಗಳ ವಿಷಯವನ್ನು ಒಂದು ಕಥೆಯಾಗಿ ಎಣೆದು ಪ್ರವಕ್ತರವರು ಗಗನ ಯಾತ್ರೆ ಮಾಡಿದಂತೆ, ಜಿಬ್ರಯೇಲ್ ಕರೆದುಕೊಂಡುಹೋದಂತೆ ಬರೆದಿದ್ದಾರೆ. ಅದು ಎಣೆದ ಕಥೆಯೇ ಹೊರತು ನಡೆದ ವಾಸ್ತವವಲ್ಲ. ಮೇರಾಜ್ (ಗಗನ ಯಾತ್ರೆ) ಮೇಲೆ ನಮಗು ಕೂಡಾ ಸಂಶಯವೇ, ಆದರೇ ನಾವು ಮುಸ್ಲಿಮ್ ಮತದಲ್ಲಿದ್ದು ಇಂತಹ ಅನುಮಾನಗಳು ತೋರಿಸಬಾರದು. ನನ್ನಲ್ಲಿರುವ ಸತ್ಯವನ್ನು ನಾನು ಹೇಳಿದ್ದೇನೆ. ಅದಕ್ಕಿಂತಲೂ ನನಗೆ ಹೆಚ್ಚಾಗಿ ಏನು ತಿಳಿದಿಲ್ಲ. ಬೇರೆ ಮುಸ್ಲಿಮ್‌ರನ್ನು ಕೇಳಿದರೂ, ನಾನು ಹೇಳಿರುವುದು ಕೂಡಾ ಹೇಳುವುದಿಲ್ಲ. ಮೇರಾಜ್ ಕಥೆಯೇ ನಿಜವೆನ್ನುತ್ತಾರೆ"** ಎಂದು ಹೇಳಿದ್ದಾನೆ.

ಆ ಮಾತುಗಳನ್ನು ಕೇಳಿದ ನಂತರ ಸತ್ಯವನ್ನು ತಿಳಿಯಬೇಕೆಂಬ ಕುತೂಹಲ ಹೆಚ್ಚಾಯಿತು. ಆಗ ಖುರಾನ್ ಗ್ರಂಥದಲ್ಲಿ ಸೂರಾ ಎರಡು, ಆಯತ್ 186ರಲ್ಲಿ ಅಲ್ಲಾಹ್ (ದೇವರು) ಹೇಳಿರುವ ವಿಷಯ ಜ್ಞಾಪಕ ಬರುವುದು ನಡೆದಿದೆ. ಅದರಲ್ಲಿ **"ದೇವರು ನಿನಗೆ ಅತ್ಯಂತ ಸಮೀಪದಲ್ಲಿದ್ದಾನೆ. ನಿನ್ನಲ್ಲಿನ ಪ್ರತಿಮಾತನ್ನು ಕೇಳುತ್ತಿದ್ದಾನೆ. ಹಾಗೆಯೇ ಅವನು ಕೇಳಿದರೇ ಅವರಿಗೆ ಉತ್ತರ ಕೊಡುತ್ತೇನೆ"** ಎಂದು ಇರುವುದರಿಂದ ನನ್ನ ಪ್ರಶ್ನೆಗೆ ಉತ್ತರ ತಪ್ಪದೆ ದೊರೆಯುತ್ತದೆ ಎನ್ನುವ ನಂಬಿಕೆ ಇರುತ್ತಿತ್ತು. ಆದರೇ ಈ ಮಧ್ಯೆ ಒಂದುದಿನ ನಾನು ಬರೆದಿರುವ **"ನಿಗೂಢ ತತ್ವಾರ್ಥ ಬೋಧಿನಿ"** ಎನ್ನುವ ಗ್ರಂಥವನ್ನು ತೆರೆದು ನೋಡುವುದು ನಡೆದಿದೆ. ಅದರಲ್ಲಿ ಗ್ರಂಥ ತೆರೆಯುತ್ತಲೇ ಒಂದು ಪದ್ಯ ಕಾಣಿಸಿತು. ವೇಮನ ಬರೆದಿರುವ ಆ ಪದ್ಯಕ್ಕೆ ಯಾರೂ ಬರೆಯದ ವಿಧವಾಗಿ ಅರ್ಥವನ್ನು ನಾನೇ ಬರೆದಿದ್ದೇನೆ. ಆ ಪದ್ಯವನ್ನು ನೋಡುತ್ತಲೇ ಮೇರಾಜ್ (ಗಗನ ಯಾತ್ರೆಯಲ್ಲಿ) ನಲ್ಲಿರುವ ಸಂಶಯಗಳೆಲ್ಲವೂ ಒಂದುಬಾರಿ ಇಲ್ಲದಂತಾದವು. ಆಗ ಖುರಾನ್ ಗ್ರಂಥದಲ್ಲಿ (2–186)ರಲ್ಲಿ ಇರುವ ವಾಕ್ಯವು ಪುನಃ ನೆನಪಿಗೆ ಬಂದಿತು. ನಿನ್ನ ಪ್ರಶ್ನೆಗೆ ಉತ್ತರ ದೊರೆಯಿತಾ! ಎನ್ನುವಂತೆ ಖುರಾನ್‌ನಲ್ಲಿನ ಆ ವಾಕ್ಯವು ನೆನಪಿಗೆ ಬರುವುದು ಆಶ್ಚರ್ಯವೆನಿಸಿತು. ಆಗ ದೇವರು ಮನುಷ್ಯರಿಗೆ ಜ್ಞಾನವನ್ನು

ಹೇಗಾದರೂ ತಿಳಿಸುತ್ತಾನೆ ಎಂದು ತಿಳಿಯಿತು. ಆ ಗ್ರಂಥದಲ್ಲಿ ನನಗೆ ಕಾಣಿಸಿದ ಪದ್ಯವು ಅದಕ್ಕಿರುವ ಭಾವನೆಯನ್ನು ಕೆಳಗೆ ತಿಳಿಸುತ್ತಿದ್ದೇನೆ ನೋಡಿರಿ.

**ಅಯಿದು ವರ್ಣಮುಲನೆ ಯಖಿಲಂಬು ತೆಲಿಸಿನ**
**ನಯಿದುನಂದು ಮುಕ್ತಿ ಯಮರಿಯುಂಡು**
**ನಯಿದುಲೋನ ನುನ್ನ ಯತಡೆಪೋ ಯಖಿಲಮು**
**ವಿಶ್ವದಾಭಿರಾಮ ವಿನುರ ವೇಮಾ.**

**ಭಾವಾರ್ಥ :–** ಪ್ರಕೃತಿಯಾದ ಪಂಚಭೂತಗಳಿಂದ ನಿರ್ಮಿಸಲ್ಪಟ್ಟ ಶರೀರದಲ್ಲೇ ಅಖಿಲ ಜೀವರಾಶಿಗಳಿಗೆ ಅಧಿಪತಿಯಾದ ಆತ್ಮನನ್ನು ತಿಳಿಯಬೇಕು. ಪಂಚಭೂತ ನಿರ್ಮಾಣ ಶರೀರಕ್ಕೆ ಹೊರಗೆ ಎಷ್ಟು ಹುಡುಕಿದರೂ ಅಖಿಲ ಜೀವಿಗಳಿಗೆ ಕಾರಣವಾದವನು ತಿಳಿಯುವುದಿಲ್ಲ. ಪಂಚಭೂತಗಳಿಂದ ಪಂಚೀಕರಣ ಹೊಂದಿರುವ ಶರೀರದಲ್ಲಿ ಮೂಲ ಪುರುಷನಾದ ಆತ್ಮನನ್ನು ತಿಳಿದರೆ, ಶರೀರದ ಹೊರಗೆ ಪಂಚಭೂತಗಳಲ್ಲಿ ಅಣುಅಣುವಿನಲ್ಲೂ ವ್ಯಾಪಿಸಿರುವ ಪರಮಾತ್ಮನನ್ನು ತಿಳಿದಂತಾಗುವುದು. ಆದ್ದರಿಂದ "ಐದು ವರ್ಣಗಳೆನ್ನುವ ಅಖಿಲಂಬು ತಿಳಿದಿರುವ ಐದರಲ್ಲಿ ಮುಕ್ತಿ ಒಳಗೊಂಡಿರುವುದು" ಎಂದಿದ್ದಾರೆ.

ಶರೀರಾಂತರ್ಗತದಲ್ಲಿ ಸರ್ವಜೀವಿಗಳಿಗೆ ಕಾರಣವಾದ ಆತ್ಮನನ್ನು ತಿಳಿದರೆ, ಶರೀರದ ಹೊರಗೆ ಇರುವ ಐದು ಭಾಗಗಳಾಗಿರುವ ಪಂಚಭೂತಗಳಲ್ಲಿ ವ್ಯಾಪಿಸಿರುವವನು ತಿಳಿಯುವನು. ಹೊರಗೆ ಐದು ಭಾಗಗಳಲ್ಲಿ ಓಳಗೊಂಡಿರುವ ಪರಮಾತ್ಮಯೇ ಸರ್ವಕ್ಕೆ ಕಾರಣ. ಆದ್ದರಿಂದ "ಐದರಲ್ಲಿರುವ ಅತನೇ ಅಖಿಲವು' ಎಂದಿದ್ದಾರೆ. ಐದು ವರ್ಣಗಳನ್ನು ಶರೀರವಾಗಿ ತಿಳಿಸಿ ಉಳಿದ ಐದು ಭಾಗಗಳನ್ನು ಶರೀರ ಹೊರಗೆ ಪಂಚಭೂತಗಳಾಗಿ ತಿಳಿಯಬೇಕು. ಮಣಿಗಳ ಮಧ್ಯದಲ್ಲಿ ಮಣಿಗಳಿಗೆ ಆಧಾರವಾಗಿರುವ ದಾರ ಕಾಣಿಸದಂತೆ, ಪಂಚಭೂತಗಳಲ್ಲಿಯೇ ಕಾಣಿಸದೆ ವ್ಯಾಪಿಸಿ ಇರುವವನು ಪರಮಾತ್ಮನೆಂದು ತಿಳಿಯಬೇಕು.

ಪದ್ಯವನ್ನು ನೋಡಿದ್ದೀರಲ್ಲವೇ! ಒಂದುಕಾಲದಲ್ಲಿ ಈ ಪದ್ಯಕ್ಕೆ ಮತ್ತು ಕಷ್ಟವಾದ ಅನೇಕ ವೇಮನ ಪದ್ಯಗಳಿಗೆ ವಿವರವನ್ನು ಬರೆದಿರುವವನನ್ನು ನಾನೇ ಆದರೂ ಅದು ಐದು ಹೊತ್ತು ನಮಾಜ್ ವಿಷಯದಲ್ಲಿ ಜ್ಞಾನವನ್ನು ತಿಳಿಸುತ್ತದೆಂದು ಅಂದುಕೊಳ್ಳಲಿಲ್ಲ. ಈಗ ಸಮಯಕ್ಕೆ ಐದುಹೊತ್ತು ನಮಾಜ್‌ಗೆ ಜ್ಞಾನವನ್ನು ತಿಳಿಸಿದೆ. ಅಷ್ಟೇ ಅಲ್ಲದೇ ನಾವು ಬರೆದಿರುವ **"ಆತ್ಮಲಿಂಗಾರ್ಥ"** ಎನ್ನುವ ಗ್ರಂಥದಲ್ಲಿನ "ಪಂಚತತ್ವಗಳನ್ನು ಪಂಚೀಕರಿಸದೆ" ಎನ್ನುವ ಪದ್ಯವು ಕೂಡಾ ಜ್ಞಾಪಕಕ್ಕೆ ಬರುವುದು ನಡೆದಿದೆ. ಆ ಪದ್ಯವು ಕೂಡಾ ನನ್ನ ಪ್ರಶ್ನೆಗಳಿಗೆ ಉತ್ತರಗಳು ದೊರೆಯುವುದರಲ್ಲಿ ಸಹಾಯವನ್ನು ಒದಗಿಸಿದಂತಾಯಿತು. ಕೆಳಗೆ ಆ ಪದ್ಯವನ್ನು, ಅದರ ಭಾವನೆಯನ್ನು ನೋಡಿರಿ.

**ಪಂಚತತ್ತ್ವಮುಲನು ಪಂಚೀಕರಿಂಚಕ**
**ಮಂಚಿಯತುಲಮನ್ನ ಮಾಟಲನ್ನ**
**ಕುಂಚಮಂದು ಗಜಮು ಗ್ರುಡ್ಡು ಪೆಟ್ಟಿನ ವಿಧಂಬು**
**ಅಖಿಲಜೀವಸಂಗ ಆತ್ಮಲಿಂಗ**

**ಭಾವಾರ್ಥ :–** ಸಮಸ್ತ ಶರೀರಗಳಲ್ಲಿ ನಾಶವಾಗುವ ಜೀವಾತ್ಮದೊಂದಿಗೆ ಬೆರೆತು ನಿವಾಸ ಮಾಡುತ್ತಿರುವ ನಾಶವಾಗದ ಓ ಆತ್ಮಾ! ಕೇಳು. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಹೇಗೆ ಸೃಷ್ಟಿಸಲ್ಪಟ್ಟಿವೆ, ಅವು ಒಂದೊಂದು ಯಾವ ವಿಧವಾಗಿ ಐದು ಭಾಗಗಳಾಗಿ ವಿಂಗಡಿಸಲ್ಪಟ್ಟಿರುವುದು, ಹಾಗೆ ವಿಂಗಡಿಸಲ್ಪಟ್ಟ 25 ಭಾಗಗಳು ಒಂದರೊಂದಿಗೆ ಮತ್ತೊಂದು ಬೆರೆತು ಹೇಗೆ ಶರೀರ ಭಾಗಗಳಾಗಿ ಏರ್ಪಟ್ಟಿರುವುದು ತಿಳಿಯುವುದೇ ಸಾಂಖ್ಯ ಎನ್ನುತ್ತೇವೆ. ಪಂಚತತ್ವಗಳನ್ನು ಪಂಚೀಕರಿಸಿ ಸಾಂಖ್ಯವನ್ನು ತಿಳಿಯದವರು ಮತ್ತು ಶರೀರದಲ್ಲಿನ ಆತ್ಮ ತನ್ನ ಶಕ್ತಿಯಿಂದ ಶರೀರ ಭಾಗಗಳನ್ನು ಹೇಗೆ ಕೆಲಸ ಮಾಡಿಸುತ್ತಿದೆಯೊ ತಿಳಿಯದೇನೆ ನಾವು ಜ್ಞಾನಿಗಳೆಂದು ಅಂದುಕೊಂಡರೇ, ಪುಟ್ಟಿಕೆಳಗೆ ಆನೆ ಮೊಟ್ಟೆ ಇಟ್ಟಂತಿರುತ್ತದಂತೆ. ಆನೆಯನ್ನು ಸರಪಳಿಯಿಂದ ಬಂಧಿಸಿ ಪುಟ್ಟಿಕೆಳಗೆ ನಿಲ್ಲಿಸಿದರೂ ಅದು ಮೊಟ್ಟೆ ಇಡುವುದಿಲ್ಲ. ಇದನ್ನನುಸರಿಸಿ ನೋಡಿದರೇ ಆನೆ

ಪುಟ್ಟಿಕೆಳಗೆ ಮೊಟ್ಟೆ ಇಡುವುದು ಎಷ್ಟು ಸುಳ್ಳೋ, ಹಾಗೆಯೇ ಶರೀರ ಅವಯವಗಳ ವಿವರ ತಿಳಿಯದವನು ಜ್ಞಾನಿ ಎನ್ನುವುದು ಕೂಡಾ ಅಷ್ಟೇ ಸುಳ್ಳಾಗುವುದು.

ಈ ವಿಧವಾಗಿ ಐದಕ್ಕೆ ಸಂಬಂಧಿಸಿದ ಆಧ್ಯಾತ್ಮಿಕತೆಯೆಲ್ಲವೂ ಜ್ಞಾಪಕ ಬಂದಾಗ ನಂತರ ಭಗವದ್ಗೀತೆಯಲ್ಲಿರುವ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗದಲ್ಲಿ 24ನೇ ಶ್ಲೋಕವು ಜ್ಞಾಪಕ ಬಂದಿದೆ. ಅದರೊಂದಿಗೆ ಐದು ಹೊತ್ತು ನಮಾಜನ್ನು ಕುರಿತಾದ ಸಂಶಯಗಳೆಲ್ಲವೂ ತೀರಿಹೋಗಿವೆ. ಕೆಳಗೆ ಶ್ಲೋಕವನ್ನು ನೋಡಿರಿ.

**ಶ್ಲೋ॥ 24. ಯ ಏವಂ ವೇತ್ತಿ ಪುರುಷಂ ಪ್ರಕೃತಿಂಚ ಗುಣೈಸ್ಸಹ ।**
**ಸರ್ವಥಾ ವರ್ತಮಾನೋಪಿ ನಸ ಭೂಯೋಭಿಜಾಯತೇ॥**

**ಭಾವಾರ್ಥ :–** "ಪಂಚಭೂತಗಳ ಪ್ರಕೃತಿಯನ್ನು, ಒಬ್ಬನೇ ಆದ ಪುರುಷನನ್ನು ಸಂಪೂರ್ಣವಾಗಿ ತಿಳಿದು, ಪ್ರಕೃತಿ ಗುಣಗಳನ್ನು ಚೆನ್ನಾಗಿ ತಿಳಿದರೇ ಸದಾ ವರ್ತಿಸುವವನಾದರೂ ಅವನಿಗೆ ಕರ್ಮಗಳಂಟುವುದಿಲ್ಲ, ಜನ್ಮಗಳಿರುವುದಿಲ್ಲ".

ಈ ಶ್ಲೋಕವನ್ನು ಅದರ ಭಾವನೆಯನ್ನು ಭಗವದ್ಗೀತೆಯಲ್ಲಿ ಒರೆಕಲ್ಲಾಗಿ ಕಾಣಿಸಿದೆ. ಒರೆಕಲ್ಲಿನ ಮೂಲಕ ಯಾವುದರಲ್ಲಾದರೂ ಜ್ಞಾನವನ್ನು, ಅಜ್ಞಾನವನ್ನು ತಿಳಿಯಬಹುದು. ಈ ವಿಧವಾಗಿ ಒಂದೊಂದು ಐದಕ್ಕೆ ಸಂಬಂಧಿಸಿದ ಅಂದರೇ ಪ್ರಕೃತಿಗೆ ಸಂಬಂಧಿಸಿದ ಜ್ಞಾನವೆಲ್ಲವೂ ಜ್ಞಾಪಕ ಬಂದಾಗ, ಕೊನೆಯದಾಗಿ ಪಂಚ ಅಕ್ಷರವಾದ **"ಓಂ"** ಜ್ಞಾಪಕ ಬಂದಿದೆ. ಪಂಚ ಎಂದರೇ ಐದು ಭಾಗಗಳಾಗಿ ಇರುವ ಪ್ರಕೃತಿ. ಅಕ್ಷರ ಎಂದರೇ ನಾಶವಾಗದ ಆತ್ಮವೆಂದು ಹೇಳಬಹುದು. ಪಂಚಾಕ್ಷರಿ ಎಂದರೇ ಪ್ರಕೃತಿಗೆ ನಾಶವಾಗದಿರವುದೆಂದು ಅರ್ಥ. ಪಂಚಭೂತ ಗಳಾಗಿರುವ ಪ್ರಕೃತಿಗೆ ನಾಶವಾಗದಿರುವುದು ಅಕ್ಷರನು, ಅಕ್ಷರನನ್ನೇ ಆತ್ಮ ಎಂದು ಹೇಳುತ್ತಿದ್ದೇವೆ. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದಕ್ಕೆ ಜೀವಿಯು ನಾಶವಾಗುತ್ತಿದ್ದಾನೆ. ಆದ್ದರಿಂದ **ಜೀವಿಯನ್ನು ಕ್ಷರನು** ಎಂದು ಕರೆಯುತ್ತಿದ್ದೇವೆ. ಪಂಚಭೂತಗಳಿಗೆ ನಾಶವಾಗದವನನ್ನು ದೇವರು ಎಂದು ಹೇಳಬಹುದು ಅಥವಾ ಆತ್ಮ ಎಂದು ಕೂಡಾ ಕರೆಯಬಹುದು.

ಸರ್ವಜೀವರಾಶಿಗಳಿಗೆ ಸಾವುಹುಟ್ಟುಗಳನ್ನು ಈ ಐದು ಭಾಗಗಳಾಗಿರುವ ಪ್ರಕೃತಿಯೇ ಮಾಡುತ್ತಿರುತ್ತದೆ. ಅದಕ್ಕೆ ಕಾರಣಭೂತನಾಗಿ ಮತ್ತು ಸಾಕ್ಷಿ ಭೂತನಾಗಿ ದೇವರಿರುತ್ತಾನೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ ಆರನೆಯ ಶ್ಲೋಕದಲ್ಲಿ ಹೇಳಿದ್ದಾರೆ, ನೋಡಿರಿ.

**ಶ್ಲೋಕ॥ 6. ಏತ ದ್ಯೋನೀನಿ ಭೂತಾನಿ ಸರ್ವಾಣೀ ತ್ಯುಪಧಾರಯ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ॥**

**ಭಾವಾರ್ಥ :–** "ಸರ್ವ ಜೀವರಾಶಿಗಳಿಗೆ ಜನ್ಮವನ್ನು ಈ ಪ್ರಕೃತಿಯೇ ಮಾಡುತ್ತಿರುತ್ತದೆ. ನಾನು ಜೀವರಾಶಿಗಳ ಸಾವುಹುಟ್ಟುಗಳಿಗೆ ಕಾರಣವಾಗಿದ್ದೇನೆ. ಕಾರ್ಯವಾಗಿ ಐದು ಭಾಗಗಳಾಗಿರುವುದು ಪ್ರಕೃತಿಯೇ ಎಂದು ತಿಳಿಯಬೇಕು."

ಪಂಚಭೂತಗಳ ಪ್ರಕೃತಿಗೆ ನಾಶವಾಗದವನನ್ನು ಕುರಿತು ಅಂದರೇ ಆತ್ಮಗೆ ಗುರುತಾಗಿ ಅಥವಾ ದೈವಕ್ಕೇ ಗುರುತಾಗಿ **"ಓಂ"** ಎನ್ನುವ ಅಕ್ಷರವನ್ನು ಶಬ್ದ ರೂಪವಾಗಿರುವುದನ್ನು ಗುರುತಾಗಿ ಇಟ್ಟುಕೊಂಡಿದ್ದೇವೆ. ಹಾಗೆಯೇ ಪಂಚಭೂತಗಳಿಗೆ ಅಂದರೇ ಜೀವಿಗಳನ್ನು ನಾಶಮಾಡುವ ಪ್ರಕೃತಿ ಭಾಗಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವವುಗಳಿಗೆ ಒಂದೊಂದಕ್ಕೆ ಒಂದೊಂದು ಶಬ್ದರೂಪವಾದ ಅಕ್ಷರವನ್ನು ಗುರುತಾಗಿ ಇಟ್ಟುಕೊಂಡಿದ್ದೇವೆ. ಪಂಚ ಭೂತಗಳಿಗೆ ಪಂಚ (ಐದು) ಗುರುತುಗಳಿವೆ. ಅವು ಕ್ರಮವಾಗಿ ಹೀಗಿವೆ.

| | | |
|---|---|---|
| **ಆಕಾಶಕ್ಕೆ** | **–** | **ನ** |
| **ಗಾಳಿ** | **–** | **ಮಃ** |
| **ಅಗ್ನಿ** | **–** | **ಶಿ** |
| **ನೀರು** | **–** | **ವಾ** |
| **ಭೂಮಿ** | **–** | **ಯ** |

ಐದಕ್ಕೆ ನಾಶವಾಗದವನು ಆತ್ಮ (ಅಕ್ಷರನಿ) ಗೆ ಗುರುತು **"ಓಂ"**. ಈ ವಿಧವಾಗಿ ಹೇಳಿಕೊಂಡರೇ ಐದಕ್ಕೆ ನಾಶವಾಗದವನನ್ನು ಪಂಚಾಕ್ಷರಿ ಎನ್ನುತ್ತಿದ್ದೇವೆ. ಪಂಚ+ಅಕ್ಷರಿ=ಐದಕ್ಕೆ ನಾಶವಾಗದಿರುವುದು ಆತ್ಮವೆಂದು ಅರ್ಥ. ಅದನ್ನೇ **"ಓಂ ನಮಃ ಶಿವಾಯ"** ಎಂದು ಕರೆಯುತ್ತಿದ್ದೇವೆ. ಐದು ಭೂತಗಳನ್ನು ವಿಂಗಡಿಸಿ ಆಕಾಶಕ್ಕೆ ನಾಶವಾಗದವನು ಆತ್ಮ ಎಂದೂ, ಗಾಳಿಗೆ ನಾಶವಾಗದಿರುವವನು ಆತ್ಮ ಎಂದೂ, ಹೀಗೆ ಉಳಿದ ಮೂರಕ್ಕು ನಾಶವಾಗದವನು ಆತ್ಮ ಎಂದು ಹೇಳುತ್ತಾ, ಆತನಿಗೆ ನನ್ನ ಪ್ರಾರ್ಥನೆ ಎಂದು ಹೇಳುತ್ತಿದ್ದೇವೆ. ಅದನ್ನು ಆಚರಣೆಯಲ್ಲಿ **ಆಕಾಶಕ್ಕೆ ನಾಶವಾಗದವನಿಗೆ ಇದೇ ನನ್ನ ಪ್ರಾರ್ಥನೆ ಎಂದು ಬೆಳಗಾಗುವ ಮೊದಲೇ ಪ್ರಾರ್ಥನೆ ಪ್ರಾರಂಭಿಸಿ, ನಂತರ ಗಾಳಿಗೆ ನಾಶವಾಗ ದವನಾಗಿರುವ ದೈವಕ್ಕೆ ನನ್ನ ಪ್ರಾರ್ಥನೆ ಎಂದು ಎರಡನೆಯ ಪ್ರಾರ್ಥನೆ, ಅಗ್ನಿಗೆ ನಾಶವಾಗದವನಿಗೆ ನನ್ನ ಪ್ರಾರ್ಥನೆ ಎಂದು ಮೂರನೆಯ ಪ್ರಾರ್ಥನೆ. ನೀರಿಗೆ ನಾಶವಾಗದ ಆತ್ಮಗೆ ಪ್ರಾರ್ಥನೆ ಎಂದು ನಾಲ್ಕನೆಯ ಪ್ರಾರ್ಥನೆ, ಹಾಗೆಯೇ ಭೂಮಿಗೆ ನಾಶವಾಗದ ಅಕ್ಷರ ಪುರುಷನಿಗೆ ನನ್ನ ಪ್ರಾರ್ಥನೆ ಎಂದು ಐದನೆಯ ಪ್ರಾರ್ಥನೆ ಮಾಡುವುದು ಮೊದಲು ಕೃತ ಯುಗದಲ್ಲಿಯೇ ಇರುತ್ತಿತ್ತು.** ಕೃತಯುಗದಿಂದ ದ್ವಾಪರ ಯುಗದವರೆಗು ಮತಗಳಿಲ್ಲ. ಇಂದೂಸಮಾಜ ಒಂದೇ ಇತ್ತು. ಇಂದೂ ಸಮಾಜದಲ್ಲಿ ಮೊದಲು ಕೃತಯುಗದಲ್ಲಿ ಐದು ಪ್ರಾರ್ಥನೆಗಳಿದ್ದವು. ಯಜ್ಞಗಳು, ವೇದಾಧ್ಯಯನಗಳು, ತಪಸ್ಸುಗಳು ಇರುತ್ತಿರಲಿಲ್ಲ. ಶಬ್ದ, ರೂಪ, ಸ್ಪರ್ಶಗಳಿಲ್ಲದ ಏಕಾಗ್ರತೆ ಚಿಂತನೆ ಹೊರತು ಏನು ಇರುತ್ತಿರಲಿಲ್ಲ. ಪ್ರಕೃತಿಗೆ ಅತೀತನಾದ ದೇವರನ್ನು ಐದು ಭಾಗಗಳಾಗಿರುವ ಪ್ರಕೃತಿಯಿಂದ ಪೂಜಿಸುತ್ತಿದ್ದೇವೆಂದು ಐದುಬಾರಿ ಏಕಾಗ್ರತೆಯಿಂದ ಇರುತ್ತಿದ್ದರು. ಏಕಾಗ್ರತೆಯನ್ನು ಬೇರ್ಪಡಿಸಿ ನೋಡಿದರೇ ಏಕ+ಅಗ್ರತೆ=ಏಕಾಗ್ರತೆ. ಏಕ ಎಂದರೇ ಒಂದೆಂದು ಅಗ್ರತಾ ಎಂದರೆ ಒಂದಕ್ಕಿಂತಲೂ ಮೊದಲಿನದ್ದು, ಅಥವಾ ಒಂದರ ಮೇಲಿರುವುದು ಸೊನ್ನೆ ಎಂದು ಅಥವಾ ಶೂನ್ಯವೆಂದು ಅರ್ಥ. ಶೂನ್ಯವಾದ ಮನಸ್ಸು ಹೊಂದಿರುವುದೇ ಆದಿನದ ಪ್ರಾರ್ಥನೆ. ಮನಸ್ಸಿನಲ್ಲಿ ಯಾವ ಚಿಂತೆ, ಯಾವ ಜ್ಞಾಪಕ ಇಲ್ಲದೇ ಇರುವುದನ್ನು **ಏಕಾಗ್ರತೆ ಪ್ರಾರ್ಥನೆ ಅಥವಾ ಏಕಾಂತ ಪ್ರಾರ್ಥನೆ**

ಎಂದು ಅನ್ನುತ್ತಿದ್ದರು. ಆ ವಿಧವಾಗಿ ದಿನಕ್ಕೆ ಐದುಬಾರಿ ಏಕಾಗ್ರತೆ ಪ್ರಾರ್ಥನೆ ಮಾಡುವುದು ಕೃತಯುಗದಲ್ಲಿನ ಜ್ಞಾನದಲ್ಲಿತ್ತು. ಕಾಲಕಳೆದಂತೆಲ್ಲಾ ಏಕಾಗ್ರತೆ ಪ್ರಾರ್ಥನೆ, ಐದುಬಾರಿ ಪ್ರಾರ್ಥನೆ ಇಲ್ಲದೇ ಹೋಗಿದೆ.

ಕೃತಯುಗದಲ್ಲಿ ಪ್ರಾತಃಕಾಲ ಪ್ರಾರ್ಥನೆಯಿಂದ ಆರಂಭಿಸಿ ಸೂರ್ಯಾಸ್ತಮಯದೊಳಗೇ ಐದು ಪ್ರಾರ್ಥನೆಗಳು ಮಾಡುತ್ತಿದ್ದರು. ಬೆಳಗಾಗುವ ಮೊದಲೇ ಒಂದು ಪ್ರಾರ್ಥನೆ ನಂತರ ನಾಲಕ್ಕು ಪ್ರಾರ್ಥನೆಗಳು ಹಗಲು ಮಾಡುತ್ತಿದ್ದರು. ಅದು ಅಂದಿನ ಇಂದೂಗಳ ಪ್ರಾರ್ಥನೆಗಳಾಗಿದ್ದವು. ನಂತರ ಅವು ಹೋಗಿ ಅವುಗಳ ಸ್ಥಾನದಲ್ಲಿ ಯಜ್ಞ, ದಾನ, ವೇದ, ತಪಸ್ಸುಗಳು ಬಂದಿವೆ. ಏಕಾಗ್ರ ಪ್ರಾರ್ಥನೆ ಇಲ್ಲದೇ ಹೋಗಿದೆ. ಕೃತಯುಗದಲ್ಲಿ ಐದು ಆರಾಧನೆಗಳು ಸೂರ್ಯನ ಮೂಲಕ ಬಂದಿರುವವೇಯೆಂದು ಅದಕ್ಕು ಮೊದಲು ಅವು ಇಲ್ಲವೆಂದು ತಿಳಿಯುತ್ತಿದೆ. ಸಾಧಾರಣ ಮನುಷ್ಯರು ಕೂಡಾ ಆ ದಿನಗಳಲ್ಲಿ ಐದು ಆರಾಧನೆಗಳು ಮಾಡುತ್ತಿದ್ದರು. ಸೂರ್ಯನು ಆದಿಯಲ್ಲಿ ಮನುವಿಗೆ ಹೇಳಿರುವ ಜ್ಞಾನದಲ್ಲಿ **ಬ್ರಹ್ಮಯೋಗವು, ಕರ್ಮಯೋಗವು, ಭಕ್ತಿಯೋಗವನ್ನು** ಕುರಿತು ಹೇಳಿದ್ದಾನೆ. ಮೊದಲನೆಯದಾದ ಬ್ರಹ್ಮಯೋಗವನ್ನೇ ಆ ದಿನಗಳಲ್ಲಿ ಐದುಬಾರಿ ಮಾಡುತ್ತಿದ್ದರು. ಐದು ಬಾಹ್ಯೇಂದ್ರಿಯಗಳನ್ನು ಅಡಗಿಸಿ ಮಾಡುವ ಪ್ರಾರ್ಥನೆಗೆ ಬ್ರಹ್ಮಯೋಗವೆಂದು ಹೆಸರಿಡಲ್ಪಟ್ಟಿದೆ. ಐದು ಜ್ಞಾನೇಂದ್ರಿಯಗಳ ಸಂಬಂಧವಿಲ್ಲದೇ ಮಾಡುವ ಯೋಗ ಐದುಸಲ ಮಾಡುವುದು ಕೃತಯುಗದಲ್ಲಿ ಇರುತ್ತಿತ್ತು. ಆಗ ಬ್ರಹ್ಮಯೋಗವನ್ನು ಕುರಿತು ಹೇಳಿರುವವನು ಸೂರ್ಯನೇ. ಅದೇ ಸೂರ್ಯನೇ ಕಲಿಯುಗದಲ್ಲಿ ಮುಹಮ್ಮದ್ ಪ್ರವಕ್ತರವರಿಗೆ ಜಿಬ್ರಯೇಲ್ ಎನ್ನುವ ಹೆಸರಿನಿಂದ ಜ್ಞಾನವನ್ನು ಹೇಳುವುದಾಗಿದೆ. ಆಗ ತಾನು ಪೂರ್ವದಲ್ಲಿ ಹೇಳಿರುವ ಬ್ರಹ್ಮಯೋಗವನ್ನೇ ಹೇಳಿದ್ದಾನೆ. ಪೂರ್ವವು ಐದುಬಾರಿ ಮಾಡಿರೆಂದು ಹೇಳಿರುವುದು ಇಂದಿನ ಜಿಬ್ರಯೇಲ್ ಆದ್ದರಿಂದ ಈಗ ಕೂಡಾ ಅದೇ ವಿಷಯವನ್ನು ಹೇಳಿದಂತೆ ಅರ್ಥವಾಗುತ್ತಿದೆ. ಆದರೇ ಐದುಹೊತ್ತು ಪ್ರಾರ್ಥನೆಯನ್ನು ಮಾಡುತ್ತಿದ್ದರೂ ಐದು ಜ್ಞಾನೇಂದ್ರಿಯಗಳಿಗೆ ಸಂಬಂಧವಿಲ್ಲದೇ

ಮಾಡುತ್ತಿಲ್ಲ. ಆದ್ದರಿಂದ ಪ್ರಾರ್ಥನೆಯಲ್ಲಿನ ಅಸಲಾದ ವಿಷಯವಾಗಲೀ, ಅರ್ಥವಾಗಲೀ ತಿಳಿಯದೇ ಹೋಗಿದೆ. ಆದ್ದರಿಂದ ಈದಿನ ಮಾಡುತ್ತಿರುವ ಪ್ರಾರ್ಥನೆ ತಪಸ್ಸಿನ ಕೆಳಗೆ ಜಮಕಟ್ಟಲಾಗುತ್ತಿದೆ. ಯೋಗದ ಕೆಳಗೆ ಜಮ ಕಟ್ಟಲ್ಪಡಲಿಲ್ಲ. ಸೂರ್ಯನೇ ಕೃತಯುಗದಲ್ಲಿ ಮನುವಿಗೆ, ಕಲಿಯುಗದಲ್ಲಿ ಮುಹಮ್ಮದ್ ಪ್ರವಕ್ತರಿಗೆ ಜ್ಞಾನವನ್ನು ಹೇಳುವುದಾಗಿದೆ. ಆದರೇ ಜಿಬ್ರಯೇಲ್‌ಯೇ ಸೂರ್ಯನೆಂದು, ಸೂರ್ಯನೇ ಜಿಬ್ರಯೇಲ್ ಎಂದು ಯಾರಿಗೂ ಗೊತ್ತಿಲ್ಲ. ಸೂರ್ಯನು ಜಿಬ್ರಯೇಲ್ ಒಂದೇ ಎಂದು ನನಗೆ ಮೊದಲೇ ಗೊತ್ತು, ಆದ್ದರಿಂದ ಐದು ಹೊತ್ತಿನ ನಮಾಜ್ ವಿಷಯವು ಸೂರ್ಯನು ಹೇಳಿರುವುದೇ ಎಂದು ತಿಳಿದು ಹೋಯಿತು. ಆದರೇ ಪೂರ್ವವಿರುವ ಏಕಾಗ್ರತೆ ಇಂದಿನ ಪ್ರಾರ್ಥನೆಯಲ್ಲಿ ಇಲ್ಲದೇ ಹೋಗಿದೆ. ಇಷ್ಟು ಕೇಳಿದ ನಂತರ ನಾವು ನಿಮ್ಮ ಮಾತು ಕೇಳುವುದಿಲ್ಲ ಎಂದು ಕೆಲವರು ಹೇಳಬಹುದು. ಆದರೇ ನನ್ನ ಮಾತನ್ನು ಕೇಳಿರೆಂದು ನಾನು ಹೇಳಲಿಲ್ಲ ಅಲ್ಲವೇ! ಯಾರಿಗೆ ದೇವರು ಎಷ್ಟು ತಿಳಿಸಿದರೇ ಅಷ್ಟೇ ಅರ್ಥವಾಗುತ್ತದೆ ಎಂದು ನಾನು ಅಂದುಕೊಳ್ಳುತ್ತಿದ್ದೇನೆ.

**ಪ್ರಶ್ನೆ :– ಪೂರ್ವವಿದ್ದು ಇಲ್ಲದೇ ಹೋಗಿರುವ ಐದು ಆರಾಧನೆಗಳು, ಅಧರ್ಮಗಳು ಅಭಿವೃದ್ಧಿ ಹೊಂದಿದಾಗ ಇಲ್ಲದೇ ಹೋಗಿರಬಹುದು. ದೇವರು ಭಗವಂತನಾಗಿ ಅವತರಿಸಿ ಧರ್ಮಗಳನ್ನು ನೆಲೆಗೊಳಿಸಿದ ನಂತರ ಜ್ಞಾನವೆಲ್ಲಾ ಬೆಳಕಿಗೆ ಬಂದಂತೆ, ಐದು ಆರಾಧನೆಗಳು ಕೂಡಾ ಜಾರಿಗೆ ಬಂದಿರಬೇಕು ಅಲ್ಲವೇ! ಕೃಷ್ಣನು ಭಗವಂತನಾಗಿ ಬಂದು ಹೋದಾಗಾಗಲೀ, ಯೇಸುಆಗಿ ಬಂದಾಗಾಗಲೀ ಪೂರ್ವ ವಿರುವ ಐದು ಆರಾಧನೆಗಳನ್ನು ಹೇಳಲಿಲ್ಲ ಅಲ್ಲವೇ! ಎರಡು ಸಲ ಬಂದಾಗ ಹೇಳಲಿಲ್ಲ. ಹಾಗೆಯೇ ದೈವಗ್ರಂಥಗಳು ಮೂರೂ ಬಂದಿವೆ. ಆ ಮೂರಲ್ಲಿ ಕೂಡಾ ಹೇಳಲಿಲ್ಲ. ಹಾಗಿರುವಾಗ ಮೊದಲ ಆರಾಧನೆಗಳ ವಿಷಯವು ಹೇಗೆ ತಿಳಿಯುತ್ತದೆ?**

**ಉತ್ತರ :–** ಸಂಪೂರ್ಣ ಜ್ಞಾನವು ದೇವರ ಮೂರು ಅವತಾರಗಳಲ್ಲಿ ಹೇಳುತ್ತಾನೆ. ಒಂದು ಅವತಾರದಲ್ಲಿ ಹೇಳಿರುವುದು ಮತ್ತೊಂದು ಅವತಾರದಲ್ಲಿ ಹೇಳಬಹುದು, ಹೇಳದೇ ಹೋಗಬಹುದು. ಎರಡು ಅವತಾರಗಳಲ್ಲಿ ಹೇಳದಿದ್ದರೂ ಮೂರನೆಯ

ಅವತಾರದಲ್ಲಿ ಆತನು ಹೇಳುತ್ತಾನೆ. ಗ್ರಂಥಗಳ ವಿಷಯಕ್ಕೆ ಬಂದರೇ ಒಂದು ಗ್ರಂಥದಲ್ಲಿ ಬರೆದಿರುವುದು ಮತ್ತೊಂದು ಗ್ರಂಥದಲ್ಲಿ ಇಲ್ಲದೇ ಹೋಗಬಹುದು. ಆದರೇ ಮೂರು ಗ್ರಂಥಗಳಲ್ಲಿ ಯಾವುದೋ ಒಂದುಕಡೆ ಇರುತ್ತದೆ. ಐದು ಆರಾಧನೆಗಳ ವಿಷಯಕ್ಕೆ ಬಂದರೇ ಮೊದಲ ಎರಡು ಗ್ರಂಥಗಳಲ್ಲಿ ಹೇಳದಿದ್ದರೂ ನಂತರ ಮೂರನೆಯ ಗ್ರಂಥ ಖುರಾನ್‌ನಲ್ಲಿ ಹೇಳಿದ್ದಾರಲ್ಲವೇ! ಆದರೇ ಅದು ಅರ್ಥವಾಗದೇನೋ, ಅವಗಾಹನೆ ಇಲ್ಲದೇನೋ ಪ್ರಾರ್ಥನೆಯಲ್ಲಿ ಏಕಾಗ್ರತೆ ಇಲ್ಲದೇ ಹೋಗಿದೆ. ನಮಾಜ್ ತನ್ನ ಅರ್ಥವನ್ನು ಕಳೆದುಕೊಂಡು ಬದಲಾವಣೆ ಹೊಂದಿ ತಪಸ್ಸಿನಹಾಗೆ ಇದೆ. ಇದು ಗ್ರಂಥಗಳಲ್ಲಿನ ವಿಷಯವಾಗಿರುವಾಗ, ದೇವರು ಭಗವಂತನಾಗಿ ಮೂರುಸಲ ಬರಬೇಕಾಗಿದೆ. ಇಲ್ಲಿಗೆ ಎರಡುಸಲ ಬಂದರೂ, ಐದು ಆರಾಧನೆಗಳನ್ನು ಕುರಿತು ಏನು ಹೇಳಲಿಲ್ಲ. ಕೊನೆಯದಾಗಿ ಮೂರನೆಯ ಅವತಾರದಲ್ಲಿ ತಪ್ಪದೇ ಐದು ಆರಾಧನೆಗಳನ್ನು, ಅವುಗಳ ವಿಧಾನವನ್ನು ಪೂರ್ತಿಯಾಗಿ ಹೇಳುತ್ತಾನೆಂದು ಅಂದುಕೊಳ್ಳೋಣ.

## ಅಂತಿಮ ಗಳಿಗೆ ತೀರ್ಪು

**ಪ್ರಶ್ನೆ :– ಬಹಳಜನ ಮುಸ್ಲಿಮ್‌ರು ಹೇಳುವ ವಿಧಾನದಲ್ಲಿ ಮನುಷ್ಯ ಮರಣಿಸಿದ ನಂತರ ಆತನು ಹೂತಿಡಲಾದ ಸಮಾಧಿಯಲ್ಲಿಯೇ ಇರುತ್ತಾನೆ. ಹಾಗೆ ಮರಣಿಸಿದವರೆಲ್ಲ ಇರುತ್ತಾರೆ. ಯಾವುದೋ ಒಂದು ದಿನ ಪ್ರಳಯ ಏರ್ಪಟ್ಟಾಗ ಮರಣಿಸಿದವರೆಲ್ಲರನ್ನು ಸಮಾಧಿಗಳಿಂದ ದೇವರು ಎಬ್ಬಿಸುತ್ತಾನೆ. ಆ ದಿನ ಮನುಷ್ಯ ತನ್ನ ಜೀವನದಲ್ಲಿ ಮಾಡಿಕೊಂಡ ಪಾಪಪುಣ್ಯಗಳನ್ನು ಲೆಕ್ಕಹಾಕಿ ಪಾಪವನ್ನು ಮಾಡಿಕೊಂಡವರನ್ನು ನರಕಕ್ಕೆ, ಪುಣ್ಯ ಮಾಡಿಕೊಂಡವರನ್ನು ಸ್ವರ್ಗಕ್ಕೆ ಕಳುಹಿಸುವನೆಂದು ಹೇಳುತ್ತಿರುತ್ತಾರೆ. ಹಾಗೆ ಸಮಾಧಿಗಳಿಂದ ಎಲ್ಲರನ್ನು ಎಬ್ಬಿಸಿ ತೀರ್ಪುನಿರ್ಣಯಿಸುವ ಅಂತ್ಯದಿನ ಬರುತ್ತದೆಂದು ಹೇಳುತ್ತಿರುತ್ತಾರೆ. ಇದು ನಿಜವೇನಾ?**

**ಉತ್ತರ :–** ಯಾವ ವಿಷಯವನ್ನಾದರೂ ಗೀಚಿ ನೋಡುವುದಕ್ಕೆ ಒರೆಕಲ್ಲಿದೆ.

ಒರೆಕಲ್ಲನ್ನು ಸಂಧಿಸಿ ನೋಡಿದರೇ ಅದರಲ್ಲಿನ ಸತ್ಯಾಸತ್ಯಗಳು ತಿಳಿಯುವುದು. ಸತ್ಯ ಜ್ಞಾನವು, ಅಸತ್ಯ ಅಜ್ಞಾನವು. ಈ ವಿಷಯವಾಗಿ ಅಂತಿಮ ದೈವಗ್ರಂಥದಲ್ಲಿನ ಸೂರಾ 45, ಆಯತ್ 32ನ್ನು ನೋಡೋಣ **(45-32) "ನಿಶ್ಚಯವಾಗಿ ಅಲ್ಲಾಹ್ (ದೇವರ) ವಾಗ್ದಾನ ಸತ್ಯ. ಅಂತಿಮ ಗಳಿಗೆಯನ್ನು ಕುರಿತು ಎಂತಹ ಸಂದೇಹವೂ ಇಲ್ಲ." ಎಂದು ಹೇಳಿದಾಗ ನೀವುಹೇಳಿದ್ದೀರ. "ಆ ಅಂತಿಮ ಗಳಿಗೆ ಏನೋ ನಮಗೆ ತಿಳಿದಿಲ್ಲ. ಅದು ಕೇವಲ ಒಂದು ಊಹೆಯೇ ಹೊರತು ಮತ್ತೇನೂ ಅಲ್ಲವೆಂದು ನಾವು ಭಾವಿಸುತ್ತಿದ್ದೇವೆ. ನಾವು ಅದನ್ನು ಯಾವುದೇ ಕಾರಣಕ್ಕೂ ನಂಬುವವರಲ್ಲ"** ಈ ವಾಕ್ಯವನ್ನು ನೋಡಿದರೇ ದೇವರು ಹೇಳಿರುವ 'ಅಂತಿಮ ಗಳಿಗೆ' ವಿಷಯದಲ್ಲಿ ಎಂತಹ ಅನುಮಾನವಿಲ್ಲ. ದೇವರು ಹೇಳಿರುವುದು ಸತ್ಯವೇ ಆದರೇ ಅದನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಮನುಷ್ಯರು ಅಸತ್ಯದಲ್ಲಿದ್ದಾರೆ. ದೇವರು ಅಂತಿಮ ಗಳಿಗೆಯೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೇ ಕೆಲವು ಆಯತ್‌ಗಳಲ್ಲಿ ಅಂತಿಮ ದಿನ ಪ್ರಳಯ ಏರ್ಪಡುತ್ತದೆ. ಭೂಮಿ ಚೂರುಚೂರಾಗುತ್ತದೆ. ಭೂಮಿ, ಆಕಾಶ ಪ್ರಳಯ ಅಂತಿಮ ದಿನದಂದು ಬರುತ್ತದೆ. ಆ ಅಂತಿಮ ದಿನವನ್ನು ಅಂತಿಮ ಗಳಿಗೆಯನ್ನು ಯಾರೂ ತಪ್ಪಿಸಿಕೊಳ್ಳಲಾರರು. ಆ ದಿನವು ಎಷ್ಟು ಬಾಧೆ ಪಟ್ಟರೂ ನಿನ್ನನ್ನು ಕಾಪಾಡುವವನಾಗಲೀ, ನಿನ್ನ ಮೊರೆ ಕೇಳುವವನಾಗಲೀ ಯಾರೂ ಇರುವುದಿಲ್ಲ. ಆ ದಿನ ನಿನ್ನನ್ನು ಸಮಾಧಿಯಿಂದ ಹೊರಗೆ ಅಲ್ಲಾಹ್ ತೆಗೆಯುತ್ತಾನೆ. ಅಂತಿಮ ದಿನದಂದು ನೀನು ನಿನ್ನ ಜೀವನದಲ್ಲಿ ಮಾಡಿಕೊಂಡಿರುವ ಪಾಪಪುಣ್ಯಗಳಿಗೆ ದೇವರಿಂದ ತೀರ್ಪು ನಿರ್ಣಯಿಸಲ್ಪಡುತ್ತದೆ. ತೀರ್ಪನ್ನು ಅನುಸರಿಸಿ ನಿನಗೆ ಸ್ವರ್ಗ ನರಕಗಳು ನಿರ್ಣಯಿಸಲ್ಪಡುತ್ತವೆ. ದೇವರ ತೀರ್ಪಿನಿಂದಾಗಲೀ, ಅಂತಿಮ ದಿನದಿಂದಾಗಲೀ ಯಾರೂ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ತಪ್ಪಿಸಿಕೊಳ್ಳಬೇಕೆಂಬ ಪ್ರಯತ್ನ ಮಾಡುವುದಕ್ಕೂ ಕೂಡಾ ಅವಕಾಶವಿರುವುದಿಲ್ಲ. ಹುಟ್ಟಿದ ಪ್ರತಿ ಮನುಷ್ಯನಿಗೆ, ಪ್ರತಿ ಪ್ರಾಣಿಗೆ ಅಂತಿಮ ದಿನದ ತೀರ್ಪು ಇದೆ.

**ಪ್ರಶ್ನೆ :– ನಿಮ್ಮ ಉತ್ತರದಲ್ಲಿ ಖುರಾನ್ ವಾಕ್ಯವಿದೆ ಅಲ್ಲವೇ! ಅದರಲ್ಲಿ ದೇವರು ಹೇಳಿರುವ ಅಂತಿಮಗಳಿಗೆ ಕುರಿತು ಎಂತಹ ಅನುಮಾನವಿಲ್ಲ. ಅದು ಸತ್ಯವೆಂದು**

**ನೀವೆಂದಾಗ "ಅಂತಿಮ ಗಳಿಗೆ ಕುರಿತು ನಾವು ನಂಬುವುದಿಲ್ಲ, ಅದೇನೋ ನಮಗೆ ತಿಳಿದಿಲ್ಲ" ಎಂದು ಅವರು ಹೇಳಿದರು. ಅವರು ಹಾಗೆ ಯಾಕೆ ಹೇಳಿದ್ದಾರೆ?**

**ಉತ್ತರ :–** ದೇವರು ಯಾವ ವಿಷಯವನ್ನು ಹೇಳಿದರೂ ಸತ್ಯವೇ ಆಗಿರುತ್ತದೆ. ಆದರೇ ಅದು ಅರ್ಥವಾಗಬೇಕೆಂದರೇನೇ ಸ್ವಲ್ಪ ಕಷ್ಟವಾಗಿರುತ್ತದೆ. ಅವರು ಹೇಳಿರುವುದು ಕೂಡಾ ನಿಜವೇ. ಅವರು ಪ್ರಳಯದಲ್ಲಿ ಸಮಾಧಿಗಳಿಂದ ಮರಣಿಸಿರುವವರನ್ನು ಎಬ್ಬಿಸುತ್ತಾರೆಂದು ಹೇಳುವುದು ಅಸತ್ಯವಾಗಿ, ಅಶಾಸ್ತ್ರೀಯವಾಗಿದೆ. ಅವರ ಮಾತನ್ನು ನಾನು ಕೂಡಾ ಸಮರ್ಥಿಸುತ್ತಿದ್ದೇನೆ. ನಾನು ಈ ವಿಷಯದಲ್ಲಿ ಬಹಳಜನ ಮುಸ್ಲಿಮ್‌ರನ್ನು ಕೇಳಿದ್ದೇನೆ. ಅವರೆಲ್ಲರೂ ಒಂದೇ ಮಾತಾಗಿ ಪ್ರಳಯದಲ್ಲಿ ದೇವರು ಗೋರಿಗಳಿಂದ ಮನುಷ್ಯರನ್ನು ಎಬ್ಬಿಸುತ್ತಾನೆಂದು, ಅಲ್ಲಿಯವರೆಗೆ ಮರಣಿಸಿದವರೆಲ್ಲರೂ ಸಮಾಧಿಗಳಲ್ಲಿಯೇ ಇರುತ್ತಾರೆಂದು ಹೇಳುತ್ತಿದ್ದಾರೆ. ನಾನು ಅವರಿಗೆ ಅನೇಕ ಪ್ರಶ್ನೆಗಳನ್ನು ಕೇಳಿದ್ದೇನೆ. ಅವರು ಯಾವ ಪ್ರಶ್ನೆಗು ಸರಿಯಾದ ಉತ್ತರ ಹೇಳಲಾರದೆ ಇದ್ದಾರೆ. ಆದರೂ ಕೊನೆಗೆ ನಮ್ಮ ಹಿರಿಯರು ಹೇಳಿರುವ ಮಾತೇ ನಮ್ಮ ಮಾತೆಂದು ಹೇಳುತ್ತಿದ್ದಾರೆ. ಅವರ ಹಿರಿಯರು ತಪ್ಪುದಾರಿ ಹಿಡಿದಿದ್ದರೇ ಒಟ್ಟಾರೆ ಮುಸ್ಲಿಮ್ ಸಮಾಜವೇ ತಪ್ಪುದಾರಿ ಹಿಡಿದಂತಾಗುವುದು. ಅವರೊಂದಿಗೆ ನಾನು ಕೇಳಿರುವ ಪ್ರಶ್ನೆಗಳ ವಿಧಾನವನ್ನು ಅವರು ನನಗೆ ಹೇಳಿರುವ ಸಮಾಧಾನವನ್ನು ಕೆಳಗೆ ಜೋಡಿಸಿ ಬರೆಯುತ್ತಿದ್ದೇವೆ ನೋಡಿರಿ.

**ನಾನು :–** ಮನುಷ್ಯ ಮರಣಿಸಿದರೇ ಸಮಾಧಿಯಲ್ಲಿ ಅಥವಾ ಗೋರಿಗಳಲ್ಲಿ ಕುಣಿಯಲ್ಲಿ ಇಟ್ಟು ಹೂತು ಹಾಕುತ್ತಿದ್ದೇವೆ. ಆಗ ಹೂತಿಟ್ಟಿರುವುದು ಮರಣಿಸಿರುವವನ ಶರೀರವನ್ನಾ ಅಥವಾ ಮರಣಿಸಿರುವವನನ್ನು ಸಜೀವವಾಗಿ ಹೂಳುತ್ತಿದ್ದೇವಾ?

**ಅವರು :–** ಮರಣಿಸಿರುವವನ ಶರೀರವನ್ನು ಸಮಾಧಿಯಲ್ಲಿ ಇಟ್ಟು ಹೂಳುತ್ತಿದ್ದೇವೆ. ಅವನನ್ನು ಸಜೀವವಾಗಿ ಇರುವಾಗ ಹೂಳಲಿಲ್ಲ.

**ನಾನು :–** ಮರಣಿಸಿರುವ ನಿರ್ಜೀವ ಶರೀರವನ್ನು ಹೂತಿಟ್ಟರೇ ಪ್ರಳಯ ಕಾಲದಲ್ಲಿ ಸಜೀವವಾಗಿ ಯಾಕೆ ಏಳುತ್ತಿದ್ದಾನೆ? ಯಾವಾಗಲೋ ನಡೆಯುವುದನ್ನು ನೀವು ಯಾಕೆ ಊಹಿಸಿಕೊಂಡು ಹೇಳುತ್ತಿದ್ದೀರಿ?

**ಅವರು :–** ನಮ್ಮ ಹಿರಿಯರು ಹೇಳಿರುವುದನ್ನೇ ಹೇಳಿದ್ದೇವೆ. ನಮ್ಮ ಹಿರಿಯರು ಹೇಳಿರುವುದನ್ನು ಕೇಳಬೇಕೆಂದಿದ್ದಾರೆ, ತಿರುಗಿ ಪ್ರಶ್ನಿಸಬಾರದೆಂದಿದ್ದಾರೆ. ಆದ್ದರಿಂದ ನಾವು ಎಂದೂ ತಿರುಗಿ ಪ್ರಶ್ನಿಸಿ ಕೇಳಲಿಲ್ಲ. ನಮ್ಮ ಸಂಪ್ರದಾಯದಲ್ಲಿ ನಮ್ಮ ಹಿರಿಯರನ್ನು ತಿರುಗಿ ಪ್ರಶ್ನಿಸಬಾರದು, ಹೇಳಿದ್ದನ್ನು ಕೇಳಬೇಕು. ಹೇಳಿರುವುದು ಸತ್ಯವೇ ಇರುತ್ತದೆ ಎಂದು ನಂಬುತ್ತಿದ್ದೇವೆ.

**ನಾನು :–** ಕುಣಿಯಲ್ಲಿ ಹೂಳಿರುವ ಶರೀರವು ಆರು ತಿಂಗಳಿಗೆ ಕೊಳೆತು ಹೋಗುತ್ತದಾ ಇಲ್ಲವಾ ನೀವೇ ಹೇಳಿರಿ.

**ಅವರು :–** ಕೊಳೆತು ಹೋಗುತ್ತದೆ. ಕೊಳೆತು ಹೋಗಿರುವ ಶರೀರವು ಪುನಃ ಸಜೀವವಾಗಿ ಏಳುತ್ತದೆ. ಅದು ದೇವರು ಮಾಡುವ ಕೆಲಸವಲ್ಲವೇ! ಮನುಷ್ಯರು ಎಬ್ಬಿಸಲಿಲ್ಲವಲ್ಲ! ದೇವರು ಎಬ್ಬಿಸುತ್ತಿರುವುದರಿಂದ ಮರಣಿಸಿರುವವರು ಸಜೀವವಾಗಿ ಏಳುತ್ತಿದ್ದಾರೆಂದು ಅಂದುಕೊಳ್ಳುತ್ತಿದ್ದೇವೆ.

**ನಾನು :–** ದೇವರು ಕೂಡಾ ತನ್ನ ಧರ್ಮಕ್ಕೆ ವಿರುದ್ಧವಾದ ಕೆಲಸಗಳು ಯಾವಾಗಲೂ ಮಾಡಲಿಲ್ಲ. ದೇವರು ತನ್ನ ಧರ್ಮಗಳನ್ನು ತಿಳಿಸುತ್ತಾ ಒಂದು ಜೀವಿಯು ಶರೀರವನ್ನು ಧರಿಸಿ ಸ್ವಲ್ಪ ಕಾಲ ಜೀವಿಸಿದಾಗ, ಅದರಲ್ಲಿ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ, ನಂತರ ಮರಣ ಎನ್ನುವವು ವರಸೆ ಕ್ರಮವಾಗಿ ಏರ್ಪಡುತ್ತವೆಂದು ಹೇಳಿದ್ದಾನೆ. ಇವು ಒಂದು ಶರೀರದಲ್ಲಿ ನಡೆಯುವ ದಶೆಗಳಾಗಿ ಹೇಳಿದ್ದಾನೆ. ದೇವರು ಹೇಳಿರುವ ಈ ಮಾತಿನ ಪ್ರಕಾರ ಪ್ರತ್ಯಕ್ಷವಾಗಿ ಈ ದಶೆಗಳು ಶರೀರಕ್ಕೆ ನಡೆಯುತ್ತಿವೆ, ಎಲ್ಲರಿಗೂ ತಿಳಿದಿರುವ ವಿಷಯವೇ. ಆ ವಿಷಯವನ್ನು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಿರುವುದಾಗಿದೆ. ಅದನ್ನೇ ಒರೆಕಲ್ಲಾಗಿ ತೆಗೆದುಕೊಂಡು ಈ ವಿಷಯದಲ್ಲಿ ಜ್ಞಾನವನ್ನು ಅಜ್ಞಾನವನ್ನು

ನಿರ್ಣಯಿಸಿ ಹೇಳಬಹುದು. ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 13ನೇ ಶ್ಲೋಕ ನೋಡಿ.

**ಶ್ಲೋ॥ 13. ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ।**
**ತಥಾ ದೇಹಾನ್ತರ ಪ್ರಾಪ್ತಿರ್ಧೀರ ಸ್ತತ್ರನ ಮುಹ್ಯತಿ॥**

**ಭಾವಾರ್ಥ :–** ಜೀವಾತ್ಮಗೆ ಯಾವ ವಿಧವಾಗಿ ಈ ದೇಹದಲ್ಲಿ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ ಎನ್ನುವ ದಶೆಗಳು ಒಂದರ ನಂತರ ಮತ್ತೊಂದು ವರಸೆಕ್ರಮವಾಗಿ ನಡೆಯುತ್ತಿವೆಯೋ ಹಾಗೇ ದೇಹವನ್ನು ಬಿಟ್ಟು ಹೋಗುವುದು (ಮರಣಿಸುವುದು) ಕೂಡಾ ನಡೆಯುತ್ತಿದೆ. ಸದಾ ನಡೆಯುವ ಈ ಕಾರ್ಯಕ್ಕೆ ಜ್ಞಾನಿಯಾದವನು ಯಾರೂ ಚಿಂತಿಸುವುದಿಲ್ಲ. ನಂತರ ಅದೇ ಅಧ್ಯಾಯದಲ್ಲಿ 27ನೇ ಶ್ಲೋಕದಲ್ಲಿ ಜನ್ಮಿಸಿದವನು ಮರಣಿಸದೆ ತಪ್ಪುವುದಿಲ್ಲ. ಮರಣಿಸಿದವನು ಜನ್ಮಿಸದೆ ತಪ್ಪುವುದಿಲ್ಲವೆಂದು ಹೇಳಿರುವ ವಿಷಯವಿದೆ ನೋಡಿರಿ.

**ಶ್ಲೋ॥ 27. ಜಾತಸ್ಯ ಹೀಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ।**
**ತಸ್ಮಾದ ಪರಿಹಾರ್ಯೇಽರ್ಥೇ ನತ್ವಂ ಶೋಚಿತು ಮರ್ಹಸಿ॥**

**ಭಾವಾರ್ಥ :– ಜನ್ಮಿಸಿರುವುದು ಎಂದಾದರೂ ಮರಣಿಸುವುದಕ್ಕೇ, ಮರಣಿಸುವುದು ಎಂದಾದರೂ ಜನ್ಮಿಸುವುದಕ್ಕಾಗಿಯೇ. ಅನಿವಾರ್ಯವಾದ ಈ ಸಂಗತಿಯನ್ನು ಕುರಿತು ನೀನು (ಯಾರು) ಚಿಂತಿಸುವುದಿಲ್ಲ."** ಮರಣಿಸಿದವನು ತಪ್ಪದೇ ಹುಟ್ಟುವನೆಂದು ಹುಟ್ಟಿರುವವನು ತಿರುಗಿ ಮರಣಿಸುವನೆಂದು ಇದು ಅನಿವಾರ್ಯ ಸಂಗತಿಯೆಂದು ದೇವರೇ ಪ್ರಥಮ ದೈವಗ್ರಂಥದಲ್ಲಿ ಹೇಳಿದ್ದಾನೆ. ಈ ವಿಧವಾಗಿ ದೇವರು ಹೇಳಿರುವಾಗ ದೇವರು 'ಮನುಷ್ಯ ಶರೀರವನ್ನು ಹೂತಿಟ್ಟಿರುವ ಸಮಾಧಿಯಿಂದ ಸಜೀವವಾಗಿ ಅದೇ ಶರೀರದೊಂದಿಗೆಯೇ ಎಬ್ಬಿಸುತ್ತಾನೆ' ಎನ್ನುವುದು ದೇವರನ್ನು ಕೂಡಾ ಅಸತ್ಯಕ್ಕೆ ಕಟ್ಟಿಹಾಕಿದಂತಾಗುತ್ತದೆ. ಸಮಾಧಿಗಳಲ್ಲಿ ಮೂಳೆಗಳು ಕೂಡಾ ಇರುವುದಿಲ್ಲ. ಶರೀರವನ್ನು ಬಿಟ್ಟ ಜೀವಿಯು ಬೇರೆ ಶರೀರದಲ್ಲಿ ಜನ್ಮಿಸಿದ ಸಂಘಟನೆಗಳು ಎಷ್ಟೋ ಇವೆ. ಮನುಷ್ಯರು ತಪ್ಪು

ಭಾವನೆಯಲ್ಲಿ ಇದ್ದಾರೆಂದು ತಿಳಿಸಿರುವ ದೇವರು ಆ ವಿಷಯದಲ್ಲಿ ಸತ್ಯವನ್ನು ತಿಳಿಯುವುದಕ್ಕೆ ಮರಣಿಸಿರುವವನು ಮತ್ತೊಂದುಕಡೆ ಜನ್ಮಿಸಿದ ನಂತರ ಆತನಿಗೆ ಪೂರ್ವಜನ್ಮ ಜ್ಞಾಪಕವನ್ನು ಉಂಟುಮಾಡುವುದರಿಂದ ಗತಜನ್ಮದಲ್ಲಿ ಇಂತಹ ಮನುಷ್ಯನಾಗಿ ಇದ್ದೇನೆಂದು ಹೇಳುತ್ತಿದ್ದಾನೆ. ಅದು ಪ್ರತ್ಯಕ್ಷ ಸತ್ಯವಾಗಿ ಕಾಣಿಸುತ್ತಿರುವಾಗ, ಪ್ರಳಯದಲ್ಲಿ ಅಂತಿಮ ದಿನದಂದು ಸಜೀವವಾಗಿ ಎಬ್ಬಿಸುತ್ತಾನೆನ್ನುವುದು ಅಸತ್ಯವೆಂದು ತಿಳಿಯುತ್ತಿದೆ.

**ಅವರು :–** ನಿಮ್ಮ ಮಾತನ್ನು ನೋಡಿದರೇ ವಾಸ್ತವವೇ ಎನಿಸುತ್ತಿದೆ. ಅದೇ ಖುರಾನ್ ಗ್ರಂಥದಲ್ಲಿ ಸೂರಾ 22, ಆಯತ್ 1ರಲ್ಲಿ ಹೀಗೇ ಬರೆದಿದೆ. **(22–1) "ಮಾನವರೇ ನಿಮ್ಮ ಪ್ರಭುವಿನ ಮೇಲೆ ಭಯಭಕ್ತಿ ಹೊಂದಿರಿ. ನಿಶ್ಚಯವಾಗಿ ಆ ಅಂತಿಮ ಗಳಿಗೆಯೊಂದರ ಭೂಕಂಪವು ಎಷ್ಟೋ ಭಯಂಕರವಾದುದು."** (ಇದು "ದಿವ್ಯ ಖುರಾನ್ ಸಂದೇಶವು ತೆಲುಗಿನಲ್ಲಿ" ಎನ್ನುವ ಗ್ರಂಥದಲ್ಲಿ ಬರೆಯಲಾಗಿದೆ. 'ಅಂತಿಮ ದೈವಗ್ರಂಥ ಖುರ್‌ಆನ್' ಎನ್ನುವುದರಲ್ಲಿ ಇದೇ ವಾಕ್ಯವೇ ಹೀಗಿದೆ ನೋಡಿರಿ.) **(22–1) "ಪ್ರಜೆಗಳೇ ನಿಮ್ಮ ಪ್ರಭುವಿಗೆ ಭಯಪಡಿ. ನಿಶ್ಚಯವಾಗಿ ಪ್ರಳಯ ಸಮಯದಲ್ಲಿ ನಡೆಯುವ ಪ್ರಕಂಪನ ಮಹಾ ಭೀಕರ ವಿಷಯ"** ಎಂದು ಬರೆದಿದೆ. ಈ ಎರಡು ವಾಕ್ಯಗಳಲ್ಲಿ ಸುಮಾರು ಒಂದೇ ವಿಷಯವಿರುವುದೇ ಅಲ್ಲದೇ, ಅಂತಿಮ ಗಳಿಗೆಯಲ್ಲಿ ನಡೆಯುವ ಪ್ರಳಯ ಭಯಂಕರವಾದುದೆಂದು, ಭೀಕರವಾದುದೆಂದು ಹೇಳಿದ್ದಾರೆ. ಈ ವಾಕ್ಯವನ್ನನು ಸರಿಸಿ ಪ್ರಳಯ ಸಂಭವಿಸುವಾಗ ಎಲ್ಲರಿಗೂ ಅಂತಿಮಗಳಿಗೆ ಬಂದಹಾಗೆಯೇ ಅಲ್ಲವೇ! ಅಂತಿಮ ಗಳಿಗೆಯಲ್ಲಿ ಪ್ರಳಯವೆನ್ನುವುದು ಇರುವುದೆಂದೇ ಅರ್ಥ!. ಪ್ರಳಯ ಬಂದರೇ ಎಲ್ಲವೂ ನಾಶವಾಗುವುದೆಂದೇ ಅಲ್ಲವೆ ಅರ್ಥ. ಅಲ್ಲಿಯವರೆಗು ಸಮಾಧಿಗಳಲ್ಲಿ ಇರುವವರು ಪ್ರಳಯ ಕಾಲದಲ್ಲಿ ಅಂದರೇ ಅಂತಿಮ ಕಾಲದಲ್ಲಿ ಸಮಾಧಿಗಳಿಂದ ಹೊರಗೆ ಬರುತ್ತಾರೆಂದು ಹೇಳಿರುವ ಮಾತನ್ನು ನಂಬಬಹುದುಲ್ಲವೇ!

**ನಾನು :–** ಭೂಪ್ರಳಯ ಎಂದರೇ ಹೊರಗೆ ಭೂಮಿ ಕಂಪಿಸುವುದೆಂದೂ,

ಸಮುದ್ರಗಳು ಸೀಳಿಹೋಗುವವೆಂದೂ, ಅಗ್ನಿ ಪರ್ವತಗಳು ಸಿಡಿಯುವುದೆಂದು ಯಾಕೆ ಅಂದುಕೊಳ್ಳಬೇಕು? ಖುರಾನ್ ಗ್ರಂಥದಲ್ಲಿ ದೇವರು ಹೇಳಿರುವ ವಿಷಯಗಳನ್ನು ಚೆನ್ನಾಗಿ ಗ್ರಹಿಸಿದಾಗ ಒಂದು ಉದ್ದೇಶಕ್ಕೆ ಬರಬೇಕು. ಹಾಗಲ್ಲದೇ ನಡೆಯದಿರುವುದನ್ನು ನಡೆದಂತೆ ಯಾಕೆ ಊಹಿಸಿಕೊಳ್ಳಬೇಕು? ದೇವರು ಪ್ರಳಯವೆಂದು ಹೇಳಿದರೇ ನಿನಗೆ ತಿಳಿದಿರುವ ಪ್ರಳಯವೇ ಎಂದು ಯಾಕೆ ಅಂದುಕೊಳ್ಳಬೇಕು? ದೇವರು (3–7) ವಾಕ್ಯದಲ್ಲಿ ಖುರಾನ್ ಗ್ರಂಥದಲ್ಲಿ ಸೂಕ್ಷ್ಮವಾದ ವಾಕ್ಯಗಳು ಎಷ್ಟೋ ಇವೆಯೆಂದು ತಿಳಿಸಿದ್ದಾನೆ. ಸೂಕ್ಷ್ಮವಾದ ವಾಕ್ಯಗಳನ್ನು ಸೂಕ್ಷ್ಮವಾಗಿಯೇ ಅರ್ಥಮಾಡಿಕೊಳ್ಳಬೇಕಾಗಿರುವಾಗ, ಹಾಗಲ್ಲದೇ ಎಲ್ಲವನ್ನೂ ಸ್ಥೂಲವಾಗಿ ಅರ್ಥ ಮಾಡಿಕೊಳ್ಳುವುದರಿಂದ ಆಧ್ಯಾತ್ಮಿಕದಲ್ಲಿ ಮನುಷ್ಯ ದಾರಿತಪ್ಪಿಹೋಗುತ್ತಿದ್ದಾನೆ. ಭಗವದ್ಗೀತೆಯಲ್ಲಿ (ತೌರಾತ್) ಗ್ರಂಥದಲ್ಲಿ ಜ್ಞಾನವೆಲ್ಲವೂ ಶರೀರ ಅಂತರ್ಗತವಾಗಿಯೇ ಹೇಳಿದ್ದಾನೆ. ಆದರೇ ಅದನ್ನು ಬಹಳಜನ ಶರೀರದೊಳಗೆ ನೋಡದೇ ಶರೀರದ ಹೊರಗೆ ನೋಡುವುದರಿಂದ ಭಗವದ್ಗೀತೆ ಭಾವಾರ್ಥವು ಬಹಳಜನರಿಗೆ ಅರ್ಥವಾಗದೇ ಹೋಗಿದೆ. ಇಲ್ಲಿ ಒಂದು ವಾಕ್ಯವನ್ನು ಸೂರಾ 30, ಆಯತ್ 8 ತೆಗೆದುಕೊಂಡು ನೋಡೋಣ. ಈ ವಾಕ್ಯವು ಸ್ಥೂಲವಾಗಿ ತೆಗೆದುಕೊಂಡರೇ ತೆಗೆದುಕೊಳ್ಳಬಹುದು. ಅದರಿಂದ ದೇವರ ಜ್ಞಾನದಲ್ಲಿ ತಪ್ಪುಹೆಜ್ಜೆ ಹಾಕಿದಂತಾಗುವುದು. ಸೂಕ್ಷ್ಮವಾಗಿ ಅರ್ಥ ಮಾಡಿಕೊಂಡರೇ ದೇವರು ಹೇಳಿರುವ ಭಾವಾರ್ಥವು ಚೆನ್ನಾಗಿ ಅರ್ಥವಾಗುತ್ತದೆ. ಮೊದಲು ವಾಕ್ಯವನ್ನು ನೋಡೋಣ. (30-8) **"ಏನು ಅವರು ತಮ್ಮ ಜನ್ಮವನ್ನು ಕುರಿತು ಆಳವಾಗಿ ಆಲೋಚಿಸುತ್ತಿಲ್ಲವಾ? ದೇವರು ಭೂಮಿ, ಆಕಾಶ ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಅತ್ಯುತ್ತಮ ರೀತಿಯಲ್ಲಿ ನಿರ್ಣಿತ ಕಾಲದವರೆಗು ಮಾತ್ರವೇ ಸೃಷ್ಠಿಸಿದ್ದಾನೆ. ಗಡುವು ಮುಕ್ತಾಯವಾದ ನಂತರ ತಮ್ಮ ಪ್ರಭುವನ್ನು ಸೇರಬೇಕಾಗಿರುತ್ತದೆ ಎನ್ನುವ ವಿಷಯವನ್ನು ಮರೆತುಹೋಗಿದ್ದಾರೆ."**

ಈ ವಾಕ್ಯದಲ್ಲಿ 'ಭೂಮಿಯನ್ನು ಆಕಾಶವನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಅತ್ಯುತ್ತಮ ರೀತಿಯಲ್ಲಿ ಸೃಷ್ಠಿಸಿದ್ದಾನೆ' ಎಂದು ಇದೆ. ಈ ಮಾತನ್ನು

ಲೋಕದಲ್ಲಿ ಎಲ್ಲರೂ ಸ್ಥೂಲವಾಗಿಯೇ ಹೇಳಿಕೊಳ್ಳುತ್ತಿರುತ್ತಾರೆ. ಹಾಗೆ ಹೇಳಿಕೊಳ್ಳುವುದರಿಂದ ಮನುಷ್ಯ ದೇವರ ಜ್ಞಾನವನ್ನು ಅರ್ಥ ಮಾಡಿಕೊಳ್ಳಲಾರದೆ ಹೋಗಿದ್ದಾನೆ. ಆದ್ದರಿಂದ "ಏನು ಮನುಷ್ಯ ತಮ್ಮ ಜನ್ಮವನ್ನು ಕುರಿತು ಆಳವಾಗಿ ಆಲೋಚಿಸುತ್ತಿಲ್ಲವಾ?" ಎಂದು ಮೊದಲಿಗೇ ಎಂದಿದ್ದಾನೆ. ಭೂಮಿ, ಆಕಾಶ ಎನ್ನುತ್ತಲೇ ಹೊರಗೆ ಕಾಣಿಸುವುದರ ಮೇಲೆಯೇ ಎಲ್ಲರ ಗಮನ ಹೋಗುತ್ತದೆ. ನಾವು ಹಾಗಲ್ಲದೇ ಸೂಕ್ಷ್ಮ ವಾಕ್ಯವನ್ನು ಸೂಕ್ಷ್ಮವಾಗಿಯೇ ಅರ್ಥ ಮಾಡಿಕೊಳ್ಳುತ್ತಿದ್ದೇವೆ, ಆದ್ದರಿಂದ ಭೂಮಿ ಎಂದರೇ ಮನುಷ್ಯನ ಶರೀರಕ್ಕಿರುವ ಕಾಲುಗಳು, ಪಾದಗಳು ಎಂದು ಕೂಡಲೇ ಅಂದುಕೊಳ್ಳುತ್ತಿದ್ದೇವೆ. ಆಕಾಶ ವೆನ್ನುತ್ತಲೇ ಮನುಷ್ಯನ ಶರೀರದ ಮೇಲಿರುವ ತಲೆಯನ್ನು ಅಂದು ಕೊಳ್ಳುತ್ತಿದ್ದೇವೆ. ಆಕಾಶ ಭೂಮಿ ಎಂದು ಹೇಳುತ್ತಲೇ ಕಾಲುಗಳಿಂದ ತಲೆವರೆಗು ಇರುವ ಮನುಷ್ಯನ ಶರೀರ ಎಂದು ಅಂದುಕೊಳ್ಳುತ್ತಿದ್ದೇವೆ. ಭೂಮಿ ಆಕಾಶ ಅವುಗಳ ಮಧ್ಯದಲ್ಲಿರುವ ಸಮಸ್ತವು ಎಂದು ಹೇಳುತ್ತಲೇ ತಲೆಯಿಂದ ಪಾದಗಳವರೆಗು ಎಲ್ಲ ಅವಯವಗಳೆಂದು, ಒಟ್ಟು ಶರೀರವೆಂದು ಅಂದುಕೊಳ್ಳುತ್ತಿದ್ದೇವೆ. ಪ್ರತಿ ಶರೀರವು ಒಂದು ನಿರ್ಣಿತ ಕಾಲದವರೆಗು (ಮರಣದವರೆಗು) ಚೆನ್ನಾಗಿರುವಂತೆ ತಯಾರಿ ಮಾಡಲ್ಪಟ್ಟಿರುತ್ತದೆ. ಯಾವಾಗ ಶರೀರವು ಸರಿಯಾಗಿ ಕೆಲಸ ಮಾಡಲಿಲ್ಲವೋ ಆಗ ಮರಣ ಎಂಬ ನಿರ್ಣಿತ ಗಡುವು ಹತ್ತಿರವಾದಂತೆಯೇ ಎಂದು ಅರ್ಥ. ಗಡುವು ಮುಗಿದ ನಂತರ ಅಂದರೆ ಶರೀರದಿಂದ ಜೀವಿಸುವ ಗಡುವು ಮುಗಿದ ನಂತರ ಮರಣಿಸಿ ದೇವರಲ್ಲಿ ಐಕ್ಯವಾಗಬೇಕೆಂದು ಮೋಕ್ಷವನ್ನು ಹೊಂದಬೇಕೆಂದು ಮನುಷ್ಯರು ಮರೆತು ಹೋಗಿದ್ದಾರೆ. ಪುನಃ ಕರ್ಮಗಳ ಫಲಿತವಾಗಿ ಭೂಮಿಮೇಲೆಯೇ ಮತ್ತೊಂದು ಶರೀರವನ್ನು ಧರಿಸುತ್ತಿದ್ದಾರೆ. ಆದ್ದರಿಂದ ಮೊದಲು ಹುಟ್ಟಿದಾಗಲೇ ತಮ್ಮನ್ನು ಕುರಿತು ತಾವು ಚೆನ್ನಾಗಿ ಆಲೋಚಿಸಬೇಕಾಗಿದೆ. ಆದ್ದರಿಂದ ತಮ್ಮ ಜನ್ಮವನ್ನು ಕುರಿತು ಚೆನ್ನಾಗಿ ಆಲೋಚಿಸಲಿಲ್ಲವಾ! ಎಂದು ಎಚ್ಚರಿಕೆ ಮಾಡಿದಂತೆ ಹೇಳಿದ್ದಾನೆ. ಈ ವಾಕ್ಯವು ಒಟ್ಟು ಸೂಕ್ಷ್ಮವಾಗಿ ಅರ್ಥವಾದರೇನೇ ಇದರಲ್ಲಿನ ಜ್ಞಾನವು ತಿಳಿಯುತ್ತದೆ ಆದರೇ, ಸ್ಥೂಲವಾಗಿ ಅರ್ಥವಾದರೇ ಜ್ಞಾನ ಒಂದು ಅಕ್ಷರವಾದರೂ ಅರ್ಥವಾಗುವುದಿಲ್ಲ.

'ಭೂಮಿ ಆಕಾಶವು ಅವುಗಳ ಮಧ್ಯದಲ್ಲಿರುವ ಸಮಸ್ತವು' ಎಂದು ಖುರಾನ್ ಗ್ರಂಥದಲ್ಲಿ ಬಹಳಬಾರಿ ಹೇಳಿದ್ದಾರೆ. ಆದರೇ ಭೂಮಿಯನ್ನು ಭೂಮಿಯಾಗಿಯೇ ಆಕಾಶವನ್ನು ಆಕಾಶವಾಗಿಯೇ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಅವುಗಳ ಮಧ್ಯೆ ಸಮಸ್ತವು ಎಂದರೆ ಕಾಣಿಸುವ ಪ್ರಪಂಚವೆಲ್ಲವೂ ಎಂದು ಎಲ್ಲರು ಅಂದುಕೊಳ್ಳುವುದು ನಡೆಯುತ್ತಿದೆ. ತಮ್ಮ ಶರೀರವನ್ನೇ ಪಾದಗಳಿಂದ ತಲೆಯವರೆಗು ಹೇಳುವ ಭಾವನೆಯಲ್ಲಿಯೇ ಭೂಮಿ ಆಕಾಶವು, ಅವುಗಳ ಮಧ್ಯದಲ್ಲಿರುವ ಸಮಸ್ತವು ಎಂದು ಹೇಳಿದ್ದಾನೆ. **ಅಂತಿಮಗಳಿಗೆ** ಎಂದರೇ! **ಮರಣ ಸಮಯವೆಂದು** ತಿಳಿಯಲಾರದೆ ಹೋಗಿದ್ದಾರೆ. ಮರಣ ಸಮಯದಲ್ಲಿ ಮರಣಹೊಂದಿದಾಗಲೇ ಎರಡನೆಯ ಜನ್ಮ ಅವನು ಮಾಡಿಕೊಂಡಿರುವ ಕರ್ಮವನ್ನನುಸರಿಸಿ ನಿರ್ಣಯಿಸಲ್ಪಡುತ್ತದೆ. ಕರ್ಮವನ್ನನುಸರಿಸಿ ಅವನು ಭೂಮಿ ಮೇಲೆಯೇ ಕಷ್ಟವನ್ನಾಗಲೀ, ಸುಖಗಳನ್ನಾಗಲೀ ಅನುಭವಿಸಬೇ ಕಾಗಿರುತ್ತದೆ. ಆದ್ದರಿಂದ ಅಂತಿಮ ದಿನದಂದು ಅಲ್ಲಾಹ್ ಅವನಿಗೆ ತೀರ್ಪು ನಿರ್ಧಾ ರಿಸುತ್ತಾನೆಂದು ಬರೆದಿದ್ದಾರೆ. ಅಂತಿಮ ದಿನದಂದು ಸಮಾಧಿಗಳಿಂದ ಎಬ್ಬಿಸಲ್ಪಡುತ್ತಾರೆ ಎಂದು ಹೇಳುವುದರಲ್ಲಿ ಮರಣಿಸಿದ ದಿನವೇ ತಾಯಿಗರ್ಭ ದಿಂದ ಹುಟ್ಟಿರುವ ಶಿಶು ಶರೀರದಲ್ಲಿ ಸೇರಿ ಎಚ್ಚರಿಕೆಯಲ್ಲಿ ಬರುವುದನ್ನು ಸಮಾಧಿಯಿಂದ ಹೊರಗೆ ತೆಗೆಯಲ್ಪಡುತ್ತಾರೆಂದು ಹೇಳಿದ್ದಾರೆ.

ಪ್ರತಿ ಮನುಷ್ಯನಿಗೆ ಮರಣ ಸಮಯವು ತಪ್ಪದೆ ಬರುತ್ತದೆ. ಆದ್ದರಿಂದ ಅಂತಿಮ ಗಳಿಗೆಯಿಂದ ಯಾರೂ ತಪ್ಪಿಸಿಕೊಳ್ಳಲಾರರೆಂದು ಹೇಳಿದ್ದಾನೆ. ಮರಣಿಸಿದ ಕೂಡಲೇ ಎರಡನೆಯ ಜನ್ಮದಲ್ಲಿ ಕಷ್ಟಗಳ ಅನುಭವವಾ ಅಥವಾ ಸುಖಗಳ ಅನುಭವವಾ ಇಲ್ಲವೇ ಎರಡು ಬೆರಕೆಯ ಜೀವನವಾ ಎಂದು ನಿರ್ಣಯಿಸಲ್ಪಟ್ಟು ನಾವು ಮಾಡಿಕೊಂಡಿರುವುದನ್ನು ಅನುಸರಿಸಿ ಎರಡನೆಯ ಜನ್ಮಕ್ಕೆ ಕರ್ಮ ತಯಾರಾಗುತ್ತದೆ. ಅದೇ ಅಂತಿಮ ಗಳಿಗೆಯ ತೀರ್ಪು ಎಂದು ಹೇಳಿದ್ದಾರೆ. ಈ ವಿಧಾನವು ಎಲ್ಲರಿಗು ಒಂದೇ ವಿಧವಾಗಿದೆ ಆದ್ದರಿಂದ ಅಂತಿಮ ಗಳಿಗೆಯ ತೀರ್ಪಿನಿಂದ ತಪ್ಪಿಸಿಕೊಳ್ಳುವುದಕ್ಕೆ ಯಾರಿಗೂ ಸಾಧ್ಯವಾಗುವು

ದಿಲ್ಲ ಎಂದು ಹೇಳಿದ್ದಾರೆ. ಮರಣಿಸುವಾಗ ಶರೀರವು ಶಿಥಿಲಾವಸ್ಥೆಗೆ ಸೇರಿರುತ್ತದೆ. ತಲೆಯಿಂದ ಕಾಲಿನವರೆಗು ಕೆಲಸ ಮಾಡದ ಸ್ಥಿತಿಯಲ್ಲಿ ಶರೀರವಿರುತ್ತದೆ. ಆದ್ದರಿಂದ ಅದನ್ನೇ ಪ್ರಳಯ ಎಂದಿದ್ದಾರೆ. ಗತ ಜನ್ಮ ಕರ್ಮಗಳನ್ನು ಅನುಸರಿಸಿ ಎರಡನೆಯ ಜನ್ಮ ಜೀವನವು ನಿರ್ಣಯಿಸಲ್ಪಡುತ್ತದೆ. ಎಲ್ಲರಿಗೂ ನಡೆಯುವ ವಿಧಾನವು ಒಂದೇ ಎಂದೋ ಅಂತಿಮ ದಿನ ಅಂದುಕೊಳ್ಳುವುದಕ್ಕಿಂತಲೂ ಯಾವಾಗ ಮರಣ ಬರುತ್ತದೋ ಆಗಲೇ ಅಂತಿಮ ಗಳಿಗೆ, ಅಂತಿಮ ದಿನ ಎಂದುಕೊಂಡರೇ ಸರಿಹೋಗುತ್ತದೆ. ಪ್ರತಿ ಮನುಷ್ಯ ಪಾಪವನ್ನು ಕಷ್ಟಗಳ ರೂಪದಲ್ಲಿ, ಪುಣ್ಯವನ್ನು ಸುಖಗಳ ರೂಪದಲ್ಲಿ ಇಲ್ಲೇ ಭೂಮಿ ಮೇಲೆಯೇ ಅನುಭವಿಸುತ್ತಿದ್ದಾನೆ. ಭೂಮಿಮೇಲೆ ಅನುಭವಿಸುವ ಕಷ್ಟಗಳನ್ನೇ ನರಕ ಎನ್ನುತ್ತೇವೆ. ಹಾಗೆಯೇ ಭೂಮಿಮೇಲೆ ಅನುಭವಿಸುವ ಸುಖಗಳನ್ನು ಸ್ವರ್ಗ ಎನ್ನುತ್ತಿದ್ದೇವೆ. ಭೂಮಿ ಮೇಲೆಯೇ ಜೀವನದಲ್ಲಿಯೇ ಪ್ರತಿ ಮನುಷ್ಯ ನಿತ್ಯವು ಕಷ್ಟಸುಖಗಳನ್ನು ಅನುಭವಿಸುವುದರಿಂದ ಸ್ವರ್ಗ ನರಕಗಳನ್ನು ಮನುಷ್ಯ ಇಲ್ಲೇ ಅನುಭವಿ ಸುತ್ತಿದ್ದಾನೆಂದು ಹೇಳಬಹುದು. ಸ್ವರ್ಗಲೋಕ, ನರಕಲೋಕ ಪ್ರತ್ಯೇಕವಾಗಿ ಇಲ್ಲವೆಂದು ಆ ಎರಡು ಭೂಮಿಮೇಲೆಯೇ ಕಷ್ಟಸುಖಗಳ ರೂಪದಲ್ಲಿ ಮನುಷ್ಯರು ಅನುಭವಿಸುತ್ತಿದ್ದಾರೆಂದು ತಿಳಿಯಬೇಕು. ಇಲ್ಲಿಯವರೆಗು ನಾವು ಹೇಳಿರುವುದನ್ನೇ ತನ್ನ ಮಾತುಗಳಲ್ಲಿ ದೇವರು ಹೇಳಿದ್ದಾನೆ ಹೊರತು ಬೇರೆ ಏನೂ ಹೇಳಲಿಲ್ಲ.

ದೇವರು ಹೇಳಿರುವ ಸೂಕ್ಷ್ಮ ಜ್ಞಾನವನ್ನು ಅರ್ಥ ಮಾಡಿಕೊಳ್ಳಲಾರದೆ ಮರಣಾವಸ್ಥೆಯನ್ನು ಪ್ರಳಯ ಕಾಲದಲ್ಲಿ ಹೊರಗೆ ಭೂಮಿ ಆಕಾಶದಲ್ಲಿ ಪ್ರಳಯ ನಡೆಯುವುದೆಂದು ಮನುಷ್ಯ ಅನವಶ್ಯಕವಾಗಿ ಅಂದುಕೊಂಡಿದ್ದಾನೆ. ಹೊರಗಿನ ಪ್ರಪಂಚವಾದ ಆಕಾಶ, ಭೂಮಿಗೆ ಎಂದಿಗೂ ಪ್ರಳಯ ಬರುವುದಿಲ್ಲ. **ವಿಶ್ವವು ನಾಶವಾಗುವುದಿಲ್ಲ, ದೇವರು ನಾಶವಾಗುವುದಿಲ್ಲ**. ಪ್ರಕೃತಿ ಪರಮಾತ್ಮ ಎನ್ನುವ ಎರಡೂ ಶಾಶ್ವತವಾಗಿ ಇರುವವೇ ಹೊರತು ನಾಶವಾಗುವವಲ್ಲ. ಹೊರಗಿನ ಪ್ರಪಂಚದಹಾಗೆ ನಮ್ಮ ಶರೀರವು ಒಂದು ಪ್ರಪಂಚದಹಾಗಿದೆ. ಪ್ರಕೃತಿಯೊಂದರ ಪಂಚಭೂತಗಳಿಂದ ನಮ್ಮ ಶರೀರವು ತಯಾರಾಗಿದೆ. ಭೂಮಿಗೆ ಗುರುತಾಗಿ

ಪಾದಗಳು, ಆಕಾಶಕ್ಕೆ ಗುರುತಾಗಿ ತಲೆ ಅದರಲ್ಲಿ ಮನಸ್ಸು, ಬುದ್ಧಿ, ಚಿತ್ತವು, ಅಹಂ ಇವೆ. ಹಾಗೆಯೇ ಉಳಿದ ಗಾಳಿ, ಅಗ್ನಿ, ನೀರಿಗೆ ಗುರುತಾಗಿ ಉಳಿದ ಶರೀರವೆಲ್ಲವೂ ಇದೆ. ಪಂಚಭೂತಗಳಿಂದ ಕೂಡಿಕೊಂಡಿರುವ ಹೊರಗಿನ ಪ್ರಪಂಚವನ್ನು ತಯಾರಿ ಮಾಡಿದಂತೆಯೇ ಪಂಚಭೂತಗಳಿಂದಲೇ ಮನುಷ್ಯ ಶರೀರವನ್ನು ಕೂಡಾ ದೇವರು ತಯಾರಿ ಮಾಡಿದ್ದಾನೆ. ಈ ವಿಧವಾಗಿ ಮನುಷ್ಯ ಶರೀರದಲ್ಲಿ ನಡೆಯುವ ಬದಲಾವಣೆಯನ್ನು, ದೇವರು ಮಾಡುವ ಕೆಲಸಗಳನ್ನು, ಕರ್ಮಗಳನ್ನನುಸರಿಸಿ ವಿಧಿಸುವ ಶಿಕ್ಷೆಗಳನ್ನು ಹೇಳಿದ್ದರೇ ಕಷ್ಟಸುಖಗಳನ್ನು ಸ್ವರ್ಗಲೋಕ ನರಕಲೋಕಗಳೆಂದು ಮನುಷ್ಯ ಊಹಿಸಿಕೊಂಡಿದ್ದಾನೆ. ಹಾಗೇ ಆಕಾಶವು, ಭೂಮಿ ಎಂದರೇ ಕಾಲುಗಳು ತಲೆಯೆಂದು ಅಲ್ಲದೇ ಹೊರಗಿನ ಪ್ರಪಂಚದಲ್ಲಿನ ಭೂಮಿ, ಆಕಾಶಗಳಾಗಿ ಹೋಲಿಸಿಕೊಂಡಿದ್ದಾನೆ. ಹೀಗೆ ದೇವರು ಸೂಕ್ಷ್ಮವನ್ನು ನಿನ್ನಲ್ಲಿರುವುದನ್ನು ಹೇಳಿದರೇ ಮನುಷ್ಯ ಸ್ಥೂಲವಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾನೆ. ತನಗೆ ಸಂಬಂಧವಿಲ್ಲದ ವಿಷಯಗಳನ್ನು ಲೆಕ್ಕಿಸಿ ಕೊಳ್ಳುತ್ತಿದ್ದಾನೆ.

# ಸ್ವರ್ಗ, ನರಕ, ಪರ ಲೋಕಗಳು

**ಅವರು :–** ಸ್ವರ್ಗಲೋಕ, ನರಕಲೋಕಗಳು ಇಲ್ಲವೆನ್ನುತ್ತೀರಾ? ಆ ಎರಡನ್ನು ಭೂಮಿಮೇಲೆಯೇ ಅನುಭವಿಸುತ್ತಿದ್ದೀವಾ? ಆದರೇ ಪರಲೋಕ ಎನ್ನುವುದು ಏನು?

**ನಾನು :–** ಮನುಷ್ಯನಿಗೆ ದೇವರು ಜ್ಞಾನವನ್ನು ಹೇಳುವ ವಿಧಾನದಲ್ಲಿ ಕೆಲವು ಪದಗಳನ್ನು ಹೇಳಿದ್ದಾನೆ. ಆ ಪದಗಳನ್ನು ಮನುಷ್ಯ ತನ್ನ ಇಷ್ಟಬಂದಹಾಗೆ ಅರ್ಥ ಮಾಡಿಕೊಂಡಿದ್ದಾನೆ. ಸ್ವರ್ಗ ಎಂದರೇ ಸುಖವೆಂದು ಅರ್ಥ. ಹಾಗೆಯೇ ನರಕವೆಂದರೇ ಕಷ್ಟ ಅಥವಾ ದುಃಖ ಎಂದು ಅರ್ಥ. 'ಲೋಕ' ಎಂದರೇ ಅನುಭವಿಸುವುದು ಎಂದು ಅರ್ಥ. ಸ್ವರ್ಗಲೋಕವು ಎಂದರೇ ಸುಖಗಳನ್ನು ಅನುಭವಿಸುವುದೆಂದು ಅರ್ಥ ಅಷ್ಟೇ ಹೊರತು ಅದು ಅಲ್ಲೇ ಎಂದು ಹೇಳುವುದಕ್ಕೆ

ಅವಕಾಶವಿಲ್ಲ. ಮನುಷ್ಯ ಸುಖಗಳನ್ನು ಎಲ್ಲಿ ಅನುಭವಿಸುತ್ತಿದ್ದರೇ ಅಲ್ಲಿಯೇ ಸ್ವರ್ಗಲೋಕವೆಂದು ಹೇಳಬಹುದು. ಹಾಗೆಯೇ ನರಕಲೋಕವೆಂದರೇ ದುಃಖಗಳನ್ನು ಅನುಭವಿಸುವುದೆಂದು ಅರ್ಥ. ಅಷ್ಟೇ ಹೊರತು ಇಲ್ಲಿ ಅಲ್ಲಿ ಇದೆಯೆಂದು ಹೇಳುವುದಕ್ಕೆ ಅವಕಾಶವಿಲ್ಲ. ಮನುಷ್ಯ ಎಲ್ಲಿ ದುಃಖಗಳನ್ನು ಅನುಭವಿಸುತ್ತಿದ್ದರೇ ಅಲ್ಲೇ ನರಕಲೋಕವಿದೆ ಎಂದು ಹೇಳಬಹುದು. ಮನುಷ್ಯನಿಗೆ ಎರಡೇ ಅನುಭವಗಳಿವೆ. ಒಂದು ಸುಖ, ಎರಡು ದುಃಖ. ಈ ಎರಡು ಅನುಭವಗಳು ಹೊರತು ಹೊರಗಿನ ಪ್ರಪಂಚದಲ್ಲಿ ಏನೂ ಇಲ್ಲ. ಈ ಎರಡು ಅನುಭವಗಳಿಗಿಂತಲೂ ಬೇರೆ ಅನುಭವ ಒಂದಿದೆ. ಅದು ಹೀಗಿದೆ ಎಂದು ಹೇಳುವುದಕ್ಕೆ ಅವಕಾಶವಿರುವುದಿಲ್ಲ. ದುಃಖವಲ್ಲದ್ದು, ಸುಖವಲ್ಲದ್ದು ಎರಡಕ್ಕೂ ಬೇರೆಯಾದುದು. ಎರಡಕ್ಕೂ ಬೇರೆಯಾಗಿರುವ ಅನುಭವವನ್ನು ದೇವರಲ್ಲಿ ಐಕ್ಯವಾದವನು ಅನುಭವಿಸುತ್ತಿರುತ್ತಾನೆ. ಆ ಅನುಭವವು ಸುಖ ದುಃಖಗಳಿಗಿಂತ ಬೇರೆಯಾದುದು. ಆದ್ದರಿಂದ ಅದನ್ನು 'ಬೇರೆ' ಎಂದು ಹೇಳುವುದಕ್ಕೆ ಬದಲು 'ಪರ' ಎಂದು ಹೇಳಿದ್ದಾರೆ. ಅನುಭವವನ್ನು ಲೋಕವೆನ್ನುತ್ತಾರಲ್ಲವೇ! ಸುಖದುಃಖ ಗಳಿಗಿಂತಲೂ ಬೇರೆಯಾಗಿರುವ ಅನುಭವವನ್ನು "ಪರಲೋಕ" ಎಂದು ಹೇಳಬಹುದು. ಪರಲೋಕವೆಂದರೇ ದೇವರಲ್ಲಿ ಐಕ್ಯವಾಗುವುದು ಅಥವಾ ಮೋಕ್ಷವೆಂದು ಹೇಳಬಹುದು. ಮುಕ್ತಿಯನ್ನು ಹೊಂದುವುದು ಅಥವಾ ಮೋಕ್ಷವನ್ನು ಹೊಂದುವುದನ್ನು ಅಥವಾ ದೇವರಲ್ಲಿ ಐಕ್ಯವಾಗುವುದನ್ನು ಪರಲೋಕವನ್ನು ಹೊಂದಿದಂತೆಯೇ. ಪರಲೋಕ ಪ್ರಾಪ್ತಿ ಎಂದು ಕೂಡಾ ಹೇಳಬಹುದು.

ಪರಲೋಕ ಎನ್ನುವುದನ್ನು ಕುರಿತು ಅಂದರೇ ದೈವಾನುಭವವನ್ನು ಕುರಿತು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಏನೆಂದಿದ್ದಾನೋ ನೋಡೋಣ. ಸೂರಾ ಆರು, ಆಯತ್ 32ರಲ್ಲಿ ಏನಿದೆಯೋ ನೋಡೋಣ. **(6-32) "ಇಹಲೋಕ ಜೀವನವು ಒಂದು ಆಟ, ಮತ್ತು ಕಾಲಕ್ಷೇಪ ಮಾತ್ರವೇ. ದೈವಭೀತಿ ಇರುವವನಿಗೆ ಪರಲೋಕವಾಸವೇ ಅತ್ಯಂತ ಶ್ರೇಷ್ಠವಾದುದು. ಏನು ನೀವು ಅರ್ಥ**

**ಮಾಡಿಕೊಳ್ಳಲಿಲ್ಲವಾ?"** (12-109) **"ನಾವು ನಿನಗಿಂತಲೂ ಪೂರ್ವವು ದಿವ್ಯಜ್ಞಾನವು (ವಹೀ) ಕೊಟ್ಟು ಕಳುಹಿಸಿರುವವರೆಲ್ಲರೂ ಪುರುಷರೇ. ಅವರು ನಗರವಾಸಿಗಳು. ಏನು ನೀವು ಭೂಮಿಯಲ್ಲಿ ಸಂಚಾರ ಮಾಡಲಿಲ್ಲವಾ? ತಮ್ಮ ಪೂರ್ವಿಕರ ಗತಿ ಏನಾಗಿದೆಯೋ ನೋಡುವುದಕ್ಕೆ ದೈವಭೀತಿ ಇರುವವರಿಗೆ ಪರಲೋಕವಾಸವೇ ಎಷ್ಟೋ ಉತ್ತಮವಾದುದು. ಏನು? ನೀವಿದು ಅರ್ಥ ಮಾಡಿಕೊಳ್ಳಲಿಲ್ಲವೇ?** (29-64) **"ಈ ಪ್ರಪಂಚ ಜೀವನವು ಕೇವಲ ವಿನೋದ ಕಾಲಕ್ಷೇಪ ಮತ್ತು ಕ್ರೀಡೆ ಮಾತ್ರವೇ. ಅಸಲಿಗೆ ಪರಲೋಕ ಗೃಹ ಜೀವನವೇ ವಾಸ್ತವವಾದ ಜೀವನ. ಇದು ಅವರು ತಿಳಿದುಕೊಂಡರೇ ಎಷ್ಟೋ ಚೆನ್ನಾಗಿರುತ್ತಿತ್ತು.** (42-20) **"ಯಾರು ಪರಲೋಕ ಫಲವನ್ನು ಕೋರಿಕೊಳ್ಳುವನೋ, ನಾವು ಆತನಿಗೆ ಆತನ ಫಲದಲ್ಲಿ ವೃದ್ಧಿ ಉಂಟುಮಾಡುತ್ತೇವೆ. ಯಾರಾದರೇ ಇಹಲೋಕ ಫಲವನ್ನು ಕೋರಿ ಕೊಳ್ಳುತ್ತಾನೋ ನಾವು ಆತನಿಗೆ ಅದನ್ನೇ ಕೊಡುತ್ತೇವೆ. ಆತನಿಗೆ ಪರಲೋಕ ಪ್ರತಿಫಲದಲ್ಲಿ ಎಂತಹ ಭಾಗವಿರುವುದಿಲ್ಲ."** ಈ ವಿಧವಾಗಿ ಪರಲೋಕವನ್ನು ಕುರಿತು ಕೆಲವು ವಾಕ್ಯಗಳನ್ನು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಹೇಳಿರುವು ದಾಗಿದೆ. ಇದನ್ನನುಸರಿಸಿ ಸ್ವರ್ಗಲೋಕ ಬೇರೆ, ನರಕಲೋಕ ಬೇರೆ ಎಂದು, ಪರಲೋಕವು ಬೇರೆ ಎಂದು ತಿಳಿಯಬೇಕು.

ಮನುಷ್ಯ ಸ್ವರ್ಗವನ್ನು, ನರಕವನ್ನು ಎಲ್ಲಾದರೂ ಅನುಭವಿಸಬಹುದು. ಅಂದರೇ ಭೂಮಿ ಮೇಲೆಯೇ ಎಲ್ಲಾದರೂ ಅನುಭವಿಸಬಹುದು. ಎಲ್ಲಿ ಅನುಭವಿಸಿದರೇ ಅದೇ ಆತನ ಲೋಕವಾಗುವುದು. ಹಾಗೆಯೇ ದೇವರು ಪ್ರಪಂಚವೆಲ್ಲಾ ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆ. ಆತನಲ್ಲಿ ಐಕ್ಯವಾದವನು ಪುನಃ ಶರೀರವನ್ನು ಧರಿಸುವುದಂತೂ ಇರುವುದಿಲ್ಲ. ಅಂದರೇ ಆತನಿಗೆ ಜನ್ಮಗಳಿರುವುದಿಲ್ಲ. ಜನ್ಮಗಳಿವೆ ಎಂದರೇ ಅವನು ಸ್ವರ್ಗನರಕಗಳನ್ನು ಅನುಭವಿಸುವವನಾಗಿ ಇರಬೇಕು. ಅನುಭವಿಸುವ ಕರ್ಮ ಇಲ್ಲದವನು, ದೇವರಲ್ಲಿ ಐಕ್ಯವಾದವನು ಕೂಡಾ ದೇವರಹಾಗೆ ಎಲ್ಲೆಡೆ ವ್ಯಾಪಿಸಿ ಹೋಗುವನು. ಆಗ ಅವನು ಇಲ್ಲಿದ್ದಾನೆ ಅಲ್ಲಿಲ್ಲ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ಅಂಥವನು

ದೇವರಲ್ಲಿ ಇದ್ದಾನೆ ಆದ್ದರಿಂದ ದೇವರಹಾಗೆ ಎಲ್ಲೆಡೆ ಇರುತ್ತಾನೆ. ಅವನು ದೇವರನ್ನು ಅನುಭವಿಸುತ್ತಿದ್ದಾನೆ ಆದ್ದರಿಂದ ಪರಲೋಕವನ್ನು ಹೊಂದಿದವನೆಂದು ಹೇಳಬಹುದು. 'ಲೋಕ' ಅಂದಷ್ಟುಮಾತ್ರಕ್ಕೆ ಯಾವುದೋ ದೇಶವಂಥದ್ದು ಎಂದು ಅಂದುಕೊಳ್ಳಬಾರದು. **'ಲೋಕ' ಎಂದರೇ 'ಅನುಭವ'** ಎಂದು ಅರ್ಥ ಅಥವಾ ಅನುಭವಿಸುವುದೆಂದು ಅರ್ಥ. ಎಲ್ಲ ಅನುಭವಗಳಿಗಿಂತಲೂ ದೇವರ ಅನುಭವ ಬೇರೇಯಾಗಿರುತ್ತದೆ ಆದ್ದರಿಂದ ಪರಲೋಕವೆಂದು ಹೇಳುತ್ತಿದ್ದಾರೆ. ಮತ್ತೊಂದು ವಿಷಯವನ್ನು ಮರೆಯಬಾರದು. ಅದೇನೆಂದರೇ! ದೇವರನ್ನು ಅನುಭವಿಸುವುದನ್ನು ಪರಲೋಕವೆಂದು ಹೇಳುತ್ತಿದ್ದೇವೆ ಅಲ್ಲವೇ! ದೇವರನ್ನು ಅನುಭವಿಸುವುದಕ್ಕೆ ಸಾಧ್ಯವಾಗುತ್ತದಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ದೇವರಲ್ಲಿ ಐಕ್ಯವಾದವನು ದೇವರಿಗಿಂತಲೂ ಬೇರೆಯಾಗಿರುವುದಿಲ್ಲ. ಆದ್ದರಿಂದ ಅವನು ಪ್ರತ್ಯೇಕವಾಗಿ ಇದ್ದು ಅನುಭವಿಸುವುದು ಯಾವುದೂ ಇಲ್ಲ. ದೇವರಲ್ಲಿ ಐಕ್ಯವಾಗಿರುತ್ತಾನೆ. ಆ ವಿಷಯವನ್ನು ನಾವು ಅರ್ಥಮಾಡಿಕೊಳ್ಳಬೇಕೆಂದು ಇದಕ್ಕು ಮೊದಲು ಹೇಳಿರುವ ವಾಕ್ಯಗಳ ಕೊನೆಯಲ್ಲಿ **"ಏನು ನೀವಿದನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲವಾ"** ಎಂದು ಹೇಳಿದ್ದಾರೆ. ಇನ್ನೂ ಮತ್ತೊಂದು ವಾಕ್ಯದ ಕೊನೆಯಲ್ಲಿ **'ಇದು ಅವರು ಅರ್ಥ ಮಾಡಿ ಕೊಂಡಿದ್ದರೇ ಎಷ್ಟೋ ಚೆನ್ನಾಗಿರುತ್ತಿತ್ತು'** ಎಂದಿದ್ದಾನೆ. ಆದ್ದರಿಂದ ಪ್ರತಿ ವಿಷಯವನ್ನು ಸ್ಥೂಲವಾಗಿ ಅರ್ಥಮಾಡಿಕೊಳ್ಳಬಾರದು. ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕು. ಹಾಗಾದರೇನೇ ದೇವರ ಜ್ಞಾನವು ಅರ್ಥವಾಗಬಲ್ಲದು. ದೇವರ ಜ್ಞಾನವು ಅಭೌತಿಕವಾಗಿ ಇದೆ. ಹಾಗೇ ಪ್ರಪಂಚ ಜ್ಞಾನವೆಲ್ಲವೂ ಭೌತಿಕವಾಗಿದೆ. ಭೌತ ಎಂದರೇ ಕಾಣಿಸುವುದು, ಅಭೌತಿಕ ಎಂದರೇ ಕಾಣಿಸದಿರುವುದೆಂದು ಅರ್ಥ. ದೇವರು ಅಭೌತಿಕನು ಆದ್ದರಿಂದ ಸೂಕ್ಷ್ಮವಾಗಿಯೇ ಅರ್ಥಮಾಡಿಕೊಳ್ಳಬೇಕು.

# ದೇವರ ಚಿಹ್ನೆ

ಅಭೌತಿಕವಾದ ದೇವರನ್ನು ಗುರುತಿಸುವದಕ್ಕೆ ಭೌತಿಕವಾದ ಚಿಹ್ನೆಯನ್ನು ತಯಾರಿ ಮಾಡಿದ್ದಾನೆ. ಕಾಣಿಸದ ರಾಜನ ಉಂಗುರವನ್ನು ರಾಜಮುದ್ರೆ ಎಂದು ಹೇಳಿದಂತೆ, ರಾಜಮುದ್ರೆಯನ್ನು ನೋಡಿ ರಾಜನನ್ನು ನೋಡಿದಹಾಗೆ ಗೌರವಿಸುತ್ತಾರೆ. ಹಾಗೆಯೇ ಕಾಣಿಸದ ದೇವರನ್ನು ಕಾಣಿಸುವ ಚಿಹ್ನೆಯಾಗಿ ಗುರುತಿಸಿ ಗೌರವಿಸಬೇಕು. ರಾಜನ ಬೆರಳಿನ ಉಂಗುರವನ್ನು ರಾಜಮುದ್ರೆಯಾಗಿ ಗುರುತಿಸಿದಂತೆ, ರಾಜಮುದ್ರೆಯನ್ನು ನೋಡುತ್ತಲೇ ರಾಜನನ್ನು ನೋಡಿದಂತೆ ರಾಜಮುದ್ರೆಯನ್ನು ಗೌರವಿಸಿ ರಾಜಾಜ್ಞೆಯನ್ನು ಆಚರಿಸುತ್ತಿದ್ದರು. ದೇವರು ರಾಜನಹಾಗೆ ಕಾಣಿಸದವನಾಗಿ ಇದ್ದಂತೆ ರಾಜಮುದ್ರೆಯನ್ನು ಅನುಸರಿಸಿ ರಾಜಮುದ್ರೆ ಇರುವವರು ಹೇಳಿದಂತೆ ಕೇಳುತ್ತಾ ರಾಜಾಜ್ಞೆಯಂತೆ ಅವರ ಮಾತನ್ನು ಗೌರವಿಸಿ ಮಾಡುತ್ತಿರುತ್ತಾರೆ. ರಾಜನಿಗಿರುವ ಗೌರವ ರಾಜಮುದ್ರೆಗಿರುತ್ತದೆ. ದೇವರು ಕಾಣಿಸದವನಾದ್ದರಿಂದ ಕೆಲವು ದೇವರ ಕೆಲಸಗಳನ್ನು ಇತರರಿಂದ ಆಚರಿಸುವುದಕ್ಕೆ ದೇವರ ಮುದ್ರೆಯನ್ನು ತಯಾರಿ ಮಾಡಬೇಕಾಗಿ ಬಂದಿದೆ. ರಾಜ ತನ್ನ ಕೈ ಬೆರಳಿಗೆ ಧರಿಸಿದ ಉಂಗುರವಾದ್ದರಿಂದ ರಾಜರವರ ಉಂಗುರಕ್ಕೆ ಬೆಲೆಯಿದೆ. ಹಾಗೆಯೇ ದೇವರ ಜ್ಞಾನದಿಂದ ನಿರ್ಮಿತವಾದುದು ದೇವರ ಚಿಹ್ನೆಯಾಗಿ ಇದೆ. ದೇವರ ಮುದ್ರೆ ದೇವರ ಜ್ಞಾನದಿಂದ ತಯಾರಿಸಲ್ಪಟ್ಟಿರುವುದಾಗಿ ಇರುವುದೇ ಅಲ್ಲದೇ, ದೇವರ ಮುದ್ರೆ ಯಾವ ಮತಕ್ಕೆ ಸಂಬಂಧಿಸಿರುವುದಾಗಿ ಇರುವುದಿಲ್ಲ. ರಾಜಮುದ್ರೆ ವ್ಯಕ್ತಿಗಳಿಗೆ ಸಂಬಂಧಿಸಿರುವುದಾಗಿ ಹೇಗಿರುವುದಿಲ್ಲವೋ ಹಾಗೆಯೇ ದೇವರ ಮುದ್ರೆ ಮತಗಳಿಗೆ ಸಂಬಂಧಿಸಿರುವುದಾಗಿ ಇರುವುದಿಲ್ಲ. ರಾಜಾಧಿಕಾರದಿಂದ ತಯಾರಾಗಿರುವುದು, ರಾಜಾಧಿಕಾರದಿಂದ ಕೂಡಿಕೊಂಡಿರುವುದು ರಾಜಮುದ್ರೆ ಎನ್ನುವಂತೆ ದೇವರ ಶಕ್ತಿಯಿಂದ ಕೂಡಿಕೊಂಡಿರುವುದಾಗಿ ದೇವರ ಮುದ್ರೆ ಇರುತ್ತದೆ. ದೇವರ ಮುದ್ರೆ ಎಂದರೇ ದೇವರ ಚಿಹ್ನೆ ಎಂದು, ದೇವರ ಗುರುತು ಎಂದು, ದೇವರ ಅಧಿಕಾರ ಎಂದು, ದೇವರ ಶಕ್ತಿ ಎಂದು ಹೇಳಬಹುದು.

**ಪ್ರಶ್ನೆ :– ದೇವರ ಮುದ್ರೆ ಎಂದಾಗಲೀ, ದೇವರ ಚಿಹ್ನೆ ಎಂದಾಗಲೀ ನಾವು ಎಲ್ಲೂ ಕೇಳಲಿಲ್ಲ. ಎಲ್ಲೂ ನೋಡಲಿಲ್ಲ. ನೀವು ಹೇಳುವುದು ಕಟ್ಟುಕಥೆಯಂತಿದೆ. ನಿಮ್ಮ ಮಾತು ಸತ್ಯವೆಂದು ನಾವು ಹೇಗೆ ನಂಬಬೇಕು? ಅದಕ್ಕೆ ಯಾವುದಾದರೂ ಆಧಾರವಿದೆಯಾ?**

**ಉತ್ತರ :–** ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ ಹೇಳಿರುವ ಕೆಲವು ಶ್ಲೋಕಗಳ ಅರ್ಥ ಸಮುದಾಯದಿಂದ **'ದೇವರ ಮುದ್ರೆ'** ಹೀಗಿದೆ ಎಂದು ಹೇಳಬಹುದು. ಭಗವದ್ಗೀತೆಯಲ್ಲಿ ದೇವರ ಚಿಹ್ನೆ ನಿಗೂಢವಾಗಿ ಕಾಣಿಸದಂತೆ ಇರುವಂತಿದೆ. ಅಕ್ಷರ ಪರಬ್ರಹ್ಮಯೋಗದಲ್ಲಿ ಕೆಲವು ಶ್ಲೋಕಗಳಿಂದ ಅನುಬಂಧವಾಗಿದೆ. ದ್ವಿತೀಯ ದೈವಗ್ರಂಥದಲ್ಲಿ 'ದೇವರ ಮುದ್ರೆ'ಯನ್ನು ಕುರಿತು ವಾಕ್ಯವಿದೆ. ಭಗವದ್ಗೀತೆಯಲ್ಲಿ ಕಾಣಿಸದೆ ನಿಗೂಢವಾಗಿರುವ ದೇವರ ಮುದ್ರೆ ಬೈಬಲ್ ಗ್ರಂಥದಲ್ಲಿ ಕಾಣಿಸುವಂತೆ ಹೇಳಲ್ಪಟ್ಟಿದೆ. ನಂತರ ಸ್ವಲ್ಪ ಕಾಲಕ್ಕೆ ಬಂದಿರುವ ಅಂತಿಮ ದೈವಗ್ರಂಥದಲ್ಲಿ **'ದೇವರ ಚಿಹ್ನೆ'** ಎನ್ನುವ ಪದವನ್ನು ಎರಡು ಮೂರು ಕಡೆಗಳಲ್ಲಿ ಬಳಸಿದರೂ ಅದರ ಅವಗಾಹನೆ ಮನುಷ್ಯರಲ್ಲಿ ಇಲ್ಲದೇ ಹೋಗಿದೆ. ದೇವರ ಮುದ್ರೆಯನ್ನು (ಚಿಹ್ನೆಯನ್ನು) ಕುರಿತು ಭಗವದ್ಗೀತೆ ಅಕ್ಷರ ಪರಬ್ರಹ್ಮ ಯೋಗವೆಂಬ ಅಧ್ಯಾಯದಲ್ಲಿ ಇದ್ದರೇ, **ದ್ವಿತೀಯ ದೈವಗ್ರಂಥವಾದ ಯೋಹಾನ್ ಬರೆದಿರುವ ಪ್ರಕಟಣೆ ಗ್ರಂಥದಲ್ಲಿ ಅಧ್ಯಾಯ 9 ವಾಕ್ಯ ನಾಲ್ಕರಲ್ಲಿ ದೇವರ ಮುದ್ರೆಯನ್ನು ಕುರಿತು ಹೇಳಿದ್ದಾರೆ.** ನಂತರ ಬಂದಿರುವ **ಖುರಾನ್ ಗ್ರಂಥದಲ್ಲಿ ಸೂರಾ 22 ಆಯತ್ 32 ರಲ್ಲಿ ಹೇಳಲ್ಪಟ್ಟಿದೆ. ಅಲ್ಲಿ "ದೇವರ ಚಿಹ್ನೆಗಳನ್ನು ಭಕ್ತಿ ಇರುವವರು ಗೌರವಿಸುತ್ತಾರೆ"** ಎಂದು ಇದೆ. ಉಳಿದ ಕಡೆ **2–158 ವಾಕ್ಯದಲ್ಲಿಯೂ ಮತ್ತು 5–2 ರಲ್ಲೂ ದೇವರ ಚಿಹ್ನೆಯನ್ನು ಕುರಿತು ಬರೆದಿದ್ದರೂ** ಅಲ್ಲಿ ಹೇಳಿರುವುದು ಸರಿಯಾದ ಭಾವನೆಯಲ್ಲಿಲ್ಲವೆಂದೂ, ಅದು ಜಿಬ್ರಯೇಲ್ ಹೇಳಿರುವ ವಾಕ್ಯವಲ್ಲ ವೆಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿಯೂ, ಬೈಬಲ್‌ನಲ್ಲಿಯೂ ಅರ್ಥ ವಾದಂತೆ ಖುರಾನ್ ಗ್ರಂಥದಲ್ಲಿ ಅರ್ಥವಾಗುತ್ತಿಲ್ಲ.

ಭಗವದ್ಗೀತಾ ಗ್ರಂಥದಲ್ಲಿ ಅಕ್ಷರಪರಬ್ರಹ್ಮ ಯೋಗದಲ್ಲಿ ಕಾಣಿಸದೆ ದೇವರ ಚಿಹ್ನೆ ಹೇಳಲ್ಪಟ್ಟಿದೆ. 40 ವರ್ಷಗಳ ಕೆಳಗೆ ನಾನು ಬೈಬಲ್‌ನ್ನು, ಖುರಾನ್ ಗ್ರಂಥವನ್ನು ನೋಡದ ಮೊದಲು ಅಕ್ಷರ ಪರಬ್ರಹ್ಮಯೋಗದಲ್ಲಿ ನಿಗೂಢವಾಗಿ ನಿಕ್ಷಿಪ್ತವಾಗಿರುವ **'ದೇವರ ಮುದ್ರೆ'** ಯನ್ನು ಹೊರ ತೆಗೆದು ದೃಶ್ಯರೂಪವಾಗಿ ಚಿತ್ರವನ್ನು ಗೀಚಿ ತೋರಿಸಿದ್ದೇವೆ. ನಮ್ಮ ಮೊದಲ ರಚನೆ **'ಪ್ರಬೋಧ'** ದಲ್ಲಿ ದೇವರ ಮುದ್ರೆಯಾಗಿರುವ ಚಿತ್ರವನ್ನು 1978ರಲ್ಲಿಯೇ ಬರೆದಿದ್ದೇವೆ. 1980ರಲ್ಲಿ 'ಪ್ರಬೋಧ' ಗ್ರಂಥವನ್ನು ಮುದ್ರಿಸಿದ್ದೇವೆ. ಅಲ್ಲಿಗೆ 40 ವರ್ಷಗಳ ಕೆಳಗೇ ನಮ್ಮಿಂದ **'ದೇವರ ಚಿಹ್ನೆ'** ರೂಪಗೊಂಡಿದೆ. 1978ರಲ್ಲಿ ನಮ್ಮ ಮೂಲಕ ದೇವರ ಚಿಹ್ನೆ ತಯಾರಾಗಿದೆ. ಅಂದಿನಿಂದ ಆ ಚಿಹ್ನೆಯನ್ನು ತಲೆ ಹಣೆಯ ಭಾಗದಲ್ಲಿ ಧರಿಸುತ್ತಿದ್ದೇವೆ. 'ದೇವರ ಮುದ್ರೆ' ಯಾವಾಗ ತಯಾರಾಗಿದೆಯೋ, ಯಾವಾಗ ದೇವರ ಮುದ್ರೆಯನ್ನು ಹಣೆಯ ಭಾಗದಲ್ಲಿ ಧರಿಸುತ್ತಿದ್ದೇವೋ, ಅಂದಿನಿಂದ **'ತ್ರೈತ ಶಕ'** ಎನ್ನುವ ಹೆಸರು ಬಂದಿದೆ. ತ್ರೈತ ಶಕವು ಪ್ರಾರಂಭವಾಗಿ ಇಲ್ಲಿಗೆ 39 ವರ್ಷಗಳಾಗಿವೆ. ಪ್ರತಿ ವರ್ಷ ಯುಗಾದಿ ಹಬ್ಬದ ದಿನದಿಂದ ತ್ರೈತಶಕ ಸಂಖ್ಯೆ ಬದಲಾಗುತ್ತಾ ಬಂದಿದೆ. **'ತ್ರೈತ ಶಕ ಕ್ಯಾಲೆಂಡರ್', 'ತ್ರೈತಶಕ ಪಂಚಾಂಗ'** ಕೂಡಾ ತಯಾರಾಗುತ್ತಿವೆ. ನಾಳೆ ಬರುವ ಯುಗಾದಿಯಿಂದ ತ್ರೈತ ಶಕವು 40ಆಗಿ ಬದಲಾಗುತ್ತಿದೆ. ತ್ರೈತ ಶಕವು ಆರಂಭವಾದಾಗಿನಿಂದಲು **'ತ್ರೈತಸಿದ್ಧಾಂತ'**ವನ್ನು ಬೋಧಿಸುತ್ತಿದ್ದೇವೆ. ಮುಸ್ಲಿಮ್‌ರು ತಮ್ಮ ಖುರಾನ್ ಗ್ರಂಥದಲ್ಲಿನ ಸೂಕ್ಷ್ಮ ವಾಕ್ಯಗಳನ್ನು ಹೇಗೆ ಅರ್ಥ ಮಾಡಿಕೊಳ್ಳಲಾರದೇ ಹೋಗಿದ್ದಾರೋ, ಹಾಗೆಯೇ ಹಿಂದೂಗಳು ತಮ್ಮ ಭಗವದ್ಗೀತೆ ಜ್ಞಾನವನ್ನು ಅರ್ಥಮಾಡಿಕೊಳ್ಳಲಾರದೇ ಹೋಗಿದ್ದಾರೆ. ಆದ್ದರಿಂದ ನಾವು ಭಗವದ್ಗೀತೆ ಪುರುಷೋತ್ತಮಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 16, 17 ಶ್ಲೋಕಗಳನ್ನು ಆಧಾರ ಮಾಡಿಕೊಂಡು, ಆ ಶ್ಲೋಕಗಳಲ್ಲಿರುವ **ಕ್ಷರ, ಅಕ್ಷರ, ಪುರುಷೋತ್ತಮ** ಎಂಬ ಮೂವರು ಪುರುಷರ ಆಧಾರದಿಂದ **'ತ್ರೈತ ಸಿದ್ಧಾಂತ'**ವನ್ನು ಪ್ರಕಟಿಸಿ, ಅಂದಿನಿಂದ ಇಂದಿನವರೆಗು ಅದನ್ನೇ ಪ್ರಚಾರ ಮಾಡುತ್ತಿದ್ದೇವೆ. ಹಿಂದೂ ಮತದಲ್ಲಿ ಇದಕ್ಕುಮೊದಲೇ ಅದ್ವೈತ ಸಿದ್ಧಾಂತಕರ್ತ

ಆದಿಶಂಕರಾಚಾರ್ಯರು ಇದ್ದಾರೆ. ಹಾಗೆಯೇ ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು ಇದ್ದಾರೆ. ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು ಕೂಡಾ ಇದ್ದಾರೆ. ಕೇರಳ ರಾಷ್ಟ್ರದಿಂದ ಶಂಕರಾಚಾರ್ಯರವರು ತನ್ನ ಅದ್ವೈತವನ್ನು ಪ್ರಚಾರ ಮಾಡಿದ್ದಾರೆ. ತಮಿಳನಾಡಿನಿಂದ ರಾಮಾನುಜಾಚಾರ್ಯರು ತನ್ನ ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡಿದ್ದಾನೆ. ಕರ್ನಾಟಕದಲ್ಲಿ ಉಡುಪಿಯಿಂದ ಮಧ್ವಾಚಾರ್ಯರವರು ತನ್ನ ದ್ವೈತವನ್ನು ಪ್ರಚಾರ ಮಾಡಿದ್ದಾರೆ. ಆದರೇ ಆಗ ಹಿಂದೂಗಳೆಲ್ಲರೂ ನಮ್ಮ ಸಿದ್ಧಾಂತಕರ್ತರೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಅವರನ್ನು ಪೂಜಿಸಿದ್ದಾರೆ. ಈ ದಿನ ನಾವು ಕಳೆದ 38 ವರ್ಷಗಳಿಂದ ತ್ರೈತ ಸಿದ್ಧಾಂತವನ್ನು ಬೋಧಿಸುತ್ತಿದ್ದೇವೆ.

ಆದರೇ ಹಿಂದೂಗಳು ನನ್ನನ್ನು ಹಿಂದೂವಾಗಿಯೇ ಒಪ್ಪಿಕೊಳ್ಳುತ್ತಿಲ್ಲ. 'ತ್ರೈತ' ಎನ್ನುತ್ತಲೇ ಕ್ರೈಸ್ತರ ಜ್ಞಾನವೆಂದು ಆರೋಪಿಸುತ್ತಿದ್ದಾರೆ. ನಾವು ಹೇಳುವ ಜ್ಞಾನವು ಹಿಂದೂಗಳವರದ್ದಾ, ಕ್ರೈಸ್ತರದ್ದಾ ಎಂದು ನೋಡದೇ ನಾವು ರಚಿಸಿರುವ ಭಗವದ್ಗೀತೆಯನ್ನು ಹಿಂದೂ ಮುಸುಗಿನಲ್ಲಿರುವ ಬೈಬಲ್ ಎಂದು ಹೇಳಿದ್ದಾರೆ. ನನ್ನನ್ನು ನೇರವಾಗಿ ಕ್ರೈಸ್ತ ಬೋಧಕನೆಂದು ಕುರುಡರಂತೆ ಹೇಳುವುದು ನಡೆದಿದೆ. ಯಾರು ಎಷ್ಟು ಆರೋಪಣೆಗಳು ಮಾಡಿದರೂ 'ತ್ರೈತ ಸಿದ್ಧಾಂತ ಜ್ಞಾನವು' ಬಹಳ ವೇಗವಾಗಿ ಭೂಮಿಮೇಲೆ ಹರಡಿಹೋಗುತ್ತಿದೆ. ಕಂಸನಿಗೆ ತಿಳಿಯದೇ ಪಕ್ಕದಲ್ಲೇ ರೇಪಲ್ಲೆಯಲ್ಲಿ ಕೃಷ್ಣನು ಬೆಳೆದಂತೆ ಬಹಳಜನ ಸ್ವಾಮೀಜಿಗಳಿಗೆ ತಿಳಿಯದೇ ತ್ರೈತಸಿದ್ಧಾಂತ ಜ್ಞಾನವು ಬೆಳೆದುಹೋಗುತ್ತಿದೆ. ಇಲ್ಲಿಗೆ ನೂರುಗಳು, ಸಾವಿರ, ದಾಟಿ ಲಕ್ಷಗಳಲ್ಲಿ ಪ್ರಯಾಣಿಸುತ್ತಾ ಬೇಗನೇ ಕೊನೆಗೆ ನೂರು ಲಕ್ಷಗಳ ಸ್ಥಾಯಿಗೆ ಸೇರಲಿದೆ. ಕೆಲವರು ನಮ್ಮನ್ನು ಕ್ರೈಸ್ತರು ಎಂದವರೇ ಅವರ ತಪ್ಪನ್ನು ತಿಳಿದುಕೊಂಡು ಕೊನೆಗೆ ತ್ರೈತಸಿದ್ಧಾಂತ ಜ್ಞಾನವು ದೊಡ್ಡದೆಂದು ನಮ್ಮ ಜ್ಞಾನಕ್ಕೆ ಗುರುತಾದ 'ದೇವರ ಚಿಹ್ನೆಯನ್ನು' ಹಣೆಯ ಮೇಲೆ ಧರಿಸುತ್ತಿದ್ದಾರೆ. ತ್ರೈತ ಶಕದಿಂದ ತ್ರೈತ ಸಿದ್ಧಾಂತ ಜ್ಞಾನ ಪ್ರಚಾರವಾಗುತ್ತಿದೆ. ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದವರು ನಾವೇ ಆಗಿರುವುದರಿಂದ ನಾವು ವೇಗವಾಗಿ ಪ್ರಚಾರ

ಮಾಡುತ್ತಿದ್ದೇವೆ. ನಮ್ಮ ಜ್ಞಾನ **'ತ್ರೈತ ಸಿದ್ಧಾಂತ'**, ನಮ್ಮ ಚಿಹ್ನೆ **'ದೇವರ ಚಿಹ್ನೆ'** ಎಂದು ಈ ಜ್ಞಾನವನ್ನು ತಿಳಿದವರೆಲ್ಲರೂ ದೇವರ ಚಿಹ್ನೆಯನ್ನು ಮುಖದ ಮೇಲೆ ಧರಿಸುತ್ತಿದ್ದಾರೆ.

'ದೇವರ ಚಿಹ್ನೆ' ಒಂದು ಮತಕ್ಕೆ ಸಂಬಂಧಿಸಿರುವುದಲ್ಲ. ನಾವು ಮೊದಲು ಭಗವದ್ಗೀತೆ **ಅಕ್ಷರ ಪರಬ್ರಹ್ಮ ಯೋಗವನ್ನು ನೋಡಿ ದೇವರ ಚಿಹ್ನೆಯನ್ನೂ, ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವನ್ನು ನೋಡಿ ತ್ರೈತ ಸಿದ್ಧಾಂತವನ್ನು ಹೊರಗೆ ಹೇಳಿದ್ದೇವೆ**. ಆದರೂ ಇದು ಹಿಂದೂ ಮತದಲ್ಲಿ ಉದ್ಭಿಸಿದೆ, ಹೇಳಿದವನು ಹಿಂದೂವೆಂದು ಅಂದುಕೊಳ್ಳುವುದಕ್ಕೆ ಅವಕಾಶವಿಲ್ಲ. ಈ ಜ್ಞಾನವು, ಈ ಚಿಹ್ನೆ ಒಂದು ಮತಕ್ಕೆ ಪರಿಮಿತಿಯಲ್ಲ. ನಾವು ಮೊದಲು ಭಗವದ್ಗೀತೆ ಓದಿದ್ದೇವೆ. ಆಗ ಪ್ರಪಂಚದಲ್ಲಿ ಯಾರಿಗೂ ಅರ್ಥವಾಗದ ಧೋರಣಿಯಲ್ಲಿ ನನಗೆ ಭಗವದ್ಗೀತೆ ಅರ್ಥವಾಗುವುದು ನಡೆಯಿತು. ನಂತರ ನಾನು ಹೇಳುವ ಜ್ಞಾನವು, ನಾನು ಬೋಧಿಸುವ ವಾಕ್ಯಗಳು ಬೈಬಲ್‌ನಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ನಾನು ಆ ಗ್ರಂಥಗಳು ಓದಿದಾಗ ಕಾಣಿಸಿವೆ. ನಾನು ಹೇಳುವ ಜ್ಞಾನವೇ ಆ ಎರಡು ಗ್ರಂಥಗಳಲ್ಲಿ ಇರುವುದರಿಂದ ಆ ಎರಡು ಗ್ರಂಥಗಳು ಬಹಳ ಸುಲಭವಾಗಿ ನನಗೆ ಅರ್ಥವಾಗುವುದು ನಡೆದಿದೆ. ನಾನು ಕಳೆದ 40 ವರ್ಷಗಳಿಂದ ಬೋಧಿಸುತ್ತಾ "ದೇವರ ಜ್ಞಾನವು ದೇವರಿಗೆ ಹೊರತು ಮನುಷ್ಯರಿಗೆ ತಿಳಿದಿಲ್ಲ. ದೇವರೇ ಜ್ಞಾನವನ್ನು ಹೇಳಿದರೇ ಪ್ರಜೆಗಳಿಗೆ ಜ್ಞಾನ ತಿಳಿಯುತ್ತದೆ" ಎಂದು ಹೇಳುತ್ತಿದ್ದೆನು. ಅದೇ ವಿಷಯವೇ ಖುರಾನ್ ಗ್ರಂಥದಲ್ಲಿ ಸೂರಾ ಮೂರು ಆಯತ್ ಏಳರಲ್ಲಿ (3–7) ರಲ್ಲಿ ಇರುವುದನ್ನು ನೋಡಿ ನನಗೆ ಆಶ್ಚರ್ಯವಾಯಿತು. **'ದೇವರು ಅಂದುಕೊಂಡರೇ ನಿನ್ನನ್ನು ಒಂದೇ ಕಡೆಯೇ ಇರಿಸಬಲ್ಲನು. ದೇವರು ಅಂದುಕೊಂಡರೇ ನಿನ್ನನ್ನು ಎಲ್ಲೆಡೆ ಇರಿಸಬಲ್ಲನು'** ಎಂದು 40 ವರ್ಷಗಳ ಕೆಳಗೆ ಒಂದು ವಾಕ್ಯವನ್ನು ಬರೆದಿದ್ದೇವೆ. ಅದೇ ವಾಕ್ಯವೇ ಖುರಾನ್ ಗ್ರಂಥದಲ್ಲಿ **'ದೇವರು ಅಂದುಕೊಂಡರೇ ನಿನ್ನನ್ನು ಜ್ಞಾನಮಾರ್ಗದಲ್ಲಿ ಕಳುಹಿಸಬಲ್ಲನು. ದೇವರು ಅಂದುಕೊಂಡರೇ ನಿನ್ನನ್ನು ಅಪಮಾರ್ಗದಲ್ಲಿ**

**ಕಳುಹಿಸಬಲ್ಲನು'** ಎನ್ನುವ ವಾಕ್ಯವನ್ನು ನೋಡಿ ನನ್ನ ವಾಕ್ಯಗಳು ಅನೇಕವು ಬೈಬಲ್, ಖುರಾನ್ ಗ್ರಂಥಗಳಲ್ಲಿ ಇರುವುದನ್ನು ನೋಡಿ ಆಶ್ಚರ್ಯವಾಯಿತು. ನಾನು 1980ರಲ್ಲಿ **'ಜನನ ಮರಣ ಸಿದ್ಧಾಂತ'** ಎನ್ನುವ ಹೊಸ ಜ್ಞಾನವನ್ನು ಬರೆದಿದ್ದೇನೆ. ಆ ದಿನಗಳಲ್ಲಿ ಬಹಳಜನರಿಗೆ ಆ ಜ್ಞಾನವು ಅರ್ಥವಾಗಲಿಲ್ಲ. ಅದರಮೇಲೆ ಎಷ್ಟೋಜನ ವೈದ್ಯರು, ಎಷ್ಟೋಜನ ವಿಜ್ಞಾನನಿಪುಣರು ವಿಮರ್ಶೆಗಳು ಮಾಡಿದ್ದಾರೆ. ಆದರೂ ನಾನು ಹೇಳುವ ಜ್ಞಾನವು ಸತ್ಯವೆಂದು ಹೇಳಿದ್ದೇನೆ. ಅದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ 6–95 ರಲ್ಲಿ ಇರುವುದನ್ನು ನೋಡಿ ನಾನು ಹೇಳಿರುವ ಜ್ಞಾನವೇ ಅಲ್ಲಿದೆ ಎಂದು ಸಂತೋಷಿಸಿದ್ದೇವೆ. ಹೀಗೆ ಎಷ್ಟೋ ವಿಷಯಗಳು ಆ ಎರಡು ಗ್ರಂಥಗಳಲ್ಲಿ ಇವೆಯೆಂದು ತಿಳಿಯಿತು.

ಈ ಮಧ್ಯ ಕಾಲದಲ್ಲಿ ಸುಮಾರು ಎರಡು ವರ್ಷಗಳ ಕೆಳಗೆ ಖುರಾನ್ ಗ್ರಂಥವನ್ನು ನೋಡುತ್ತಿರುವಾಗ (22–32) ರಲ್ಲಿಯೂ, (5–2) ರಲ್ಲಿಯೂ **'ದೇವರ ಚಿಹ್ನೆ'** ಎನ್ನುವ ವಾಕ್ಯ ಕಾಣಿಸಿದೆ. ನಾನು ಯಾವಾಗಲೋ 40 ವರ್ಷಗಳ ಕೆಳಗೆ 'ದೇವರ ಚಿಹ್ನೆ' ಎಂದು ಹೊಸ ಹೆಸರು ಹೇಳಿದ್ದೇನೆಂದು ಅಂದುಕೊಂಡಿದ್ದೇನೆ. ಆದರೇ ಅದು ಹೊಸ ಹೆಸರಲ್ಲ, ಹಳೆಯ ಹೆಸರೇಯೆಂದು ತಿಳಿದು ಹೋಯಿತು. ನಂತರ ಕೆಲವು ತಿಂಗಳಿಗೆ ಬೈಬಲ್ ಗ್ರಂಥವನ್ನು ನೋಡುತ್ತಿರುವಾಗ ಯೋಹಾನ್ ಪ್ರಕಟಣೆಗಳ ಗ್ರಂಥದಲ್ಲಿ 9ನೇ ಅಧ್ಯಾಯದಲ್ಲಿ 4ನೇ ವಚನದಲ್ಲಿ 'ದೇವರ ಮುದ್ರೆ ಹಣೆಯ ಮೇಲೆ ಧರಿಸುವುದು' ಎಂದು ಇರುವುದನ್ನು ನೋಡಿ ಬಹಳ ಆಶ್ಚರ್ಯವಾಯಿತು. ಆ ವಾಕ್ಯವನ್ನು ಬಹಳಜನ ಕ್ರೈಸ್ತರು ಕೂಡಾ ನೋಡಿಲ್ಲ. ಅವರಿಗೆ ಆ ವಾಕ್ಯವೇ ತಿಳಿದಿಲ್ಲ. ನಾವು 40 ವರ್ಷಗಳಿಂದ ಮಾಡುವ ಕೆಲಸವನ್ನೇ ಅಲ್ಲಿ ಹೇಳುವುದು ಬಹಳ ವಿಚಿತ್ರವಾಗಿ ತೋಚಿದೆ. ಯೋಹಾನ್ ಪ್ರಕಟಣೆಗಳ ಗ್ರಂಥದಲ್ಲಿ (9-4) **"ಹಣೆಯಮೇಲೆ ದೇವರಮುದ್ರೆ ಇಲ್ಲದ ಮನುಷ್ಯರಿಗೇ ಹೊರತು ಭೂಮಿಮೇಲಿರುವ ಹುಲ್ಲಿಗಾದರೂ, ಯಾವ ಗಿಡಕ್ಕಾದರೂ, ಮತ್ತು ಯಾವ ವೃಕ್ಷಕ್ಕಾದರೂ ಹಾನಿ ಉಂಟುಮಾಡ ಬಾರದೆಂದು ಅವುಗಳಿಗೆ ಆಜ್ಞೆ ಕೊಡಲಾಗಿದೆ"** ಎಂದು ಇದೆ.

ದೇವರ ಮುದ್ರೆಯನ್ನು ನಾವು ಒಬ್ಬರೇ ಅಲ್ಲದೇ ನನ್ನ ಜ್ಞಾನ ತಿಳಿದವರೆಲ್ಲರೂ ಧರಿಸುವುದು ನಡೆಯುತ್ತಿದೆ. ದೇವರ ಮುದ್ರೆ ಧರಿಸದವರನ್ನೇ ಹಿಂಸಿಸಿರೆಂದು ಅವರಿಗೆ ಹೊರತುಪಡಿಸಿ ಹುಲ್ಲಿಗಾದರೂ, ಗಿಡಗಳಿಗಾದರೂ ಹಾನಿ ಉಂಟುಮಾಡಬಾರದೆಂದು ದೇವರ ಆಜ್ಞೆ ಆಗಿರುವುದನ್ನು ನೋಡಿದರೇ ನಮಗೆ ತಿಳಿಯದೆ ನಾವು ದೇವರ ಮುದ್ರೆ ಧರಿಸುತ್ತಿರುವುದಕ್ಕೆ, ಅದು ಎಷ್ಟು ಒಳಿತೋ ಆಗ ಅರ್ಥವಾಯಿತು. ದೇವರ ಮುದ್ರೆ ಧರಿಸಿದವರಿಗೆ ಎಷ್ಟೋ ಬಾಧೆಗಳು ಇಲ್ಲದೇ ಹೋಗಿವೆಯೆಂದು ಆ ವಾಕ್ಯದಿಂದ ತಿಳಿದುಹೋಯಿತು. ಈ ವಿಧವಾಗಿ ನಮ್ಮ ಜ್ಞಾನವು ಉಳಿದ ಎರಡು ಗ್ರಂಥಗಳಲ್ಲಿ ಕಾಣಿಸುವುದರಿಂದ, ನಾವು ಎಲ್ಲರು ಧರಿಸುವ ಚಿಹ್ನೆ (ಮುದ್ರೆ) ಎರಡು ಗ್ರಂಥಗಳಲ್ಲಿ ಇರುವುದರಿಂದ ಈ ಜ್ಞಾನವು, ಈ ಚಿಹ್ನೆಗಳು ಒಂದು ಮತಕ್ಕೆ ಸಂಬಂಧಿಸಿರುವವಲ್ಲ ಎಂದು ತಿಳಿದುಹೋಯಿತು. ನಮ್ಮ ತ್ರೈತಸಿದ್ಧಾಂತ ಜ್ಞಾನವೆಲ್ಲವೂ ಒಂದು ಮತಕ್ಕೆ ಪರಿಮಿತವಾದುದಲ್ಲವೆಂದು, ಇದು ಮೂರು ಮತಗಳಿಗೆ ಸಂಬಂಧಿಸಿರುವುದೆಂದು ಅರ್ಥವಾಗಿ ಹೋಯಿತು. ಅಂದಿನಿಂದ ನಮ್ಮ ಜ್ಞಾನವು ಒಂದು ಹಿಂದೂಗಳಿಗೇ ಅಲ್ಲದೇ ಉಳಿದ ಮತಗಳವರಿಗೆ ಕೂಡಾ ಅವಶ್ಯವೇ ಎಂದು ಹೇಳುತ್ತಿದ್ದೇವೆ. ನಾವು 1978ರಲ್ಲಿ ದೇವರ ಜ್ಞಾನವನ್ನು ಅನುಸರಿಸಿ ಅಕ್ಷರ ಪರಬ್ರಹ್ಮ ಯೋಗದಲ್ಲಿರುವ ರಾತ್ರಿ ಹಗಲು, ಶುಕ್ಲಪಕ್ಷ, ಕೃಷ್ಣಪಕ್ಷಗಳು, ಉತ್ತರಾಯಣ, ದಕ್ಷಿಣಾಯಣಗಳ ಜ್ಞಾನವನ್ನು ಅನುಸರಿಸಿ, ಮನುಷ್ಯನಿಗಿರುವ ಕರ್ಮಗಳನ್ನು ಅನುಸರಿಸಿ, ಹಾಗೆಯೇ ಮನುಷ್ಯನಿಗಿರುವ ಗುಣಗಳನ್ನು ಅನುಸರಿಸಿ ಒಟ್ಟಾರೆ ದೈವಜ್ಞಾನವನ್ನು ಅನುಸರಿಸಿ ದೇವರ ಗುರುತನ್ನು ಚಿತ್ರಿಸುವುದು ನಡೆದಿದೆ. ಅದರೊಂದಿಗೆ ಜೀವಾತ್ಮ ಆಕಾರವನ್ನು, ಜೀವಾತ್ಮ ಆಕಾರದೊಂದಿಗೆ ಮನಸ್ಸು, ಬುದ್ಧಿ, ಚಿತ್ತ ಒಂದರ ಆಕಾರಗಳನ್ನು ಸುಲಭವಾಗಿ ಚಿತ್ರಿಸಿದ್ದೇವೆ.

ಸೂಕ್ಷ್ಮವಾಗಿರುವ ಮನಸ್ಸಿಗೆ, ಬುದ್ಧಿಗೆ, ಚಿತ್ತಕ್ಕೆ, ಅಹಂಗೆ, ಜೀವಿಗೆ ಆಕಾರಗಳನ್ನು ತೋರಿಸುವುದೇ ಅಲ್ಲದೇ ದೇವರ ಮುದ್ರೆ ಆಕಾರವು ಎಲ್ಲರಿಗೂ ತಿಳಿಯುವಂತೆ ಬರೆದು ತೋರಿಸಲಾಯಿತು. ಅಂದಿನಿಂದ ನನ್ನ ಬೋಧನೆಗಳು

ಎಲ್ಲವೂ ಬೇರೆಯಾಗಿ ಪ್ರತ್ಯೇಕವಾಗಿ ಕಾಣಿಸಿವೆ. ಅದರಿಂದ ನಾವು ಬರೆಯುವ ಜ್ಞಾನವೆಲ್ಲವೂ ಹೊಸದಾಗಿ ಸಂಚಲನಾತ್ಮಕವಾಗಿ ಇರುವುದರಿಂದ ನನ್ನನ್ನು ಎಲ್ಲರೂ **"ಸಂಚಲನಾತ್ಮಕ ರಚಯಿತ (ಗ್ರಂಥಕರ್ತ)"** ಎಂದು ಹೇಳಿದ್ದಾರೆ. ನಾನು ಅಂದಿನಿಂದ ಇಂದಿನ ವರೆಗು 85 ಗ್ರಂಥಗಳನ್ನು ಬರೆಯುವುದು ನಡೆದಿದೆ. ಇದು 77ನೇ ಗ್ರಂಥ. ಶೀಘ್ರದಲ್ಲಿ ನೂರು (100) ಗ್ರಂಥಗಳು ಬರೆಯ ಲಾಗುತ್ತದೆಂದು ಅಂದುಕೊಳ್ಳುತ್ತಿದ್ದೇನೆ. ನಾನು ಎಲ್ಲ ಗ್ರಂಥಗಳಲ್ಲಿಯೂ **'ತ್ರೈತ ಸಿದ್ಧಾಂತ ಜ್ಞಾನವನ್ನು'** ಆಧಾರ ಮಾಡಿಕೊಂಡು ಬರೆದಿದ್ದೇವೆ. ಹಾಗೇ 'ದೇವರ ಮುದ್ರೆ'ಯನ್ನು ತೋರಿಸುತ್ತಾ ಗ್ರಂಥಗಳನ್ನು ಬರೆದಿದ್ದೇವೆ. ತ್ರೈತಸಿದ್ಧಾಂತವು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಇದೆಯೆಂದು ಅಲ್ಲಿಂದ ತೆಗೆದು ತೋರಿಸಿದ್ದೇವೆ ಎಂದು ಅಂದುಕೊಳ್ಳುತ್ತಿದ್ದೆನು. ಆದರೇ ಭಗವದ್ಗೀತೆ ಸೃಷ್ಠಿ ಆದಿಯಲ್ಲಿ ಹೇಳಿರುವ ಜ್ಞಾನ, ನಂತರ ಅದು ಪ್ರಥಮ ದೈವಗ್ರಂಥವಾಗಿ ರೂಪಗೊಂಡಿದೆ. ನಂತರ ಅದೇ ಜ್ಞಾನವೇ ಅಂದರೇ ಸೃಷ್ಠಿ ಆದಿಯಲ್ಲಿ ಹೇಳಿರುವ ಜ್ಞಾನವೇ ನಂತರ ಹೇಳಲ್ಪಟ್ಟಿದೆ. ಅದೇ ಜ್ಞಾನವೇ ಬೈಬಲ್, ಖುರಾನ್‌ಆಗಿ ತಯಾರಾಗಿದೆ. ಮೂರು ಗ್ರಂಥಗಳಲ್ಲಿನ ಜ್ಞಾನವು ಒಂದೇ ದೇವರಿಗೆ ಸಂಬಂಧಿ ಸಿರುವುದೆಂದು ಹೇಳುತ್ತಲೇ ಇದ್ದೇವೆ. **ದೇವರು ಒಬ್ಬನೇ, ದೇವರ ಜ್ಞಾನವು ಒಂದೇ**. ಹಾಗಿರುವಾಗ 'ತ್ರೈತ ಸಿದ್ಧಾಂತವು' ಭಗವದ್ಗೀತೆಯಲ್ಲಿ ಇರುವಾಗ, ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಅದೇ ಇರಬೇಕಲ್ಲವೇ! ಎಂದು ಆಲೋಚನೆ ಬಂದಿದೆ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ ಇರುವ ದೇವರ ಚಿಹ್ನೆ ನಂತರ ಎರಡು ಗ್ರಂಥಗಳಲ್ಲಿ ಇರುವಂತೆ ತಿಳಿದುಹೋಗಿದೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ ತ್ರೈತ ಸಿದ್ಧಾಂತವು ಕ್ಷರ, ಅಕ್ಷರ, ಪುರುಷೋತ್ತಮ ಜ್ಞಾನವು ಉಳಿದ ಗ್ರಂಥಗಳಲ್ಲಿ ಕೂಡಾ ಇರುತ್ತದೆಂದು ಅಂದುಕೊಂಡಿದ್ದೇವೆ. ಭಗವದ್ಗೀತೆಯಲ್ಲಿ ತ್ರೈತ ಸಿದ್ಧಾಂತವಿರುವ ಪುರುಷೋತ್ತಮ ಪ್ರಾಪ್ತಿ ಯೋಗ ದಲ್ಲಿರುವ 16, 17 ಶ್ಲೋಕಗಳನ್ನು ನೋಡೋಣ.

**ಶ್ಲೋ॥ 16. ದ್ವಾವಿಮೌ ಪುರುಷೌ ಲೋಕೇಕ್ಷರ ಶ್ಚಾಕ್ಷರ ಏವಚ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ॥**

**ಭಾವಾರ್ಥ :– "ಭೂಮಿಮೇಲಿರುವ ಪುರುಷರಲ್ಲಿ ಕ್ಷರನು, ಅಕ್ಷರನು ಎನ್ನುವವರು ಇದ್ದಾರೆ. ಸರ್ವಜೀವರಾಶಿಗಳಲ್ಲಿ ಜೀವಿಯಾಗಿ ಕ್ಷರನು ಇದ್ದಾನೆ. ಅಕ್ಷರನು ಜೀವಿಯೊಂದಿಗೆ (ಕ್ಷರನಜೊತೆ) ಶರೀರದಲ್ಲೇ ಇದ್ದಾನೆ. ಜೀವಾತ್ಮ ನಾಶವಾಗುವ ಕ್ಷರನಾಗಿ ಹೇಳಲ್ಪಟ್ಟಿದ್ದಾನೆ. ಆತ್ಮ ನಾಶವಾಗದ ಆತ್ಮವಾಗಿ ಹೇಳಿ ಅಕ್ಷರನಾಗಿ ಹೇಳಲ್ಪಟ್ಟಿದ್ದಾನೆ. ಕ್ಷರನು, ಅಕ್ಷರನು ಇಬ್ಬರು ಶರೀರದಲ್ಲಿ ಇದ್ದಾರೆ."**

**ಶ್ಲೋ॥ 17. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ।**
**ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ॥**

**ಭಾವಾರ್ಥ :– "ಕ್ಷರ ಅಕ್ಷರ ಪುರುಷರಿಗಿಂತಲೂ ಉತ್ತಮನಾದ ಪುರುಷನು ಅನ್ಯವಾಗಿ ಮೂರನೆಯವನಾಗಿ ಶರೀರದಲ್ಲಿಯೇ ಇದ್ದಾನೆ. ಆತನನ್ನೇ ಪುರುಷೋತ್ತಮನೆಂದು ಕರೆಯುತ್ತಿದ್ದೇವೆ. ಆತನನ್ನೇ ಪರಮಾತ್ಮನೆಂದು ಕರೆಯುತ್ತಿದ್ದೇವೆ. ಪರಮಾತ್ಮ ಶರೀರದಲ್ಲಿದ್ದು ತ್ರಿಲೋಕಗಳನ್ನು ಆವರಿಸಿದ್ದಾನೆ. ಆತನನ್ನೇ ದೇವರು ಎಂದು ಹೇಳುತ್ತಿದ್ದೇವೆ."** ಕ್ಷರನು ಜೀವಾತ್ಮನಾದರೇ, ಅಕ್ಷರನು ಆತ್ಮವಾದರೇ, ಪುರುಷೋತ್ತಮನಾಗಿ ಪರಮಾತ್ಮ ಇದ್ದಾನೆ. ಈ ಎರಡು ಶ್ಲೋಕಗಳು ಭಗವದ್ಗೀತೆಯಲ್ಲಿದ್ದರೂ ಅದರಲ್ಲಿ ತ್ರೈತ ಸಿದ್ಧಾಂತವಿದೆಯೆಂದು ಯಾರೂ ತಿಳಿಯಲಾರದೆ ಹೋಗಿದ್ದಾರೆ. ಉಳಿದ ಎರಡು ಗ್ರಂಥಗಳಿಗೆ ಭಗವದ್ಗೀತೆ ಆಧಾರವಾಗಿ ಇದೆಯೆಂದೂ, ಉಳಿದ ಎರಡು ಗ್ರಂಥಗಳು ಭಗವದ್ಗೀತೆಯನ್ನು ಸತ್ಯಗ್ರಂಥವಾಗಿ ಅಂಗೀಕರಿಸುತ್ತಿವೆಯೆಂದು, ಅದರಲ್ಲಿ ದೈವಜ್ಞಾನವಿದೆ ಎಂದು ದೃಢಪಡಿಸುತ್ತಿವೆಯೆಂದು ಹೇಳುತ್ತಿದ್ದಾರೆ. ಭಗವದ್ಗೀತೆ ಒಂದು ಜ್ಯೋತಿ, ಮಾರ್ಗದರ್ಶಿನಿಯಾಗಿದೆ. ಹಾಗೆಯೇ ಉಳಿದ ಎರಡು ಗ್ರಂಥಗಳಲ್ಲಿ ಜ್ಯೋತಿಯಾಗಿ ಇದೆಯೆಂದು, ಮಾರ್ಗದರ್ಶಕವಾಗಿ ಇದೆಯೆಂದು ನೋಡುತ್ತಲೇ ಹೇಳಬಹುದು. ಮೂರರಲ್ಲು ಒಂದೇ ಜ್ಞಾನವಿರುವಾಗ **"ತ್ರೈತ ಸಿದ್ಧಾಂತ"**

ಉಳಿದ ಎರಡು ಗ್ರಂಥಗಳಲ್ಲಿ ತಪ್ಪದೇ ಇರುತ್ತದೆಂದು ಎರಡು ಗ್ರಂಥಗಳಲ್ಲಿ ಹುಡುಕಿದೆನು. ಮೊದಲು ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ ಮೂರು ಆತ್ಮಗಳನ್ನು ಕುರಿತು ಇದೆಯೆಂದು ನೋಡಿದ್ದೇನೆ. ಅದು ಹೀಗಿದೆ **(ಮತ್ತಾಯ 28-19,20) "ಆದ್ದರಿಂದ ನೀವು ಹೋಗಿ ಸರ್ವ ಜನರನ್ನು ಶಿಷ್ಯರಾಗಿ ಮಾಡಿ. ತಂದೆಯೊಬ್ಬನ, ಕುಮಾರನೊಬ್ಬನ, ಪರಿಶುದ್ಧಾತ್ಮ ವೊಂದರ ನಾಮದಲ್ಲಿ ಅವರಿಗೆ ಬಾಪ್ತಿಸ್ಮ ಕೊಡುತ್ತಾ ನಾನು ನಿಮಗೆ ಯಾವಯಾವ ಸಂಗತಿಗಳನ್ನು ಆಜ್ಞಾಪಿಸಿದ್ದೇನೋ ಅವುಗಳೆಲ್ಲವನ್ನು ಕೈಗೊಳ್ಳಬೇಕೆಂದು ಅವರಿಗೆ ಬೋಧಿಸಿರಿ. ಇಗೋ ನಾನು ಯುಗ ಸಮಾಪ್ತದ ವರೆಗು ಸದಾಕಾಲ ನಿಮ್ಮೊಂದಿಗೆ ಕೂಡಾ ಇದ್ದೇನೆಂದು ಅವರೊಂದಿಗೆ ಹೇಳಿದನು"** ಎಂದು ಇದೆ. ಇಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮಯೆಂದು ಸ್ವಲ್ಪ ಮುಂದೆ ಹಿಂದೆ ಹೇಳಿರುವುದಾಗಿದೆ. ಕುಮಾರನು, ತಂದೆ, ಪರಿಶುದ್ಧಾತ್ಮ ಎಂದು ಇದ್ದರೇ ಎಲ್ಲರಹಾಗೆ ಭಗವದ್ಗೀತೆಯಲ್ಲಿನ 'ಕ್ಷರ, ಅಕ್ಷರ, ಪುರುಷೋತ್ತಮ' ಎನ್ನುವ ಮೂರು ಆತ್ಮಗಳ ಮೇಲೆ ದೃಷ್ಠಿ ಹೋಗುತ್ತಿತ್ತು. ಹಾಗೆ ಭಗವದ್ಗೀತೆಯಲ್ಲಿನ ಶ್ಲೋಕವೊಂದರ ವಿಷಯವೇ ಇಲ್ಲಿದೆ ಎಂದು ತಿಳಿಯದಂತೆ ಸ್ವಲ್ಪ ಬದಲಾಯಿಸಿ ಹೇಳಿದ್ದಾರೆ. ತಂದೆ ಎಂದರೇ ಅಕ್ಷರನು, ಕುಮಾರನು ಎಂದರೇ ಕ್ಷರನು, ಪರಿಶುದ್ಧಾತ್ಮ ಎಂದರೇ ಪರಮಾತ್ಮ ಎಂದು ತಿಳಿದರೇ "ತ್ರೈತ ಸಿದ್ಧಾಂತ" ಬೈಬಲ್‌ನಲ್ಲಿ ಕೂಡಾ ಇದೆಯೆಂದು ಅರ್ಥವಾಗಬಹುದು. ಭಗವದ್ಗೀತೆಯಲ್ಲಿಯೂ ಬೈಬಲ್ ಗ್ರಂಥದಲ್ಲಿಯೂ ಒಂದೇ ಸಿದ್ಧಾಂತ ಇದೆಯೆಂದು ತಿಳಿದು ಹೋಗಿದೆ. ನಾನು ಬೈಬಲ್‌ನ್ನು ನೋಡುವುದಕ್ಕಿಂತ ಮುನ್ನ ಭಗವದ್ಗೀತೆಯನ್ನು ನೋಡಿ ಅದರಲ್ಲಿ ಯಾರೂ ಗುರುತಿಸಲಾರದ **'ತ್ರೈತ ಸಿದ್ಧಾಂತ'**ವನ್ನು ಗುರುತಿಸಿದ್ದೇವೆ. ನಂತರ ಭಗವದ್ಗೀತೆಯನ್ನು ಅನುಸರಿಸಿ ಹುಟ್ಟಿರುವ, ಭಗವದ್ಗೀತೆ ಜ್ಞಾನದಿಂದಲೇ ತುಂಬಿರುವ ಬೈಬಲ್‌ನಲ್ಲಿ ಮೂರು ಆತ್ಮಗಳ ಜ್ಞಾನವಿರುತ್ತದೆಯೆಂದು ಹುಡುಕಿದ್ದೇನೆ. ನಾನು ಊಹಿಸಿದಹಾಗೆಯೇ ದೊರೆತಿದೆ. ನಂತರ ಖುರಾನ್ ಗ್ರಂಥದಲ್ಲಿ ಕೂಡಾ ತ್ರೈತ ಸಿದ್ಧಾಂತ ಇರುತ್ತದೆಯೆಂದು ಅಂದುಕೊಂಡಿದ್ದೇನೆ.

ಖುರಾನ್ ಗ್ರಂಥವನ್ನು ಕೂಡಾ ನೋಡಲು ಆರಂಭಿಸಿದೆನು. ಖುರಾನ್ ಗ್ರಂಥದಲ್ಲಿ ಕೆಲವು ವಾಕ್ಯಗಳು ಬಹಳ ನಿಗೂಢವಾಗಿ ಇರುವಂತೆ ತಿಳಿಯಿತು. ಸೂರಾ ಐದರೊಳಗೆ ಹೋಗಿ ನೋಡಿದರೇ ಅದರಲ್ಲಿ **"ತೌರಾತ್ ಗ್ರಂಥ"** ಅನುಸರಿಸಿ ಖುರಾನ್ ಗ್ರಂಥ, ಬೈಬಲ್ ಗ್ರಂಥವಿದ್ದಂತೆ ಬರೆದಿರುವುದನ್ನು ನೋಡಿದ್ದೇನೆ. ತೌರಾತ್ ಗ್ರಂಥ ಎಂದರೇ ಆಗ ಅರ್ಥವಾಗಲಿಲ್ಲ ಆದರೇ, ನಂತರ ಭಗವದ್ಗೀತೆಯೇ ತೌರಾತ್ ಗ್ರಂಥವೆಂದು ತಿಳಿದು ಹೋಗಿದೆ. **ಖುರಾನ್ ಗ್ರಂಥ 114 ಸೂರಾಗಳೊಂದಿಗೆ, 6236 ವಾಕ್ಯಗಳೊಂದಿಗೆ ಇದೆ.** ಎಲ್ಲ ಸೂರಾಗಳನ್ನು ನೋಡುತ್ತಾ ಹೋದರೇ **50ನೇ ಸೂರಾದಲ್ಲಿ 21ನೇ ವಾಕ್ಯದಲ್ಲಿ 'ತ್ರೈತ ಸಿದ್ಧಾಂತ'** ಇರುವಂತೆ ನಾನು ಗುರುತಿಸಿದ್ದೇನೆ. ಭಗವದ್ಗೀತೆಯಲ್ಲಿ ಹೇಳಿರುವುದಕ್ಕಿಂತಲೂ ಖುರಾನ್‌ನಲ್ಲಿ ಹೇಳಿರುವುದು ಒಂದೇ ಸಿದ್ಧಾಂತವೇ ಆದರೂ ಕಂಡುಕೊಳ್ಳುವುದಕ್ಕೆ ಅವಕಾಶವಿಲ್ಲದೇ ಹೇಳಿದ್ದಾರೆ. ಇಲ್ಲಿ ಖುರಾನ್‌ನಲ್ಲಿ ಕೂಡಾ ಅದೇ ವಿಧವಾಗಿ ಹೇಳಲ್ಪಟ್ಟಿದೆ. ಖುರಾನ್‌ನಲ್ಲಿರುವುದು ತ್ರೈತ ಸಿದ್ಧಾಂತ ಜ್ಞಾನವೇ ಆದರೂ ಬೈಬಲ್, ಭಗವದ್ಗೀತೆಗಿಂತಲೂ ಭಿನ್ನವಾಗಿ ಕಂಡುಹಿಡಿಯುವು ದಕ್ಕೆ ಅವಕಾಶವಿಲ್ಲದೇ ಹೇಳಿದ್ದಾರೆ. ಹೇಗೆ ಹೇಳಿದರೂ ನಾನು ತ್ರೈತ ಸಿದ್ಧಾಂತವೆಂದು ಹೆಸರಿಟ್ಟು ಹೇಳಿರುವ ಜ್ಞಾನವು ಮೂರು ಗ್ರಂಥಗಳಲ್ಲಿ ಇರುವುದನ್ನು ನೋಡಿ ಸಂತೋಷವಾಗಿದೆ. ಖುರಾನ್ ಗ್ರಂಥದಲ್ಲಿ50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿರುವ ವಾಕ್ಯವನ್ನು ನೋಡೋಣ. **(50-21) "ಪ್ರತಿ ಜೀವಾತ್ಮ (ಪ್ರತಿ ಪ್ರಾಣಿ) ನಡೆಸುವವನೊಂದಿಗೆ, ಮತ್ತೊಂದು ಸಾಕ್ಷ್ಯಕೊಡುವವನೊಂದಿಗೆ ಸಹ ಬರುತ್ತದೆ"** ಮತ್ತೊಂದು ಗ್ರಂಥದಲ್ಲಿ **(50-21) "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡುಬರುವವನೊಬ್ಬನು, ಸಾಕ್ಷ್ಯವನ್ನು ಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ"** ಎಂದು ಇದೆ. ಈ ವಾಕ್ಯವು ಬೇರೆ ವಿಧವಾಗಿ ಕಾಣಿಸಿದರೂ ಇದು ತ್ರೈತಸಿದ್ಧಾಂತ ವಾಕ್ಯವೆಂದು ತಿಳಿದುಹೋಯಿತು. ಪ್ರತಿ ಜೀವಾತ್ಮ ಅಥವಾ ಪ್ರತಿ ವ್ಯಕ್ತಿಯೆಂದು ಹೇಳಲ್ಪಟ್ಟಿದೆ ಜೀವಿಯನ್ನು ಕುರಿತಾಗಿಯೇ ಎಂದು ಅರ್ಥವಾಗುತ್ತಿದೆ. ಜೀವಾತ್ಮ ಎಂದರೇ ನಾಶವಾಗುವ ಕ್ಷರ ಪುರುಷನೆಂದೂ, ನಡೆಸುವವನು ಎಂದರೇ

ಅಕ್ಷರ ಪುರುಷನಾದ ಆತ್ಮ ಎಂದೂ, ಸಾಕ್ಷಿಯಾಗಿರುವವನು ಏನೂ ಮಾಡದ ಪುರುಷೋತ್ತಮನು ಅಥವಾ ಪರಮಾತ್ಮಯೆಂದೂ ತಿಳಿದುಹೋಗುತ್ತಿದೆ. ಮೂರು ಗ್ರಂಥಗಳಲ್ಲಿಯೂ ಮೂರು ವಾಕ್ಯಗಳು ನೋಡುತ್ತಲೇ ಗುರುತು ಹಿಡಿಯದಷ್ಟು ಬೇರೆಬೇರೆ ವಿಧಾನಗಳಾಗಿ ಹೇಳಲ್ಪಟ್ಟಿವೆ.

ತ್ರೈತ ಸಿದ್ಧಾಂತ ವಾಕ್ಯಗಳು ಮೂರು ಗ್ರಂಥಗಳಲ್ಲಿ ಇರುವುದು, ಅದೇ ಗ್ರಂಥಗಳಲ್ಲಿ **ದೇವರ ಚಿಹ್ನೆ ಅಥವಾ ದೇವರ ಮುದ್ರೆಯನ್ನು** ಕುರಿತು ಹೇಳಿರುವುದನ್ನು ನೋಡಿದರೇ ದೇವರ ಬೋಧನೆಯನ್ನು ನಾನು ಹೇಳಿದ್ದೇನಾ, ಅಥವಾ ನನ್ನ ಬೋಧನೆಯನ್ನು ದೇವರು ಹೇಳಿದ್ದಾನಾ ಎಂದು ಆಲೋಚನೆ ಬಂದಿದೆ. ಹೇಗಾದರೇನು ಯಾರಿಗೂ ತಿಳಿಯದೆನ್ನುವ ದೇವರ ಮುದ್ರೆ ಮೂರು ಗ್ರಂಥಗಳಲ್ಲಿ ಹೇಳಿರುವುದು ನನಗೆ ಬಲವನ್ನು ಕೈಗೂಡಿಸಿದಂತಾಗಿದೆ. **ನಾನು ಗೀಚಿರುವ ದೇವರ ಮುದ್ರೆ ಆಕಾರವಾಗಲೀ, ಅದರ ಹೆಸರಾಗಲೀ ಯಾರೂ ಕೇಳಲಿಲ್ಲ, ಯಾರೂ ನೋಡಲಿಲ್ಲ. ಯಾರಿಗೂ ತಿಳಿಯದಿರುವುದು ಮೂರು ದೈವಗ್ರಂಥಗಳಲ್ಲಿ ಇರುವುದನ್ನು ನೋಡಿದ ನಂತರ ನನ್ನ ಜ್ಞಾನದ ಮೇಲೆ ದೇವರ ದೃಷ್ಟಿ ಇದೆಯೆಂದು, ದೇವರ ಜ್ಞಾನದ ಮೇಲೆಯೇ ನಾನಿದ್ದೇನೆನ್ನುವ ನಂಬಿಕೆ ನನಗೆ ಉಂಟಾಗಿದೆ. ಯಾವುದು ಏನಾದರೂ ದೈವಗ್ರಂಥಗಳಲ್ಲಿರುವ ದೇವರ ಚಿಹ್ನೆ ಅಥವಾ ದೇವರ ಮುದ್ರೆಯೊಂದರ ಆಕಾರವನ್ನು ತೋರಿಸಿರುವ ವ್ಯಕ್ತಿಯನ್ನು ನಾನೇ ಆಗಿರವುದಕ್ಕೆ, ನನ್ನಿಂದ ನನ್ನ ಆತ್ಮ ಆ ಆಕಾರವನ್ನು ಗೀಚಿರುವುದಕ್ಕೆ ನನ್ನ ಮೂಲಕ ಪ್ರಪಂಚಕ್ಕೆ ದೇವರ ಮುದ್ರೆ ಕಾಣಿಸುವುದು ನನಗೆ ಸ್ವಲ್ಪ ಸಂತೋಷವೇ ಅಲ್ಲವೇ!** ದೇವರ ಚಿಹ್ನೆಯೊಂದರ ಆಕಾರವು ಜ್ಞಾನದೊಂದಿಗೆ ಕೂಡಿಕೊಂಡಿರುವುದಾಗಿದೆ. ಅಷ್ಟೇ ಅಲ್ಲದೇ ಎಲ್ಲರಿಗೂ ತಿಳಿಯದ ವಿಷಯವು ಗ್ರಂಥದಲ್ಲಿ ಕೂಡಾ ಬರೆಯದ ವಿಷಯವೊಂದಿದೆ. ಅದೇನೆಂದರೇ! **ಪ್ರತಿ ಮನುಷ್ಯನ ಹಣೆಯ ಭಾಗದಲ್ಲಿ ತಲೆಯಲ್ಲಿ ದೇವರ ಚಿಹ್ನೆ ಅದೃಶ್ಯ ರುಪವಾಗಿ ನಾನು ತೋರಿಸಿರುವ ಆಕಾರದಲ್ಲಿಯೇ ಇದೆ. ಈದಿನ ದೇವರ ಮುದ್ರೆ ಜ್ಞಾನವನ್ನು ತಿಳಿದಿರುವವರು ತಮ್ಮ ಹಣೆಯ ಮೇಲೆ ಧರಿಸಿರುವಾಗ ಅದನ್ನು ಜ್ಞಾನವಿಲ್ಲದವರು ದೇವರ ಮುದ್ರೆಯನ್ನು ಧರಿಸುತ್ತಿಲ್ಲ.**

**ಆದರೇ ಧರಿಸದವರ ತಲೆಯಲ್ಲಿ ತಲೆ ಮಧ್ಯೆ ಭಾಗದಲ್ಲಿ ಹಣೆಗೆ ಎದುರಾಗಿ ದೇವರ ಚಿಹ್ನೆ ಅಥವಾ ದೇವರ ಮುದ್ರೆ ಅದೃಶ್ಯವಾಗಿ ಇದೆ. ಪ್ರತಿ ಮನುಷ್ಯನಲ್ಲಿಯು, ಮತ ಯಾವುದಾದರೂ ಜ್ಞಾನವಿದ್ದರೂ, ಜ್ಞಾನವಿಲ್ಲದಿದ್ದರೂ, ಕ್ರೈಸ್ತನಾದರೂ, ಮುಸ್ಲಿಮ್ ಆದರೂ, ಹಿಂದೂವಾದರೂ ಪ್ರತಿಯೊಬ್ಬನಲ್ಲು ಯಾರಿಗು ಕಾಣಿಸದೆ ಅವರ ತಲೆ ಮಧ್ಯೆ ಭಾಗದಲ್ಲಿ ಮೆದುಳಿನಲ್ಲಿ ಹಣೆಯ ಭಾಗಕ್ಕೆ ಎದುರಾಗಿ ಒಳಗೆ ಅದೃಶ್ಯ ರೂಪವಾಗಿ ದೇವರ ಚಿಹ್ನೆ ನಿಕ್ಷಿಪ್ತವಾಗಿದೆ. ಮೂರು ಮತಗಳ ಗ್ರಂಥಗಳಲ್ಲಿ ಅದೇ ದೇವರ ಮುದ್ರೆಯನ್ನು ಕುರಿತು ಬರೆದಿದ್ದೇವೆ. ಇನ್ನೊಂದು ವಿಷಯವೇನೆಂದರೇ! ಮನುಷ್ಯರ ಜಾತಿಯಲ್ಲೇ ಅಲ್ಲದೇ ಉಳಿದ ಎಲ್ಲ ಜಾತಿಗಳ ಜೀವರಾಶಿಗಳ ತಲೆಯಲ್ಲಿ ಕೂಡಾ ದೇವರ ಮುದ್ರೆ ಅದೃಶ್ಯವಾಗಿ ಇದೆಯೆಂದು ತಿಳಿಯುತ್ತಿದೆ.** ಈ ದೇವರ ಮುದ್ರೆಯನ್ನು ಕುರಿತು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿಯೇ ಹೇಳಿದ್ದಾರೆ. ಅದನ್ನು ಕೆಳಗೆ ನೋಡಿರಿ.

**ಶ್ಲೋ॥ 1. ಊರ್ಧ್ವ ಮೂಲ ಮಧಶ್ಶಾಖ ಮಶ್ವತ್ಥಂ ಪ್ರಾಹು ರವ್ಯಯಮ್।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್।**

**ಭಾವಾರ್ಥ :– "ಮೇಲೆ ಬೇರುಗಳು ಕೆಳಗೆ ಕೊಂಬೆಗಳು ಇದೆ, ನಾಶವಿಲ್ಲದ್ದು, ವೇದಗಳು ಎಲೆಗಳಾಗಿ ಇದೆ, ಅರ್ಥವಾಗದಿರುವುದೆಂದು ಹೇಳದಂತೆ ಅಶ್ವರ್ಥ ಎನ್ನುವ ಹೆಸರು ಹೊಂದಿರುವ ದೇವರ ಮುದ್ರೆ ಅಥವಾ ದೇವರ ಚಿಹ್ನೆ ಪ್ರತಿ ಮನುಷ್ಯನ ಶರೀರದಲ್ಲಿಯೂ ಇದೆ."**

ಈ ಶ್ಲೋಕವೊಂದರ ಭಾವನೆಯಲ್ಲಿ ಇಲ್ಲಿಯವರೆಗು ಅಶ್ವರ್ಥವೆನ್ನುವ ವೃಕ್ಷದ ಮೇಲ್ಭಾಗಕ್ಕೆ ಬೇರುಗಳು, ಕೆಳ ಭಾಗಕ್ಕೆ ಕೊಂಬೆಗಳು ಹೊಂದಿದೆಯೆಂದು ವೃಕ್ಷದಹಾಗೆ ಹೋಲಿಸಿಕೊಂಡಿದ್ದೇವೆ. **ವೃಕ್ಷವಾಗಿ ಹೋಲಿಸಿರುವುದೇ ದೇವರ ಮುದ್ರೆ** ಎಂದು ತಿಳಿಯಬೇಕು. ಅದೇ ದೇವರ ಮುದ್ರೆ ಭಗವದ್ಗೀತೆಯಲ್ಲಿಯೇ ಅಲ್ಲದೇ ಬೈಬಲ್, ಖುರಾನ್ ಗ್ರಂಥಗಳಲ್ಲಿ ಕೂಡಾ ಹೇಳಲ್ಪಟ್ಟಿದೆ. ಅಂತಹ

ದೊಡ್ಡ ದೇವರ ಮುದ್ರೆಯನ್ನೇ ತ್ರೈತ ಸಿದ್ಧಾಂತ ಜ್ಞಾನ ತಿಳಿದಿರುವವರು ಧರಿಸುತ್ತಿದ್ದಾರೆ. ತಿಳಿಯದವರು ಧರಿಸುತ್ತಿಲ್ಲ. ಮೇಲ್ನೋಟಕ್ಕೆ ಧರಿಸಿದರೂ, ಧರಿಸದೆ ಹೋದರೂ ಅದು ಪ್ರತಿ ಜೀವರಾಶಿ ಶರೀರದಲ್ಲಿ ತಲೆಯಲ್ಲಿ ದೇವರ ಮುದ್ರೆ ಇದೆ. ದೇವರ ಚಿಹ್ನೆ ಇರುವವನೇ ಪ್ರಾಣದಿಂದ ಇರುತ್ತಾನೆ. ಯಾವಾಗ ಮುದ್ರೆ ಹೊರಗೆ ಹೋಗುತ್ತಿದೆಯೋ ಆಗ ಆತನ ಪ್ರಾಣವು ಕೂಡಾ ಹೊರಗೆ ಹೋಗುವುದು. ಮನುಷ್ಯ ಸಜೀವವಾಗಿ ಇದ್ದಾನೆ ಎಂದರೇ ಅವನಲ್ಲಿ ದೇವರ ಮುದ್ರೆ ಇದೆಯೆಂದು, ಯಾರು ಸಜೀವವಾಗಿ ಇಲ್ಲ ಎಂದರೇ ಅವನ ಶರೀರದಲ್ಲಿ ಮುದ್ರೆ ಇಲ್ಲವೆಂದು ಹೇಳಬಹುದು. ಅಷ್ಟಾಗಿ ಎಲ್ಲರೊಂದಿಗೆ ಸಂಬಂಧಪಟ್ಟಿರುವ ದೇವರ ಮುದ್ರೆ ಹೇಗಿದೆಯೋ ಅದರ ಆಕಾರವನ್ನು ಈಗ ನೋಡೋಣ. ದೇವರ ಮುದ್ರೆಗೆ ನಾವು ಇಟ್ಟಿರುವ ಹೆಸರು ಬ್ರಹ್ಮ, ಕಾಲ, ಕರ್ಮ ಗುಣಚಕ್ರಗಳೆಂದು ಹೇಳಿದ್ದೇವೆ.

ಇಲ್ಲಿಯವರೆಗು **'ದೇವರ ಚಿಹ್ನೆ'** ಅಥವಾ **'ದೇವರ ಮುದ್ರೆ'** ಯನ್ನು ಕುರಿತು ಹೇಳಿಕೊಂಡಿದ್ದೇವೆ. ದೇವರ ಮುದ್ರೆಯನ್ನು ಕುರಿತು ಮೂರು ಗ್ರಂಥಗಳನ್ನು ಒರೆಕಲ್ಲಾಗಿ ಮಾಡಿ ಒರೆಕಲ್ಲಿನ ಪ್ರಕಾರ ಹೇಳಿಕೊಂಡಿದ್ದೇವೆ.



ಒರೆಕಲ್ಲಿನ ಶಾಸ್ತ್ರೀಯತೆಯನ್ನು ಉಪಯೋಗಿಸಿಕೊಂಡು ದೇವರ ಚಿಹ್ನೆಯನ್ನು ವಿವರಿಸಿಕೊಂಡಿದ್ದೇವೆ. **'ಹಣೆಯ ಮೇಲೆ ದೇವರ ಮುದ್ರೆಯನ್ನು ಧರಿಸದವನನ್ನು ಹೊರತುಪಡಿಸಿ ಉಳಿದವರನ್ನು ಏನು ಅನ್ನಬೇಡವೆಂದು ದೇವದೂತರಿಗೆ ದೇವರು ಹೇಳಿದಂತೆ'** ಪ್ರಕಟಣೆಗಳ ಗ್ರಂಥ 9–4ರಲ್ಲಿ ಇದೆ. 'ದೇವರ ಆಜ್ಞೆ ಪ್ರಕಾರ ದೇವದೂತರು ಐದು ತಿಂಗಳವರೆಗೆ ಚೇಳು ಕುಟಿಕಿದಷ್ಟು ಬಾಧೆಯಿಂದ ನೋಯಿಸಬಹುದೆಂದು ದೇವರ ಆಜ್ಞೆ ಇದೆ.' ಆದರೇ 'ಸಾಯಿಸದೇ ಬಾಧಿಸಿರೆಂದು, ಕೊಲ್ಲುವ ಹಕ್ಕು ಕೊಡಲಿಲ್ಲವೆಂದು' ಕೂಡಾ ಹೇಳಿದಂತೆ ಅಲ್ಲೇ ಗ್ರಂಥದಲ್ಲಿದೆ. ದೇವರ ಚಿಹ್ನೆಯನ್ನು ಧರಿಸದೇ ಅನವಶ್ಯವಾಗಿ ದೇವದೂತರೊಂದಿಗೆ ಬಾಧೆಗಳು ತಂದುಕೊಳ್ಳುವುದಕ್ಕಿಂತ ದೇವರ ಮುದ್ರೆಯನ್ನು ಧರಿಸಿ ಬಾಧೆಗಳಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡೋಣ.

# ಉಪವಾಸಗಳು

**ಪ್ರಶ್ನೆ :– ದೇವರ ಆರಾಧನೆಗಳಾಗಿರುವವು ಎಷ್ಟೋ ಇವೆ. ಮೂರು ಮತಗಳಲ್ಲಿ ಮೂರು ಬೇರೆಬೇರೆ ವಿಧಗಳಾಗಿ ದೇವರ ಆರಾಧನೆಗಳು ಮಾಡುತ್ತಿದ್ದಾರೆ. ಹಿಂದೂಗಳು 1) ಯಜ್ಞ 2) ದಾನ 3) ವೇದಪಠನೆ 4) ತಪಸ್ಸುಗಳು ಮಾಡುತ್ತಿರುವಾಗ, ಕ್ರೈಸ್ತರು ಚರ್ಚಿನಲ್ಲಿ ಭಾನುವಾರ ಪ್ರಾರ್ಥನೆ ಮಾಡುತ್ತಿದ್ದಾರೆ. ಮುಸ್ಲಿಮರೊಳಗೆ ಬಂದು ನೋಡಿದರೇ ಹಿಂದೂಗಳಿಗೆ ಇರುವಹಾಗೆಯೆ ಅವರಿಗೂ ಕೂಡಾ ನಾಲ್ಕು ಆರಾಧನೆಗಳು ಇವೆಯೆಂದು ಹೇಳುತ್ತಿದ್ದಾರೆ. ಅವುಗಳಲ್ಲಿ 1) ನಮಾಜ್ 2) ಜಕಾತ್ 3) ರೋಜಾ 4) ಹಜ್ ಆಗಿ ಹೇಳುತ್ತಿದಾರೆ. ಈ ನಾಲ್ಕರಲ್ಲಿ ನಮಾಜ್ ದೇವರ ಪ್ರಾರ್ಥನೆ. ಜಕಾತ್ ದೇವರ ಮಾರ್ಗದಲ್ಲಿ ದೇವರಿಗಾಗಿ, ದೇವರ ಜ್ಞಾನಕ್ಕಾಗಿ ಹಣ ಖರ್ಚುಮಾಡುವುದು ಎರಡೂ ದೇವರ ಕಾರ್ಯಗಳೇ ಆಗುತ್ತವೆ. ಹಾಗೆಯೇ ಹಜ್ ದೇವರಿಗಾಗಿ ಯಾತ್ರೆ ಮಾಡುವುದರಲ್ಲಿ ಕೂಡಾ ಭಕ್ತಿ ಭಾವವಿದೆ. ಆದರೇ ರೋಜಾ ಎಂದು ಪವಿತ್ರ ದಿನಗಳಲ್ಲಿ ಉಪವಾಸವಿರುವುದರಲ್ಲಿ ಒಂದು ಕಟ್ಟುನಿಟ್ಟಾಗಿದೆ ಹೊರತು ಅತ್ತ ದೇವರಿಗಾಗಲೀ,**

**ಇತ್ತ ಭಕ್ತನಿಗಾಗಲೀ ಯಾವ ಲಾಭವೂ ಇಲ್ಲ. ಕೆಲವರು ಭಕ್ತಿಯಿಂದ ಉಪವಾಸವಿದ್ದರೇ, ಕೆಲವರು ಕಟ್ಟುಪಾಡುಗಳೆನ್ನುವ ಭಯದಿಂದ ಉಪವಾಸ ವಿರುತ್ತಾರೆ. ಭಯದಿಂದಾಗಲೀ, ಭಕ್ತಿಯಿಂದಾಗಲೀ ಉಪವಾಸವಿರುವು ದರಿಂದ ಯಾರಿಗೂ ಯಾವ ಪ್ರಯೋಜನೆಯು ಕಾಣಿಸುತ್ತಿಲ್ಲ. ಉಪವಾಸ ಕಾರ್ಯಕ್ರಮವು ಆರೋಗ್ಯವಂತವಾದುದೆಂದು ತಿಳಿಯುತ್ತಿದೆ ಆದರೇ ಭಕ್ತಿ ಸಂಬಂಧವಾದುದಾಗಿ ಕಾಣಿಸುತ್ತಿಲ್ಲ. ಉಪವಾಸವು ಭಕ್ತಿ ಸಂಬಂಧವಾದುದೇನಾ ಎಂಬ ಸಂಶಯವನ್ನು ನೀವು ತೀರಿಸಬೇಕು.**

**ಉತ್ತರ :–** ನಮ್ಮ ಲೆಕ್ಕದಲ್ಲಿ ದೇವರ ಆರಾಧನೆಯಲ್ಲಿ ಮೊದಲ ಸ್ಥಾನದಲ್ಲಿರುವುದು ನಮಾಜ್, ನಂತರ ಎರಡನೆಯ ಸ್ಥಾನದಲ್ಲಿರುವುದು ರೋಜಾ (ಉಪವಾಸಗಳು). ಮೂರನೆಯ ಸ್ಥಾನದಲ್ಲಿರುವುದು ಜಕಾತ್. ನಾಲ್ಕನೆಯ ಸ್ಥಾನದಲ್ಲಿರುವುದು ಹಜ್ ಎಂದು ಹೇಳಬಹುದು. ಆದರೇ ಮತ್ತೊಂದು ವಿಧವಾಗಿ ಹೇಳಿದರೇ ನಮಾಜ್, ರೋಜಾ ಎರಡು ಸಮಾನವಾದವುಗಳೇಯೆಂದು, ಈ ಎರಡು ವಿಧಿಯಾಗಿ ತಪ್ಪದೇ ಮಾಡಬೇಕೆಂದು ಹೇಳಬಹುದು. ಜಕಾತ್, ಹಜ್ ಎರಡು ಧನವಿರುವವನು ಮಾಡುವವು. ಧನವಿಲ್ಲದವರು, ಬಡವರು ಮಾಡಲಾರದವು. ಆದ್ದರಿಂದ ಅವು ಮುಖ್ಯವಾದವು ಅಲ್ಲ. ದುಡ್ಡಿರುವವರು ಮಾಡಬಹುದು. ದುಡ್ಡಿಲ್ಲದವರು ಮಾಡದೆ ಹೋದರೂ ಫರವಾಗಿಲ್ಲ. ನಮಾಜ್, ರೋಜಾ (ಉಪವಾಸಗಳು) ಎರಡು ಎಲ್ಲರೂ ಮಾಡಬೇಕಾಗಿದೆ. ಆದರೇ ಈದಿನ ಮುಸ್ಲಿಮ್‌ರು ನಮಾಜ್, ರೋಜಾ ಮಾಡುತ್ತಿದ್ದಾರೆ. ಆದರೂ ಅವುಗಳನ್ನು ಹೇಗೆ ಮಾಡಬೇಕೋ ಹಾಗೆ ಮಾಡುತ್ತಿಲ್ಲ. ದಾರಿಯಲ್ಲಿ ನಡೆಯುತ್ತಿರುವವರು ನಡೆಯುತ್ತಿರುವ ದಾರಿ ತಪ್ಪಿ ನಡೆದರೇ ಸೇರಬೇಕಾದ ಗಮ್ಯಕ್ಕೆ ಸೇರುವುದಿಲ್ಲ. ಹಾಗೆಯೇ ದೇವರನ್ನು ಸೇರಬೇಕೆಂಬ ಚಿಂತೆಯಿಂದ ನಮಾಜ್, ರೋಜಾ ಮಾಡುತ್ತಿದ್ದರೂ ಅವುಗಳನ್ನು ಸಕ್ರಮವಾದ ಪದ್ಧತಿಯಲ್ಲಿ ಮಾಡದಿರುವುದರಿಂದ ಊರಿಗೆ ಹೋಗುವವನು ದಾರಿ ತಪ್ಪಿ ನಡೆದರೇ ಊರಿಗೆ ಹೋಗಬೇಕೆಂಬ ಉದ್ದೇಶವು ನೆರವೇರುವುದಿಲ್ಲ. ಊರಿಗೆ ಹೋಗಬೇಕೆಂಬ ಉದ್ದೇಶದಿಂದ

ನಡೆದರೂ ದಾರಿತಪ್ಪಿ ನಡೆಯುವುದರಿಂದ ಕಾಡಿಗೆ ಹೋದಂತೆ, ದೇವರ ಹತ್ತಿರಕ್ಕೆ ಹೋಗಬೇಕೆಂಬ ಉದ್ದೇಶದಿಂದ ನಮಾಜ್, ರೋಜಾ (ಉಪವಾಸಗಳು) ಮಾಡಿದರೂ, ಭಾವನೆಯನ್ನು ಬಿಟ್ಟು ಬೇರೆ ವಿಧಾನದಲ್ಲಿ ಮಾಡುವುದರಿಂದ, ದೇವರ ಹತ್ತಿರಕ್ಕೆ ಸೇರದೇ ಮಾಯೆಬಳಿಗೆ (ಇಬ್ಲೀಸು ಬಳಿಗೆ) ಸೇರುತ್ತಿದ್ದೇವೆ.

ಇಂದಿಗಾದರೂ ದಾರಿಯನ್ನು ಮರಳಿಸಿಕೊಂಡು ಸರಿಯಾದ ದಾರಿಯಲ್ಲಿ ನಡೆಯುವ ಅವಕಾಶವನ್ನು ದೇವರು ಕಲ್ಪಿಸಿದ್ದಾನೆ. ಇದಕ್ಕು ಮೊದಲು ಗ್ರಂಥದ ಮೊದಲಿನಲ್ಲಿಯೇ ಪ್ರಾರ್ಥನೆ ಎಂದರೇ ಏನು? ಎನ್ನುವ ಅಂಶದಲ್ಲಿ **'ನಮಾಜ್'** ಎನ್ನುವ ಶಬ್ಧಕ್ಕೆ ಅರ್ಥವೇನು ಎಂದು, ನಮಾಜ್ ಅರ್ಥಸಹಿತವಾಗಿ ಹೇಗೆ ಮಾಡಬೇಕೆಂಬ ವಿಷಯವನ್ನು ಹೇಳಿದ್ದೇವೆ. ಹಾಗೆ ಮಾಡಿದರೇ ದೇವರನ್ನು ನಿಜವಾಗಿ ಪ್ರಾರ್ಥಿಸಿದಂತಾಗುವುದು. ಆಗ ಆ ಪ್ರಾರ್ಥನೆಯಿಂದ ಫಲಿತ ವಿರುತ್ತದೆಂದು ಹೇಳಿಕೊಂಡಿದ್ದೇವೆ. ಈಗಲೂ ಕೂಡಾ **ರೋಜಾ** ಎಂದರೇ ಏನು? ಎನ್ನುವ ವಿವರವನ್ನು ತಿಳಿದು, ರೋಜಾವನ್ನು ಹೇಗೆ ಮಾಡಬೇಕೋ ಹಾಗೆ ಮಾಡಿದರೇ ರೋಜಾದಿಂದ ಫಲಿತವಿರುತ್ತದೆ. ರಂಜಾನ್‌ಗು, ರೋಜಾಗು ಅವಿನಾಭಾವ ಸಂಬಂಧವಿದೆ. ಆದ್ದರಿಂದ ರಂಜಾನ್ ತಿಂಗಳಲ್ಲಿಯೇ ರೋಜಾ ಮಾಡುವುದು ನಡೆಯುತ್ತಿದೆ. ರಂಜಾನ್‌ಗೆ ಇರುವ ಅರ್ಥವೇ ರೋಜಾಗು ಇದೆ. ಮುಸ್ಲಿಮ್ ಪ್ರಪಂಚವು ಪದಗಳಿಗೆ ಅರ್ಥವನ್ನು ಬಿಟ್ಟುಹಾಕುವುದರಿಂದ ಅವುಗಳನ್ನು ಕುರುಡರಾಗಿ ಆಚರಿಸುವುದೇ ಹೊರತು ವಿವರ ತಿಳಿದು ಯಾವುದನ್ನು ಮಾಡುತ್ತಿಲ್ಲ. ಉದಾಹರಣೆಗೆ ಗಂಡಹೆಂಡತಿ ಬೇರೆಯಾಗುವುದನ್ನು **"ವಿವಾಹ ವಿಚ್ಛೇದನಾ ಪತ್ರ"** ಎನ್ನುವ ಹೆಸರಿನಿಂದ ಕರೆಯುತ್ತೇವೆ. 'ವಿಚ್ಛೇದನಾ ಪತ್ರ' ಎನ್ನುವ ಪದದಲ್ಲಿ ಬಿಡಿಬಿಡಿ+ಎಲೆಗಳು ಎಂಬ ಎರಡು ಶಬ್ದಗಳಿವೆ. ಎರಡು ಶಬ್ದಗಳನ್ನು ಕೂಡಿಸಿದರೇ 'ವಿವಾಹ ವಿಚ್ಛೇದನೆ' ಆಗುತ್ತದೆ. ಆದರೇ ವಿಚ್ಛೇದನಾ ಪತ್ರ ಎನ್ನುವ ಪದವನ್ನು ಹೇಳಿದಷ್ಟು ಮಾತ್ರಕ್ಕೆ ಅರ್ಥ ತಿಳಿಯದೇ ಮಾತನಾಡಿದರೆ ಏನು ಪ್ರಯೋಜನೆ ಇರುವುದಿಲ್ಲ.

ವಿಚ್ಛೇದನಾ ಪತ್ರ ವಿವರವನ್ನು ತಿಳಿದರೇ ಗಂಡಹೆಂಡತಿ ಭಾವನೆಯ ಪ್ರಕಾರ ಬೇರೆಯಾದಂತಾಗುವುದು. ಇಲ್ಲದೇ ಹೋದರೇ ಅರ್ಥವಿಲ್ಲದ ಕೆಲಸ ವ್ಯರ್ಥ ಎನ್ನುವಂತಿರುತ್ತದೆ. ವಿಚ್ಛೇದನಕ್ಕೆ ಗಂಡಹೆಂಡತಿ ಬೇರೆಯಾಗುವುದಕ್ಕೆ ಏನು ಸಂಬಂಧವೆಂದು ಕೇಳಿದರೇ ಮದುವೆ ನಿಶ್ಚಯವಾದ ದಿನ ಹತ್ತು ವಿಳ್ಯೆದೆಲೆಗಳನ್ನು ಮದುವೆಹೆಣ್ಣಿನವರು ಮದುವೆಗಂಡಿನವರಿಗೆ ಕೊಟ್ಟರೇ, ಹಾಗೆಯೇ ಮದುವೆಗಂಡಿನವರು ಮದುವೆಹೆಣ್ಣಿನವರಿಗೆ ಹತ್ತುವಿಳ್ಯೆದೆಲೆಗಳನ್ನು ಕೊಡುತ್ತಾರೆ. ಈ ವಿಧವಾಗಿ ಎಲೆಗಳನ್ನು ಕೊಟ್ಟುತೆಗೆದುಕೊಳ್ಳುವುದನ್ನು ಸಂಬಂಧ ಕೊಟ್ಟುತೆಗೆದುಕೊಂಡಂತಾಗುತ್ತದೆ. ಗಂಡಹೆಂಡತಿ ಬೇರೆಯಾಗುವ ದಿನ ಐದು ಎಲೆಗಳ ತುದಿಗಳು ಹೊರಗಿಟ್ಟು ಮದುವೆಹೆಣ್ಣಿನವರು ಮದುವೆಗಂಡಿನವರಿಗೆ ಕೊಡುವುದು, ಹಾಗೆಯೇ ಮದುವೆಗಂಡಿನವರು ಮದುವೆಹೆಣ್ಣಿನವರಿಗೆ ಐದು ಎಲೆಗಳ ತುದಿಗಳು ಹೊರಗಿನಕಡೆಗೆ ಇಟ್ಟು ಕೊಡುವುದು ನಡೆಯುತ್ತಿದೆ. ಹಾಗೆ ಮಾಡುವುದರಿಂದ ಆ ದಿನಕ್ಕೆ ಅವರು ಬೇರೆಯಾದಂತೆಯೇ ಆಗುತ್ತದೆ. ಐದು ಎಲೆಗಳು ಕೊಟ್ಟು ಐದು ಎಲೆಗಳು ಅವರ ಕಡೆಗೆ ಇಟ್ಟುಕೊಳ್ಳುವುದರಿಂದ, ಇಂದಿಗೆ ಬೇರೆಯಾದರೂ ನಂತರ ಒಂದಾಗಬಹುದೆಂಬ ಭಾವನೆ. ಹಾಗಲ್ಲದೆ ಹತ್ತು ಎಲೆಗಳು ಹಿಂದಕ್ಕೆ ಕೊಟ್ಟರೆ ಪುನಃ ಇನ್ನೆಂದಿಗೂ ಒಂದಾಗುವುದಿಲ್ಲವೆಂದು ಅರ್ಥ. ಈ ವಿಧವಾಗಿ ವಿವಾಹ ವಿಚ್ಛೇದನೆಗೆ ಅರ್ಥವಿದೆ. ಅರ್ಥ ತಿಳಿದು ಮಾಡಿದರೇ ಆ ಕೆಲಸಕ್ಕೆ ಬೆಲೆಯಿರುತ್ತದೆ. ಅರ್ಥ ತಿಳಿಯದೆ ಮಾಡಿದರೇ ಆ ಕೆಲಸ ವ್ಯರ್ಥವಾಗಿ ಮಾಡಿದಂತಾಗುವುದು. ಅರ್ಥ ತಿಳಿಯದೆ ಹೋಗುವುದರಿಂದ, ಆ ಕೆಲಸಗಳನ್ನು ಮಾಡದೇ ಬಿಟ್ಟುಹಾಕುವುದು ಕೂಡಾ ನಡೆಯುತ್ತಿರುತ್ತದೆ. ಹಾಗೆ ಕಾಲಕಳೆದಂತೆ ವಿವಾಹ ವಿಚ್ಛೇದನೆಯ ಆಚರಣೆ ಇಲ್ಲದೇ ಹೋಗಿದೆ. ಮದುವೆ ನಿಶ್ಚಯವಾದಾಗ ಹತ್ತು ಎಲೆಗಳು ತೆಗೆದುಕೊಳ್ಳುವವರೂ ಇಲ್ಲ. 'ವಿವಾಹ ವಿಚ್ಛೇದನೆಯ ಕಾರ್ಯ' ಕಾಲಕಳೆದಂತೆಲ್ಲಾ ಇಲ್ಲದೇ ಹೋಗಿದೆ. ವಿಚ್ಛೇದನಾ ಪದ್ಧತಿ ಎಂದರೆ ಏನೋ ತಿಳಿಯದವರು ಬಹಳಜನರಿದ್ದಾರೆ. ಆದರೇ ಕಾರ್ಯವು ಹೋದರೂ 'ವಿಚ್ಛೇದನಾ ಪತ್ರ' ಎನ್ನುವ ಹೆಸರು ಮಾತ್ರ ಇನ್ನೂ ಉಳಿದಿದೆ. ಹೆಸರು ಉಳಿದಿರುವುದರಿಂದ ತಿಳಿಯದೇ ಹೋಗಿರುವ

ವಿಚ್ಛೇದನಾ ಪತ್ರದ ಕಾರ್ಯವನ್ನು ಅದರ ಅರ್ಥವನ್ನು ಈದಿನ ನಾವು ಹೇಳಿಕೊಳ್ಳುವುದಕ್ಕೆ ಸಾಧ್ಯವಾಯಿತು. ಹಾಗೆಯೇ ಹೆಸರುಗಳನ್ನು ಹೊಂದಿ ಆಚರಣೆಗಳಿದ್ದರೂ ಅರ್ಥವಿಲ್ಲದ ಕಾರ್ಯಗಳು ಬಹಳ ಇವೆ. ಅರ್ಥ ತಿಳಿಯದಿರುವುದರಿಂದ ಆಚರಣೆಗಳನ್ನು ಮಾಡಬೇಕಾಗಿರುವ ವಿಧಾನವಾಗಿ ಮಾಡದೇ ಹೋಗುತ್ತಿದ್ದೇವೆ. ಅಂತಹ ಆಚರಣೆಗಳಲ್ಲಿ ನಮಾಜ್, ರೋಜಾ ಎರಡು ಇವೆ.

ನಮಾಜನ್ನು ಕುರಿತು ಅರ್ಥ, ಆಚರಣೆ ಎರಡೂ ತಿಳಿದುಕೊಂಡಿದ್ದೇವೆ. ಈಗ ರೋಜಾ ಕುರಿತು ಹೇಳಿಕೊಳ್ಳುವುದರಲ್ಲಿ ರಂಜಾನ್ ಪವಿತ್ರ ದಿನಗಳಲ್ಲಿ ರೋಜಾವನ್ನು ಮುಸ್ಲಿಮ್‌ರೆಲ್ಲರೂ ನಿರ್ವಹಿಸುವುದು ತಿಳಿದಿರುವ ವಿಷಯವೇ. ನಮಾಜನ್ನು ಪೂರ್ತಿ ಅರ್ಥದಿಂದ ಮಾಡದಂತೆ, ರೋಜಾನು ಕೂಡಾ ಭಾವನೆಯೊಂದಿಗೆ ಕೂಡಿಕೊಂಡಿರುವ ಕಾರ್ಯವಾಗಿ ಮಾಡಲಾರದೆ ಹೋಗುತ್ತಿದ್ದೇವೆ. ರೋಜಾವನ್ನು ಸಕ್ರಮವಾಗಿ ನೆರವೇರಿಸಬೇಕೆಂದರೇ ರೋಜಾನನ್ನು ಕುರಿತು ಸಂಪೂರ್ಣವಾಗಿ ತಿಳಿಯಬೇಕು. ಆ ನಿಟ್ಟಿನಲ್ಲಿ ರೋಜಾಗು ರಂಜಾನ್‌ಗು ಅವಿನಾಭಾವ ಸಂಬಂಧವಿದೆ ಎಂದು ಹೇಳುತ್ತಿದ್ದೇವೆ. ಮುಖ್ಯವಾಗಿ ಒಂದು ವಿಷಯವನ್ನು ನಾವು ನೆನಪಿಟ್ಟುಕೊಳ್ಳಬೇಕು. ಇಸ್ಲಾಮ್ ಮತವು ಹೊರಗೆ ಬಂದು ಸುಮಾರು 1400 ವರ್ಷಗಳಾಗಿವೆ. ಅಂದಿನಿಂದ ನಮಾಜ್, ರೋಜಾ ಇರುವಂತೆ ಮುಸ್ಲಿಮ್‌ರಿಗೆ ಗೊತ್ತು. ಆದರೇ ಪೂರ್ವವು ಕೃತಯುಗದಲ್ಲಿಯೇ ರೋಜಾ, ನಮಾಜ್ ಎನ್ನುವ ಪದಗಳಿರುವಂತೆ ತಿಳಿಯುತ್ತಿದೆ. ಮುಂಬರುವ ಕಾಲದಲ್ಲಿ ಇವು ಇರುತ್ತವೆ ಎನ್ನುವಂತೆ ಕೃತಯುಗದಲ್ಲಿಯೇ ಸ್ವಚ್ಛವಾದ ತೆಲುಗು ಪದಗಳಾಗಿ ನಮಾಜ್ ಮತ್ತು ರೋಜಾ ಎನ್ನುವ ಪದಗಳು ಇದ್ದವು. **'ನಮಾಜ್'** ಎಂದರೇ ತೆಲುಗು ಭಾಷೆಯಲ್ಲಿ ಮೂರು ಅಕ್ಷರಗಳಿಗೆ ಇರುವ ಅರ್ಥವನ್ನು ಮೊದಲೇ ತಿಳಿದುಕೊಂಡಿದ್ದೇವೆ. ನಂತರ ದೇವರ ಆರಾಧನೆಯಲ್ಲಿ ಎರಡನೆಯದು **'ರೋಜಾ'** ಎನ್ನುವ ಪದ. **'ರೋಜಾ'** ಎಂದರೇ **'ಜನ್ಮ ನಾಶ'** ಎಂದು ಅರ್ಥ. ನಮಾಜ್‌ನಲ್ಲಿ ನನಗೆ ಜನ್ಮ ಬೇಡ, ನನಗೆ

ಜನ್ಮವಿಲ್ಲ ಎನ್ನುವ ಅರ್ಥವಿದೆಯೆಂದು ಹೇಳಿಕೊಂಡಿದ್ದೇವೆ. ರೋಜಾ ಕೂಡಾ ಸುಮಾರು ಅದೇ ಅರ್ಥವನ್ನು ಉಂಟುಮಾಡುವ ಪದವಾಗಿದೆ.

ರೋಜಾ ಪದವು ರಂಜಾನ್ ಎನ್ನುವ ಪದದಿಂದ ಹುಟ್ಟುತ್ತಿದೆ. ರಂಜಾನ್ ತಿಂಗಳಾಗಲೀ, ರಂಜಾನ್ ಆಚರಣೆಯಾಗಲೀ ಆ ದಿನಗಳಲಿಲ್ಲ. ಆದರೂ ರಂಜಾನ್ ಎಂದು ತೆಲುಗು ಭಾಷೆಯಲ್ಲಿ ಪದವಿತ್ತು. 'ರಂಜಾನ್' ಎನ್ನುವ ಪದವು ಆಧ್ಯಾತ್ಮಿಕದಲ್ಲಿಯೇ ಹೆಚ್ಚಾಗಿ ಬಳಸುತ್ತಿದ್ದರು. ಆ ಕಾಲದಲ್ಲಿ ಜ್ಞಾನವನ್ನು ತಿಳಿದ ಜ್ಞಾನಿಗಳು ಇತರರಿಗೆ ದೈವಜ್ಞಾನವನ್ನು ಬೋಧಿಸುತ್ತಾ ರಂಜಾನ್ ಎಂದು ಹೇಳಿಸುತ್ತಿದ್ದರು. ದೈವಜ್ಞಾನವು ತಿಳಿಯಬೇಕೆಂದು ಗುರುಗಳ ಬಳಿಗೆ ಸೇರಿ ಜ್ಞಾನ ತಿಳಿಯಬೇಕೆಂದು ಕೋರುವವರಿಗೆ ಮೊಟ್ಟಮೊದಲೇ ರಂಜಾನ್ ಎಂದು ಬರೆದು ಕೈಗೆ ಕಟ್ಟುತ್ತಿದ್ದರು. ರಂಜಾನ್ ಎನ್ನುವ ಗುರುತನ್ನು ಹೊಂದಿರುವ ವರೆಲ್ಲರೂ ದೇವರ ಜ್ಞಾನ ತಿಳಿಯುವ ಮಾರ್ಗದಲ್ಲಿ ಇರುವವರೆಂದು ಇತರರು ತಿಳಿದುಕೊಂಡು ಅವರನ್ನು ಗೌರವಿಸುತ್ತಿದ್ದರು. ಆದಿನಗಳಲ್ಲಿ ದೈವಜ್ಞಾನವನ್ನು ತಿಳಿಯುವ ವಿಧಾನದಲ್ಲಿ ಇರುವವರೆಲ್ಲರೂ, ಆಧ್ಯಾತ್ಮಿಕ ವಿದ್ಯೆಯನ್ನು ಕಲಿಯುವ ವಿದ್ಯಾರ್ಥಿಗಳಾಗಿ ಇರುವವರೆಲ್ಲರೂ 'ರಂಜಾನ್' ಎನ್ನುವ ಮೂರು ಅಕ್ಷರಗಳ ರಾಗಿ ಬಿಲ್ಲೆಯನ್ನೋ, ಹಿತ್ತಾಳೆ ಬಿಲ್ಲೆಯನ್ನೋ ತಮ್ಮಕೈಗೆ ಕಟ್ಟಿಕೊಳ್ಳುವುದಾಗಲೀ, ತಮ್ಮ ಕೊರಳಿಗೆ ಹಾಕಿಕೊಳ್ಳುವುದಾಗಲೀ ಮಾಡುತ್ತಿದ್ದರು. ಕೆಲವರಿಗೆ ಈಗ ನಾವು ಹೇಳುವ ವಿಷಯಗಳ ಮೇಲೆ ಅನುಮಾನ ಬರಬಹುದು. ಕಲ್ಪಿಸಿ ಹೇಳುತ್ತಿದ್ದಾರೆಂದು ಅನ್ನಬಹುದು. ನೀವು ಹಾಗೆ ಅಂದುಕೊಂಡರೂ ನಾನು ಹೇಳಿರುವುದು ಒಳ್ಳೆಯದನ್ನೇ ಅಲ್ಲವೇ! ಕೆಟ್ಟದ್ದನ್ನು ಹೇಳಲಿಲ್ಲ ಅಲ್ಲವೇ! ನೀನು ಜ್ಞಾನಿಯಾಗು ಎಂದು ಹೇಳುತ್ತಿದ್ದೇನೇ ಹೊರತು ಅಜ್ಞಾನದೊಳಗೆ ಹೋಗೆಂದು ಹೇಳಲಿಲ್ಲ ಅಲ್ಲವೆ! ಇನ್ನೊಂದು ವಿಧವಾಗಿ ನಾನು ಮತಗಳನ್ನು ಕುರಿತು ಕೂಡಾ ಹೇಳಲಿಲ್ಲ ಅಲ್ಲವೇ! ಪೂರ್ವವಿರುವ ಸತ್ಯವನ್ನು ಹೇಳುತ್ತಿದ್ದೇನೆ. ಅದೇ ನಿಮಗೆ ತಿಳಿಯದಿರುವುದು ನನಗೆ ತಿಳಿದಿರುವುದು. ಯಾರಿಗೂ ತಿಳಿಯದ ಎಂದೋ ಅಳಿಸಿ ಹೋಗಿರುವ ವಿಷಯಗಳನ್ನು ನೀವು ಹೇಗೆ ಹೇಳುತ್ತಿದ್ದೀರೆಂದು

ಕೇಳಿದರೂ ಅದಕ್ಕೆ ನನ್ನ ಸಮಾಧಾನ ಹೇಳುವವನು ನಾನಲ್ಲ. ನೀವು ಯಾವ ದೇವರನ್ನು ಪ್ರಾರ್ಥಿಸುತ್ತಿದ್ದೀಯೋ, ನೀನು ಯಾವ ದೇವರಿಗಾಗಿ ಹೋರಾಡುತ್ತಿದ್ದೀಯೋ, ನೀನು ಯಾವ ದೇವರನ್ನು ದೊಡ್ಡದಾಗಿ ಹೇಳುತ್ತಿದ್ದೀಯೋ ಆ ದೇವರೇ ಹೇಳುತ್ತಿದ್ದಾನೆಂದುಕೋ. ಸತ್ಯವನ್ನು ತಿಳಿಯುವುದರಲ್ಲಿ ಸಂಕೋಚಪಡಬೇಡ.

ನಾನು ಸಾಮಾನ್ಯ ಮಾನವನೇ ಆದರೇ ನನ್ನಲ್ಲಿರುವ ಮಧ್ಯಾತ್ಮ ತನ್ನ ಜ್ಞಾನವನ್ನು ಹೊರಗೆ ಹೇಳಲು ಬಯಸಿದೆ. ಎಲ್ಲರಲ್ಲು ಮಧ್ಯಾತ್ಮ ಇದ್ದರೂ ನನ್ನ ಆತ್ಮ ನನ್ನನ್ನು ಆಯ್ಕೆ ಮಾಡಿಕೊಂಡು ನನ್ನ ಶರೀರದ ಮೂಲಕ ಎಷ್ಟೋ ಜ್ಞಾನವನ್ನು ಹೊರಗೆ ಹೇಳುವುದು ನನ್ನ ಅದೃಷ್ಟವಾಗಿ ನಾನು ಭಾವಿಸುತ್ತಿದ್ದೇನೆ ಆದರೇ ನಾನು ಹೇಳುತ್ತಿದ್ದೇನೆ ಎನ್ನುವ ಉದ್ದೇಶ ನನ್ನಲ್ಲಿ ಇಲ್ಲ. ಈಗ ಒಳ್ಳೆಯ ಸಮಯ ಬಂದಿದೆ ನಿನ್ನ ದೇವರೇ ನಿನಗೆ ಜ್ಞಾನವನ್ನು ಹೇಳುತ್ತಿದ್ದಾನೆ. ಈಗ ಅನವಶ್ಯಕ ಚಿಂತೆಗಳನ್ನು ಮಾಡಿ ಜ್ಞಾನವನ್ನು ತಿಳಿಯದೆ ಹೋದರೇ ಎಂದಿಗೂ ತಿಳಿಯಲಾರೆ. ಈಗ ಹೊರತು ನಂತರ ಹೇಳುವವರು ಯಾರೂ ಇರುವುದಿಲ್ಲ. ಈಗ ನಾವು ಹೇಳುತ್ತಿರುವುದು 'ರಂಜಾನ್' ಎನ್ನುವ ಪದವನ್ನು ಕುರಿತು ಅಲ್ಲವೇ! ರಂಜಾನ್ ಗುರುತು ಯಾರಬಳಿ ಇರುತ್ತದೋ ಆತನು ದೇವರ ಜ್ಞಾನವನ್ನು ತಿಳಿಯುತ್ತಿದ್ದಾನೆಂದು ಅರ್ಥ. ಆ ವಿಧವಾಗಿ ಆ ದಿನ ಪ್ರಜೆಗಳಿಗೆ ಜ್ಞಾನವನ್ನು ಬೋಧಿಸುವ ಗುರುಗಳು ರಂಜಾನ್ ಪದವನ್ನು ಬರೆದು ಕಟ್ಟುತ್ತಿದ್ದರು. 'ರಂಜಾನ್' ಎನ್ನುವ ಪದವು ಇಂದಿನ ಇಸ್ಲಾಮ್‌ದೊಳಗಿನದ್ದು ಅಲ್ಲವೇ! ಎಂದು ಕೆಲವರು, ಪವಿತ್ರವಾದ ಖುರಾನ್ ಗ್ರಂಥ ಅವತರಿಸಿರುವುದು ರಂಜಾನ್ ತಿಂಗಳಲ್ಲಿಯೇ ಎಂದು, ಆದ್ದರಿಂದ ರಂಜಾನ್ ತಿಂಗಳು ಪವಿತ್ರ ದಿನಗಳಾಗಿ ಇದೆಯೆಂದು, ಪವಿತ್ರ ದಿನಗಳಲ್ಲಿ ಉಪವಾಸವಿರುವುದು ರೋಜಾ ಎಂದು ಕರೆಯುತ್ತಿದ್ದೇವೆಂದು ಹೇಳಿಕೊಳ್ಳುತ್ತಿರುತ್ತಾರೆ.

ರಂಜಾನ್, ರೋಜಾ, ನಮಾಜ್ ಎನ್ನುವ ಪದಗಳು ಇಸ್ಲಾಮ್‌ನಲ್ಲಿ ಈ ದಿನ ಇರುವದು ವಾಸ್ತವವೇ. ಆದರೇ ಆ ದಿನ ಕೂಡಾ ಈ ಪದಗಳೇ

ತೆಲುಗು ಭಾಷೆಯಲ್ಲಿ ಒಳ್ಳೆಯ ಅರ್ಥವನ್ನು ಹೊಂದಿವೆ ಎಂದು ನನಗೆ ಚೆನ್ನಾಗಿ ಜ್ಞಾಪಕವಿದೆ. ಈ ದಿನ ದೈವಜ್ಞಾನದಲ್ಲಿ ಈ ಪದಗಳಿರುವಂತೆಯೇ ಆ ದಿನ ಕೂಡಾ ದೈವಜ್ಞಾನದಲ್ಲಿಯೇ ಈ ಪದಗಳನ್ನು ಉಪಯೋಗಿಸಿ ಹೇಳಿಕೊಳ್ಳುವುದು ನಡೆಯುತ್ತಿತ್ತು. 'ನಮಾಜ್' ಮೂರು ಅಕ್ಷರಗಳಿಗೆ ಅರ್ಥವಿರುವಂತೆಯೇ, 'ರಂಜಾನ್' ಮೂರು ಅಕ್ಷರಗಳಿಗೆ ಅರ್ಥವಿದೆ. ರಂಜಾನ್ ಮೂರು ಅಕ್ಷರಗಳಂದಲೇ ರೋಜಾ ಎನ್ನುವ ಎರಡಕ್ಷರಗಳ ಅರ್ಥ ಹುಟ್ಟಿಕೊಂಡು ಬಂದಿದೆ. ರೋಜಾವನ್ನು ಕುರಿತು ತಿಳಿಯುವುದಕ್ಕೆ ಮೊದಲು ರಂಜಾನ್ ಅರ್ಥವನ್ನು ಕುರಿತು ತಿಳಿದುಕೊಳ್ಳಬೇಕು. ಮೊದಲು ಭೂಮಿ ಮೇಲೆ ಹುಟ್ಟಿರುವ ಭಾಷೆ ತೆಲುಗು ಭಾಷೆ. ತೆಲುಗು ಭಾಷೆಯಲ್ಲಿ **'ರಂ'** ಎಂದರೇ **'ನಾಶ'** ಎಂದು ಅರ್ಥವಿದೆ. ರಂಜಾನ್ ಪದದಲ್ಲಿ ರಂ+ಜಾನ್=ರಂಜಾನ್ ಎನ್ನುವುದು ಬಂದಿದೆ. **'ಜಾ'** ಎನ್ನುವ ಶಬ್ದಕ್ಕೆ **'ಜನ್ಮ (ಹುಟ್ಟುವಿಕೆ)'** ಎಂದು ಅರ್ಥವಿದೆ ಎಂದು ಮೊದಲಿನಿಂದ ಹೇಳುತ್ತಿದ್ದೇವೆ. **ರಂಜಾನ್** ಎಂದರೇ **ಜನ್ಮನಾಶ**ವೆಂದು ಅರ್ಥವಿದೆ.

ಜನ್ಮವನ್ನು ನಾಶ ಮಾಡುವುದು ರಂಜಾನ್ ಎನ್ನುವ ಅರ್ಥವಿರುವ ಗುರುತನ್ನು ಮನುಷ್ಯ ತಗುಲಿಸಿಕೊಳ್ಳುವುದರಿಂದ ಕರ್ಮದಿಂದ ಜನ್ಮ ಉಂಟಾಗುತ್ತಿದೆ ಎಂದು, ಜನ್ಮಕ್ಕೆ ಕಾರಣವಾದ ಕರ್ಮವನ್ನು ನಾಶಮಾಡುವ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದೇನೆಂದು ಹೊರಗೆ ತಿಳಿಸಿದಂತಾಗುತ್ತಿದೆ. ವಾಸ್ತವ ವಾಗಿ ದೇವರ ಜ್ಞಾನದಿಂದ ದೈವಶಕ್ತಿ ಲಭ್ಯವಾಗುತ್ತಿದೆ. ದೈವಶಕ್ತಿಯನ್ನೇ ಜ್ಞಾನಶಕ್ತಿ ಎಂದೂ ಜ್ಞಾನಾಗ್ನಿ ಎಂದು ಹೇಳುತ್ತಿದ್ದೇವೆ. ಜ್ಞಾನಾಗ್ನಿ ಕುರಿತು ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 37.** **ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರುತೇಽರ್ಜುನ।**
**ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ॥**

**ಭಾವಾರ್ಥ:– "ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿಯಾದಂತೆ, ಜ್ಞಾನವೆಂಬ ಅಗ್ನಿಯಿಂದ ಸರ್ವಕರ್ಮಗಳು ಭಸ್ಮವಾಗಿ ಇಲ್ಲದೇ ಹೋಗುತ್ತಿವೆ"**

ಈ ಶ್ಲೋಕದಲ್ಲಿ ಹೇಳಿದಂತೆ ಕರ್ಮವು ಜ್ಞಾನದಿಂದ ಹೋಗುವುದರಿಂದ, ಅವನ ಜನ್ಮಕ್ಕೆ ಕಾರಣವಾದ ಕರ್ಮ ಇಲ್ಲದೇ ಹೋಗುವುದರಿಂದ, ಅವನು ಇನ್ನು ಜನ್ಮಿಸದೆ ದೇವರ ಸನ್ನಿಧಾನದಲ್ಲಿ ಸೇರಿಹೋಗುತ್ತಾನೆ. ಅಂದರೇ ದೇವರಲ್ಲಿ ಐಕ್ಯವಾಗಿ ಹೋಗುತ್ತಾನೆ. ಆಗ ಅವನ ಕರ್ಮಗಳು ಜ್ಞಾನಶಕ್ತಿಯಲ್ಲಿ ನಾಶವಾಗಿ ಹೋಗಿರುವುದರಿಂದ ಅವನ ಜನ್ಮಗಳು ಕೂಡಾ ನಾಶವಾಗಿ ಹೋಗಿವೆ. ನಾಶಕ್ಕೆ ಬೀಜಾಕ್ಷರ **"ರಂ"**. ಆದ್ದರಿಂದ ಕೆಲವು ಮರಣ ಮಂತ್ರಗಳಲ್ಲಿ "ರಂ" ಶಬ್ದವನ್ನು ಉಪಯೋಗಿಸುತ್ತಿರುತ್ತಾರೆ. ಜಾನ್ ಎಂದರೇ ಹುಟ್ಟುವಿಕೆ ಅಥವಾ ಜನ್ಮ ಎಂದು ಅರ್ಥ. ಜ್ಞಾನವು ತಿಳಿಯುವುದರಿಂದ ಕರ್ಮ ಸುಟ್ಟುಹೋಗಿ ಜನ್ಮ ನಾಶವಾಗುತ್ತಿರುವುದರಿಂದ, ಅದೇ ಅರ್ಥವನ್ನು ಹೊರಗಿನ ಪ್ರಜೆಗಳು ಗ್ರಹಿಸುವಂತೆ ಜ್ಞಾನವನ್ನು ತಿಳಿಯುವುದರಲ್ಲಿ ಗುರುಗಳ ಬಳಿ ಆಧ್ಯಾತ್ಮಿಕತೆಯನ್ನು ತಿಳಿಯುವ ವರೆಲ್ಲರೂ, ಅಂದರೇ ಬ್ರಹ್ಮವಿದ್ಯಾ ವಿದ್ಯಾರ್ಥಿಗಳೆಲ್ಲರೂ **"ರಂಜಾನ್"** ಎನ್ನುವ ಪದವನ್ನು ಬರೆದಿರುವ ಬಿಲ್ಲೆಯನ್ನು ಕೈಗಾಗಲೀ, ಕೊರಳಿಗಾಗಲೀ ಧರಿಸುತ್ತಿದ್ದರು. ಅದನ್ನು ನೋಡಿದವರು ಇವರು ದೈವಜ್ಞಾನವನ್ನು ತಿಳಿಯುತ್ತಿದ್ದಾರೆಂದು ಗ್ರಹಿಸುತ್ತಿದ್ದರು. ಜ್ಞಾನ ತಿಳಿಯುವವರಬಳಿ ಜ್ಞಾನಾಗ್ನಿ ಇರುತ್ತದೆನ್ನುವ ಉದ್ದೇಶದಿಂದ ಅವರನ್ನು ಗೌರವವಾಗಿ ನೋಡುತ್ತಿದ್ದರು. ಒಂದುವೇಳೆ ಜ್ಞಾನಾಗ್ನಿ ಇರುವವರನ್ನು ಅಗೌರವ ಪಡಿಸಿದರೇ ಜ್ಞಾನ ಇಲ್ಲದವರಿಗೆ ಕರ್ಮಬಂದು ಸೇರುತ್ತದೆ. ಹಾಗೆ ಬಂದು ಸೇರುವ ಕರ್ಮ ಹೇಗಿರುತ್ತದೆಂದರೇ ಸಾಧಾರಣ ಮನುಷ್ಯನನ್ನು ದೂಷಿಸಿದರೇ ಬರುವ ಕರ್ಮಕ್ಕಿಂತಲೂ ಜ್ಞಾನಿಯನ್ನು ದೂಷಿಸಿದರೇ ಬರುವ ಕರ್ಮ ಹತ್ತರಷ್ಟು ಹೆಚ್ಚಾಗಿರುತ್ತದೆ. ಆದ್ದರಿಂದ ಪೂರ್ವವು ರಾಜರು ಸಹಿತ ಜ್ಞಾನಿಗಳಾದವರನ್ನು ಗೌರವಿಸುತ್ತಿದ್ದರು. ಈದಿನ ಜ್ಞಾನವೊಂದರ ಬೆಲೆ ತಿಳಿಯದ ಚಿಕ್ಕ ಅಧಿಕಾರಿಗಳು ಕೂಡಾ ಜ್ಞಾನಿಗಳಿಗೆ ಬೆಲೆ ಕೊಡದೆ ಅವಹೇಳನವಾಗಿ, ಅಗೌರವವಾಗಿ ಮಾತನಾಡುತ್ತಿದ್ದಾರೆ. ಅನವಶ್ಯವಾಗಿ ಕರ್ಮವನ್ನು ತಲೆಗೇರಿಸಿಕೊಳ್ಳುತ್ತಿದ್ದಾರೆ.

ಪೂರ್ವವು ಜ್ಞಾನವನ್ನು ಸ್ವಲ್ಪಮಟ್ಟಿಗೆ ತಿಳಿದಿರುವವರು ಕೂಡಾ ರಂಜಾನ್ ಗುರುತನ್ನು ಹಾಗೆಯೇ ಇಟ್ಟುಕೊಳ್ಳುತ್ತಿದ್ದರು. ಒಂದುಬಾರಿ ಜ್ಞಾನದಲ್ಲಿ ಪ್ರವೇಶಿಸಿ ರಂಜಾನ್ ಗುರುತನ್ನು ಧರಿಸಿದವನು ನಂತರ ಅದನ್ನು ತೆಗೆದುಹಾಕುತ್ತಿರಲಿಲ್ಲ. ಅದೇ ರಂಜಾನ್ ಕಲಿಯುಗದಲ್ಲಿ ಅಂತಿಮ ದೈವಗ್ರಂಥವು ಬಂದ ತಿಂಗಳ ವೊಂದರ ಹೆಸರಾಗಿ ಇರುವಂತೆ ದೇವರೇ ಮನುಷ್ಯರಿಗೆ ಜ್ಞಾಪಕ ಮಾಡಿದ್ದಾನೆ. ಆದ್ದರಿಂದ ದೈವಗ್ರಂಥದಿಂದ ತಿಂಗಳನ್ನು ಪವಿತ್ರ ದಿನಗಳಾಗಿ ಭಾವಿಸಿ, ಪವಿತ್ರ ದಿನಗಳಿಗೆ 'ರಂಜಾನ್' ಎನ್ನುವ ಹೆಸರು ಇಡುವುದು ದೈವಸಂಕಲ್ಪವೇ ಎಂದು ಅಂದುಕೊಳ್ಳುತ್ತಿದ್ದೇನೆ. ಪೂರ್ವವು ಕೃತಯುಗದಲ್ಲಿ ಜನ್ಮರಾಹಿತ್ಯವನ್ನು ಕೋರುವವರು ಧರಿಸುವ ರಂಜಾನ್ ನಾಮವು ಕಲಿಯುಗದಲ್ಲಿ ಪುನಃ ಬರುವುದು ಮನುಷ್ಯರ ಅದೃಷ್ಟವೇ ಎಂದು ಹೇಳಬಹುದು. ಆದರೂ ಈದಿನ ರಂಜಾನ್ ಎನ್ನುವ ಹೆಸರಲ್ಲಿ ಎಷ್ಟು ದೊಡ್ಡತನವಿದೆಯೋ ಮನುಷ್ಯರಿಗೆ ತಿಳಿಯದೇ ಹೋಗಿದೆ.

ರಂಜಾನ್ ಎನ್ನುವ ಪದವನ್ನು ಅನುಸರಿಸಿ ರೋಜಾ ಎನ್ನುವ ಪದವು ಪೂರ್ವವೇ ಇತ್ತು. ರಂಜಾನ್ ಕರ್ಮವನ್ನು ಸುಡುವ ಜ್ಞಾನಾಗ್ನಿ ಚಿಹ್ನೆಯಾದರೇ 'ರೋಜಾ' ಎನ್ನುವುದು ಗುರುಉಪದೇಶಕ್ಕೆ ಗುರುತಾಗಿ ಇರುತ್ತಿತ್ತು. ಎರಡು ಪದಗಳು ಕೃತಯುಗದಲ್ಲಿ ಜ್ಞಾನ ಕಲಿಯುವ ಶಿಷ್ಯರ ಬಳಿ, ಜ್ಞಾನವನ್ನು ಬೋಧಿಸುವ ಗುರುಗಳಬಳಿ ಇದ್ದವು. ಈ ಎರಡು ಪದಗಳ ಅವಿನಾಭಾವ ಸಂಬಂಧವು ಆ ಕಾಲದಲ್ಲಿ ಹೇಗೆ ಇರುತ್ತಿತ್ತೋ ಇಂದಿನ ಕಾಲದಲ್ಲಿ ಕೂಡಾ ಹಾಗೆಯೇ ಇರುವುದು ಆಶ್ಚರ್ಯವಾದ ವಿಷಯವೇ. ಎಂದೋ ತಿಳಿಯದೇ ಹೋಗಿರುವ ಶಬ್ದಗಳನ್ನು ಈ ದಿನ ಕಲಿಯುಗದಲ್ಲಿ ಕೂಡಾ ದೇವರು ತಂದಿಡುವುದು ಸಂತೋಷಿಸಬೇಕಾದ ವಿಷಯ. ದೇವರು ರಂಜಾನ್, ರೋಜಾವನ್ನು ಮನುಷ್ಯರ ಮಧ್ಯದಲ್ಲಿ ಇಡುವುದರಿಂದ ಈಗ ಅವುಗಳನ್ನು ಕುರಿತು, ಅವುಗಳ ಬೆಲೆಯನ್ನು ಕುರಿತು ಹೇಳಿಕೊಳ್ಳುವ ಅವಕಾಶ ಏರ್ಪಟ್ಟಿದೆ. ಆ ಪದಗಳೇ ಇಲ್ಲದೇ ಹೋದರೇ ಈ ದಿನ ಅವುಗಳನ್ನು ಕುರಿತು ನಾವು

ಹೇಳಿಕೊಳ್ಳುತ್ತಿರಲಿಲ್ಲ. ಜಿಬ್ರಯೇಲ್ ಗ್ರಹವು (ಸೂರ್ಯಗ್ರಹವು) ತಾನು ಪೂರ್ವದಲ್ಲಿ ಹೇಳಿರುವ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತರವರಿಗೆ ಹೇಳುವುದರಿಂದ ಆ ಪದಗಳು ಮುಸ್ಲಿಮ್‌ರ ಮಧ್ಯದಲ್ಲಿ ಉಳಿದಿವೆ. ಆದಿನ ಅವುಗಳಿಗಿರುವ ಜ್ಞಾನ ಅರ್ಥವು ಕೂಡಾ ತಿಳಿಯಲ್ಪಡುತ್ತಿದೆ.

ರಂಜಾನ್‌ನಲ್ಲಿರುವ **'ರಂ'** ಎನ್ನುವ ಶಬ್ದದಿಂದ **'ರೋ'** ಎನ್ನುವ ಅಕ್ಷರ, ಜಾನ್ ಎಂಬ ಶಬ್ಧದಿಂದ **'ಜಾ'** ಎನ್ನುವ ಅಕ್ಷರವು ಹೊರಗೆ ಬಂದಿವೆ. ಕೃತಯುಗದಲ್ಲಿ ಜ್ಞಾನವನ್ನು ಬೋಧಿಸುವ ಗುರುಗಳು ರೋಜಾ ಎನ್ನುವ ಎರಡು ಅಕ್ಷರಗಳ ಗುರುತನ್ನು ಕೈಯಲ್ಲಾಗಲೀ, ಕೊರಳಲ್ಲಾಗಲೀ ಧರಿಸುತ್ತಿದ್ದರು. ರೋಜಾ ಎನ್ನುವ ಪದವಿರುವವರು ಬೋಧಕರೆಂದು ಗುರುತು ಹಿಡಿಯುತ್ತಿದ್ದರು. **ರಂಜಾನ್ ಗುರುತಿರುವವರು ಜ್ಞಾನವನ್ನು ತಿಳಿಯುವವರು** ಎಂದು ಹೇಳಲ್ಪಡುತ್ತಿದ್ದರೇ, **ರೋಜಾ ಎನ್ನುವ ಗುರುತಿರುವವರು ಜ್ಞಾನವನ್ನು ಬೋಧಿಸುವವ ರೆಂದು, ಬೋಧಕರೆಂದು, ಗುರುಗಳೆಂದು ಹೇಳಲ್ಪಡುತ್ತಿದ್ದರು**. ಅಷ್ಟೇ ಅಲ್ಲದೇ ರೊಜಾ ಎನ್ನುವ ಗುರುತು ಧರಿಸಿದವರು ರಂಜಾನ್ ಎನ್ನುವ ಗುರುತು ಇರುವವರಿಗೆ ಉಪದೇಶವನ್ನು ಬೋಧಿಸುತ್ತಿದ್ದರು. ಆ ಕಾಲದಲ್ಲಿ ಉಪದೇಶ ಕಾರ್ಯವು ಗುರುಗಳ ಬಳಿ ಶಿಷ್ಯರು ಪಡೆಯುತ್ತಿದ್ದರು. ಗುರುಗಳಿಂದ ಹಿಡಿದು ಶಿಷ್ಯರಾಗಿರುವವರು ಜ್ಞಾನವನ್ನು ಪಡೆಯುತ್ತಿದ್ದೇವೆಂದು ಹೊರಗಿನ ಪ್ರಪಂಚಕ್ಕೆ ತಿಳಿಯುವಂತೆ ಗುರುಶಿಷ್ಯ ಸಂಪ್ರದಾಯದಲ್ಲಿ ಉಪದೇಶ ಕಾರ್ಯ ಇತ್ತು. ಆ ಕಾಲದಲ್ಲಿ ಗುರುಗಳ ಹತ್ತಿರದಿಂದ ಜ್ಞಾನವನ್ನು ಸಂಪೂರ್ಣವಾಗಿ ಪಡೆದ ನಂತರ ಉಪದೇಶ ಕಾರ್ಯವನ್ನು ಮಾಡುತ್ತಿದ್ದರು. ಜ್ಞಾನವನ್ನು ಚೆನ್ನಾಗಿ ತಿಳಿದಿದ್ದೇವೆ ಎನ್ನುವವರು ಗುರುಗಳ ಬಳಿಯಿಂದ ಉಪದೇಶ ತೆಗೆದು ಕೊಳ್ಳುತ್ತಿದ್ದರು. ಈದಿನ ಕೂಡಾ ಗುರು ಶಿಷ್ಯ ಸಂಪ್ರದಾಯದಲ್ಲಿ ಉಪದೇಶ ಕಾರ್ಯವಿದೆ. ಆದರೇ ಪೂರ್ವವು ಶಿಷ್ಯರಾಗಿರುವವರು ರಂಜಾನ್ ಗುರುತನ್ನು ಧರಿಸಿರುವವರು ರೋಜಾ ಗುರುತಿರುವ ಗುರುವಿನ ಬಳಿ ಜ್ಞಾನವನ್ನು ಸಂಪೂರ್ಣವಾಗಿ ತಿಳಿದಿದ್ದೇವೆ ಎನ್ನುವ ನಿರ್ಣಯಕ್ಕೆ ಬಂದ ನಂತರ

ಉಪದೇಶವನ್ನು ಪಡೆಯುತ್ತಿದ್ದರು. ಈದಿನ ಹಾಗೆ ನಡೆಯುತ್ತಿಲ್ಲ. ಶಿಷ್ಯರಾಗಿ ಜ್ಞಾನವನ್ನು ತಿಳಿಯಲು ಕೋರುವವರು ಗುರುವಿನಬಳಿಗೆ ಹೋದ ಮೊದಲ ದಿನವೇ ಯಾವ ಜ್ಞಾನವನ್ನು ತಿಳಿಯುವುದಕ್ಕಿಂತ ಮುನ್ನವೇ ಉಪದೇಶ ಕಾರ್ಯವನ್ನು ಮಾಡುತ್ತಿದ್ದಾರೆ.

ಹಾಗೆ ಮಾಡುವ ಉಪದೇಶವು ಹೆಸರಿಗೆ ಮಾತ್ರವೇ ಉಪದೇಶ ಆದರೇ ವಾಸ್ತವಕ್ಕೆ ಅಲ್ಲವೆಂದು ತಿಳಿಯುತ್ತಿದೆ. ಪೂರ್ವವು ಕೃತಯುಗದಲ್ಲಿ ಮಾಡುವ ಪ್ರತಿ ಕಾರ್ಯವು ಅರ್ಥದಿಂದ ಕೂಡಿಕೊಂಡಿರುವುದಾಗಿ ಇತ್ತು. ಈದಿನ ಹಾಗಲ್ಲದೇ ಎಲ್ಲಾ ಅರ್ಥವಿಲ್ಲದ ಕಾರ್ಯಗಳನ್ನು ಮಾಡುತ್ತಿದ್ದೇವೆ. **'ಅರ್ಥ ಇಲ್ಲದ ಕೆಲಸ ವ್ಯರ್ಥ'** ಎನ್ನುವಂತೆ ವ್ಯರ್ಥವಾಗಿ ಹೋಗುತ್ತಿದೆ. ಈಗ ಗುರುಗಳು ಕೊಡುವ ಉಪದೇಶಕ್ಕು ಪೂರ್ವದಲ್ಲಿ ಆಗ ಕೊಡುವ ಉಪದೇಶಕ್ಕು ಎಷ್ಟೋ ವ್ಯತ್ಯಾಸವಿದೆ. ಪೂರ್ವವು ಜ್ಞಾನ ತಿಳಿದಿರುವ ಗುರುಗಳಿಂದ ಉಪದೇಶ ನಿಜವಾದ ಉಪದೇಶವಾಗಿತ್ತು. 'ರೋಜಾ' ಎನ್ನುವ ಗುರುತನ್ನು ಹೊಂದಿರುವ ಗುರುಗಳು ಉಪದೇಶವನ್ನು ಕೊಡುತ್ತಿದ್ದರು. ತೆಗೆದುಕೊಳ್ಳುವವರು ಜ್ಞಾನ ತಿಳಿದಿರುವ 'ರಂಜಾನ್' ಗುರುತನ್ನು ಧರಿಸಿದವರಾಗಿ ಇರುತ್ತಿದ್ದರು. ರೋಜಾದಲ್ಲಿ **ಜಾ** ಎಂದರೇ ಜನ್ಮ, **ರೋ** ಎಂದರೇ ನಾಶವಾಗಿರುವುದು ಎಂದು ಅರ್ಥ. ಎರಡು ಅಕ್ಷರಗಳನ್ನು ಕೂಡಿಸಿದರೇ ಜನ್ಮ ನಾಶವಾಗಿದೆ, ಜನ್ಮವಿಲ್ಲ ಎನ್ನುವ ಅಕ್ಷರವನ್ನು ರೋಜಾ ಉಂಟುಮಾಡುತ್ತಿದೆ. ರಂಜಾನ್ ಎಂದರೇ ಜನ್ಮವನ್ನು ನಾಶ ಮಾಡುವುದು ಎಂದು ಅರ್ಥವಾದರೇ, ರೋಜಾ ರಂಜಾನ್ ಶಬ್ದದಿಂದ ಹುಟ್ಟಿರುವುದಾದ್ದರಿಂದ ರೋಜಾದಲ್ಲಿ ಜನ್ಮ ನಾಶವಾದುದೆಂದು ಅರ್ಥ ಕೊಡುತ್ತಿದೆ. **ರಂಜಾನ್ ಮುಂಬರುವ ಭವಿಷ್ಯತ್ತನ್ನು ಜನ್ಮ ವಿಷಯದಲ್ಲಿ ಹೇಳಿದರೇ, ರೋಜಾ ನಡೆದುಹೋಗಿರುವ ಭೂತಕಾಲವನ್ನು ಜನ್ಮ ವಿಷಯದಲ್ಲಿ ತೋರುತ್ತಿದೆ.** ಜನ್ಮ ನಾಶವಾಗುತ್ತದೆ ಅಥವಾ ಜನ್ಮವನ್ನು ನಾಶ ಮಾಡಿಕೊಳ್ಳುತ್ತೇನೆ ಎಂದು ಜನ್ಮ ವಿಷಯದಲ್ಲಿ ಮುಂಬರುವ ಭವಿಷ್ಯತ್ತನ್ನು ತೋರುವುದು ರಂಜಾನ್ ಆಗಿರುವಾಗ, ಜನ್ಮ ನಾಶವಾಗಿದೆಯೆಂದು ನಡೆದು ಹೋಗಿರುವ ಭೂತಕಾಲಕ್ಕೆ

ಗುರುತಾಗಿ ರೋಜಾ ಇದೆ ಎಂದು ಹೇಳಿಕೊಂಡಿದ್ದೇವೆ. ರೋಜಾ ಗುರುತನ್ನು ಧರಿಸಿ ಗುರುಗಳು, ರಂಜಾನ್ ಗುರುತನ್ನು ಧರಿಸಿ ಶಿಷ್ಯರು ಇರುತ್ತಿದ್ದರೆಂದು, ಗುರುಶಿಷ್ಯ ಸಂಪ್ರದಾಯಗಳ ಗುರುತಾಗಿ ರಂಜಾನ್, ರೋಜಾ ಎನ್ನುವ ಎರಡು ಪದಗಳು ಇದ್ದವೆಂದು ತಿಳಿದುಕೊಂಡಿದ್ದೇವೆ.

ಶಿಷ್ಯರು ಜ್ಞಾನವನ್ನು ತಿಳಿದಾಗ, ಗುರುಗಳಾಗಿ ಇರುವವರು ಉಪದೇಶವನ್ನು ಕೊಡುತ್ತಿದ್ದರು. ಉಪದೇಶವನ್ನು ಬಿಡಿಸಿ ನೋಡಿದರೇ ಉಪ+ದೇಶ=ಉಪದೇಶ ಎಂದು ಹೇಳಬಹುದು. ಹಾಗೆಯೇ ಉಪನದಿಯೆಂದು ಹೇಳಬಹುದು. ಉಪ ಎಂದರೇ ಪಕ್ಕದಲ್ಲಿರುವುದು, ಎರಡನೆಯದು ಎಂದು ಅರ್ಥ, ಹಾಗೆಯೇ ಬೇರೆಯಾಗಿರುವುದೆಂದು ಹೇಳಬಹುದು. ಒಂದು ನದಿಗೆ ಎಷ್ಟೋ ಉಪನದಿಗಳಿರುತ್ತವೆ. ನದಿಗೆ ಪಕ್ಕದಲ್ಲಿದ್ದು ನದಿಯೊಂದಿಗೆ ಸಂಬಂಧಪಟ್ಟಿರುವುದನ್ನು 'ಉಪನದಿ' ಎನ್ನುತ್ತೇವೆ. ಹಾಗೆಯೇ ದೇಶಕ್ಕೆ ಪಕ್ಕದ ದೇಶವಾಗಿದ್ದು ದೇಶದೊಂದಿಗೆ ಸಂಬಂಧಪಟ್ಟಿರುವುದು 'ಉಪದೇಶ' ಎಂದು ಹೇಳುತ್ತೇವೆ. ಒಬ್ಬ ಮನುಷ್ಯ ಒಂದು ದೇಶದಲ್ಲಿ ನಿವಾಸ ಮಾಡುವುದು ಸಹಜ. ಒಂದು ದೇಶದಲ್ಲಿರುವವನು ಮತ್ತೊಂದು ದೇಶಕ್ಕೆ ಹೋಗಿ ನಿವಾಸವಿದ್ದರೇ ಆತನು ಉಪದೇಶದಲ್ಲಿ ಉಪವಾಸ ಮಾಡುತ್ತಿದ್ದಾನೆಂದು ಹೇಳಬಹುದು. ಪಕ್ಕದ ದೇಶದಲ್ಲಿ ಇರುವದನ್ನು ಉಪನಿವಾಸ ಅಥವಾ ಉಪವಾಸವೆಂದು ಹೇಳಬಹುದು. ಎಂದಾದರೇ ಉಪದೇಶಕ್ಕೆ ಹೋಗುತ್ತೇವೋ ಆಗ ಉಪವಾಸವಿದ್ದೇವೆಂದು ಅರ್ಥ. ಉಪವಾಸ, ಉಪನಿವಾಸ ಎಂದು ಹೇಗಾದರೂ ಅನ್ನಬಹುದು. ಉಪದೇಶವೆಂದರೇ ಈಗ ಇರುವ ದೇಶವಲ್ಲದೇ ಬೇರೆ ದೇಶವೆಂದು ಅರ್ಥ. ಉಪವಾಸ ಎಂದರೇ ಬಹಳಜನ ಅನ್ನ ತಿನ್ನದೇ ಇರುವುದೆಂದು ಅಂದುಕೊಳ್ಳುತ್ತಾರೆ, ಅದೇನೂ ಅಲ್ಲ. ಅನ್ನ (ಆಹಾರವನ್ನು) ತಿನ್ನದೇ ಇರುವುದನ್ನು ಒಂದೊತ್ತು ಇರುವುದು ಎಂದು ಹೇಳುತ್ತೇವೆ. ಅಷ್ಟೇ ಹೊರತು ಅದನ್ನು ಉಪವಾಸ ಎಂದು ಹೇಳಬಾರದು. ನಿವಾಸ ಎಂದರೇ ಒಂದುಕಡೆ ಇರುವುದು ಎಂದು ಅರ್ಥ ಅದನ್ನೇ ಉಪವಾಸವೆಂದು ಕೂಡಾ ಹೇಳುತ್ತಿದ್ದಾರೆ.

ಪಕ್ಕದ ದೇಶದ ಒಂದು ವಿವರವನ್ನು ತಿಳಿದು, ನೆರೆ ದೇಶಕ್ಕೆ ಹೇಗೆ ಹೋಗಬೇಕೋ ತಿಳಿದು, ಪಕ್ಕ ದೇಶದಲ್ಲಿ ಹೇಗೆ ಇರಬೇಕೋ ತಿಳಿದ ನಂತರ ಪಕ್ಕ ದೇಶಕ್ಕೆ ಹೋಗಿ ಅಲ್ಲಿನ ಅನುಭವಗಳನ್ನು ಹೊಂದುವುದನ್ನು ಉಪದೇಶ ಅನುಭವ ಹೊಂದಿದಂತಾಗುವುದು. ಜ್ಞಾನದಿಂದ ನಾವು ನೋಡಿಕೊಂಡರೇ ಪ್ರಕೃತಿಗಿಂತಲೂ ದೇವರು ಬೇರೆಯಾಗಿ ಇದ್ದಾನೆಂದು ತಿಳಿದು, ದೇವರ ಬಳಿಗೆ ಹೋಗಬೇಕೆಂದರೇ ಯೋಗವೇ ಮಾರ್ಗವಾಗಿ ಇದೆಯೆಂದು ತಿಳಿದು, ಯೋಗವನ್ನು ಆಚರಿಸುವವನು ಎಂದೋ ಒಂದುಬಾರಿ ಪ್ರಕೃತಿ ಅನುಭವವನ್ನು ಬಿಟ್ಟು, ಶರೀರದಲ್ಲಿನ ಆತ್ಮ ಅನುಭವವನ್ನು ಹೊಂದುತ್ತಾನೆ. ಹಾಗೆ ಹೊಸ ಅನುಭವವನ್ನು ಜ್ಞಾನದ ಪ್ರಕಾರ ಹೊಂದುವುದನ್ನು ಉದೇಶದಲ್ಲಿ ಉಪವಾಸ ವಿದ್ದಂತಾಗುವುದು. ಆತ್ಮದಲ್ಲಿನ ಅನುಭವವನ್ನು ಯೋಗಿಯಾಗಿ ಇರುವವನು ತಿಳಿದಂತೆ, ಗುರುವಿನಿಂದ ಉಪದೇಶ ಪಡೆದವನು ಉಪದೇಶದಲ್ಲಿನ ಅನುಭವಗ ಳನ್ನು ತಿಳಿಯುತ್ತಿರುತ್ತಾನೆ. ಅದೇ ನಿಜವಾದ ಉಪದೇಶ. ಅದೇ ನಿಜವಾದ ಉಪವಾಸ. ಉಪದೇಶ ಹೊಂದಿದವನು ಉಪವಾಸ ಅನುಭವವನ್ನು ಹೊಂದುವನು.

ಆದರೇ ಈದಿನ ರಂಜಾನ್, ರೋಜಾ ಪದಗಳು ಈದಿನ ಮುಸ್ಲಿಮ್ ಸಮಾಜಗಳಲ್ಲಿವೆ. ಆದರೂ ಅವರು ಅದರ ಅರ್ಥವನ್ನು ತಿಳಿಯದವರಾಗಿದ್ದಾರೆ. ಹಾಗೆಯೇ ಉಪದೇಶವೆಂದರೇ ಏನೋ ತಿಳಿಯದ ಮುಸ್ಲಿಮ್‌ರು ಈದಿನ ಉಪವಾಸ ಕಾರ್ಯವನ್ನು ಎಲ್ಲರೂ ಆಚರಿಸುತ್ತಿದ್ದಾರೆ. ಆದರೇ ಉಪವಾಸ ವೊಂದರ ಜ್ಞಾನಾರ್ಥ ಅವರಿಗೆ ತಿಳಿದಿಲ್ಲ. ಆಧ್ಯಾತ್ಮಿಕ ವಿದ್ಯೆಯಲ್ಲಿನ ಅರ್ಥವನ್ನು ತಿಳಿಯದೆ, ಆಹಾರವನ್ನು ತಿನ್ನದೇ ಇರುವುದು ಉಪವಾಸವೆಂದು ಅಪಾರ್ಥ ಮಾಡಿಕೊಂಡಿದ್ದಾರೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಉಪದೇಶವಿದೆ, ಉಪವಾಸವಿದೆ. **ಶರೀರದಲ್ಲಿಯೇ ಆತ್ಮನನ್ನು ಅನುಭವಿಸುತ್ತಾ ಇರುವುದು ಉಪದೇಶದಲ್ಲಿ ಉಪವಾಸ ಮಾಡಿದಂತಾಗುತ್ತದೆ**. ಉಪವಾಸ ವಿಷಯವಾಗಿ ಖುರಾನ್ ಗ್ರಂಥದಲ್ಲಿ ಸೂರಾ 2, ಆಯತ್ 184ನಲ್ಲಿ ಸ್ವಲ್ಪಮಟ್ಟಿಗೆ ಹೇಳಿದ್ದಾರೆ. ಆದರೇ ಅಲ್ಲಿ ಅರ್ಥ

ಮಾಡಿಕೊಳ್ಳಬೇಕಾದ ವಿಧದಲ್ಲಿ ಯಾರೂ ಅರ್ಥ ಮಾಡಿಕೊಳ್ಳಲಿಲ್ಲವೆಂದು, ಎಲ್ಲರೂ ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾರೆಂದು ತಿಳಿಯುತ್ತಿದೆ. ವಾಕ್ಯದಲ್ಲಿ ಒಂದುಕಡೆ "ನೀನು ಅನಿವಾರ್ಯ ಕಾರ್ಯಗಳಿಂದ ಉಪವಾಸ ಇರಲಾರದೆ ಹೋದರೇ ಅದಕ್ಕೆ ಪರಿಹಾರವಾಗಿ ಒಬ್ಬ ಬಡವನಿಗೆ ಭೋಜನ ಇಡಬೇಕು" ಎಂದು ಹೇಳಿದ್ದಾರೆ. ಬಡವನು ಎಂದರೇ 'ಅಜ್ಞಾನಿ' ಎಂದೂ, ಭೋಜನ ಇಡುವುದು ಎಂದರೇ 'ಜ್ಞಾನವನ್ನು ತಿಳಿಸುವುದು' ಎಂದು ಅರ್ಥ. ನೀನು ಅನಿವಾರ್ಯ ಕಾರ್ಯಗಳಿಂದ ಶರೀರದಲ್ಲಿನ ಆತ್ಮ ಅನುಭವವನ್ನು ಹೊಂದ ಲಾರದೇ, ಹೋದರೆ ಅದಕ್ಕೆ ಬದಲು ಕಾರ್ಯವಾಗಿ ಜ್ಞಾನ ತಿಳಿಯದವನಿಗೆ ಜ್ಞಾನ ಎನ್ನಲ್ಪಡುವ ಆಹಾರವನ್ನು ಕೊಡುವುದು ಎನ್ನುವ ಅರ್ಥವಿರುವಾಗ, ಮನುಷ್ಯರು ಮನುಷ್ಯರಿಗೆ ಅನ್ನದಾನ ಮಾಡುತ್ತಿದ್ದಾರೆ. ಖುರಾನ್‌ನಲ್ಲಿನ ವಾಕ್ಯವನ್ನು ಇಲ್ಲಿ ನೋಡೋಣ. (2-184) **"ಉಪವಾಸವು ನಿರ್ಣಯಿಸಲ್ಪಟ್ಟಿರುವ ದಿನಗಳಿಗೆ ಮಾತ್ರವೇ. ಆದರೇ ನಿಮ್ಮಲ್ಲಿ ಯಾರಾದರೂ ವ್ಯಾಧಿಗ್ರಸ್ಥರಾಗಿದ್ದರೇ ಅಥವಾ ಪ್ರಯಾಣದಲ್ಲಿದ್ದರೇ ಬೇರೆ ದಿನಗಳಲ್ಲಿ ಆ ಉಪವಾಸಗಳನ್ನು ಪೂರ್ತಿ ಮಾಡಬೇಕು. ಆದರೇ ಅದನ್ನು ಪೂರ್ತಿ ಮಾಡುವುದು ದುರ್ಬರವಾದವರಿಗೆ ಅವರು ಪರಿಹಾರವಾಗಿ ಒಬ್ಬ ಬಡವನಿಗೆ ಊಟವಿಡಬೇಕು. ಆದರೇ ಯಾರಾದರೂ ಸಹೃದಯದಿಂದ ಒಳಿತನ್ನು ಮಾಡಲು ಬಯಸಿದರೇ ಅದು ಆತನ ಒಳಿತಿಗೇ, ಆದರೇ ನೀವು ತಿಳಿದುಕೊಂಡರೇ ಉಪವಾಸ ಇರುವುದೇ ನಿಮಗೆ ಎಷ್ಟೋ ಉತ್ತಮವಾದುದು."** ಇಲ್ಲಿ ಹೇಳಿರುವುದನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು.

ಗುರು ಶಿಷ್ಯ ಸಂಪ್ರದಾಯದಲ್ಲಿ ಶಿಷ್ಯನು ಜ್ಞಾನ ತಿಳಿಯುವವನು. ಗುರುವು ಜ್ಞಾನವನ್ನು ಬೋಧಿಸುವವನು ಎಂದು ತಿಳಿದುಕೊಂಡಿದ್ದೇವೆ. ಹಾಗೇ ಜ್ಞಾನ ತಿಳಿಯುವವನು 'ರಂಜಾನ್' ಗುರುತನ್ನು, ಜ್ಞಾನವನ್ನು ಬೋಧಿಸುವವನು 'ರೋಜಾ' ಗುರುತನ್ನು ಕೃತಯುಗದಲ್ಲಿ ಧರಿಸುತ್ತಿದ್ದರೆಂದು ತಿಳಿದುಕೊಂಡಿದ್ದೇವೆ. ಒಬ್ಬ ಮನುಷ್ಯ ಶಿಷ್ಯನಾಗಿ ಜ್ಞಾನವನ್ನು ತಿಳಿದರೇ ಅವನು ಉಪದೇಶವನ್ನು ಪಡೆದವನಾಗುತ್ತಾನೆ. ಉಪದೇಶವನ್ನು ಪಡೆದವನನ್ನು ಆ ದೇಶವನ್ನು

ನೋಡಿದವನೆಂದೇ ಹೇಳಬಹುದು. ಉಪದೇಶವನ್ನು ಎಂದರೇ ಪಕ್ಕ ದೇಶವನ್ನು ಹೊಂದಿದವನು ಅಥವಾ ಉಪದೇಶವನ್ನು ನೋಡಿದವನನ್ನು ಮತ್ತೊಂದು ವಿಧವಾಗಿ ರಂಜಾನ್‌ನನ್ನು ಹೊಂದಿದವನೆಂದೂ, ರಂಜಾನ್‌ನನ್ನು ನೋಡಿದವ ನೆಂದು ಹೇಳಬಹುದು. **'ರಂಜಾನ್'** ಎಂದರೇ ಜ್ಞಾನವನ್ನು ಅಥವಾ ಉಪದೇಶವನ್ನು ಹೊಂದುವವನೆಂದು ತಿಳಿದುಕೊಂಡಿದ್ದೇವೆ. ಯಾರಾದರೂ ಯಾವಾಗ ಉಪದೇಶವನ್ನು ಹೊಂದುವನೋ ಅಥವಾ ರಂಜಾನ್‌ನನ್ನು ಹೊಂದುವನೋ ಅವನು ಆ ದೇಶದಲ್ಲಿ ಅಂದರೇ ರಂಜಾನ್‌ನಲ್ಲಿ ನಿವಾಸ ವಿರುತ್ತಾನೆ (ಉಪವಾಸವಿರುತ್ತನೆ). ನಾನು ಹೇಳಿರುವುದು ಕೃತಯುಗ ಕಾಲದಲ್ಲಿನದಾದರೂ ಈಗಲೂ ಕೂಡಾ ಅದೇ ವಿಧಾನವನ್ನು ಪಾಟಿಸಬಹುದು. ಆಗ ನಡೆದ ವಿಷಯವು ವಾಸ್ತವವೆನ್ನುವುದಕ್ಕೆ ಸಾಕ್ಷಿಯಾಗಿ ಖುರಾನ್ ಗ್ರಂಥವು ಒರೆಕಲ್ಲಾಗಿದೆ. ಈ ಒರೆಕಲ್ಲನ್ನು ಅನುಸರಿಸಿ ನಾನು ಹೇಳಿರುವುದು ಕಟ್ಟುಕಥೆಯಲ್ಲ ವಾಸ್ತವ ವಿಷಯವೇ ಎಂದು ತಿಳಿಯುವುದಕ್ಕೆ ಸೂರಾ 2ರಲ್ಲಿ, 185ನೇ ಅಯತ್‌ನ್ನು ನೋಡೋಣ. ಇದಕ್ಕು ಮೊದಲು ಇದೇ ಸೂರಾದಲ್ಲಿ 184ನೇ ಆಯತ್‌ನ್ನು ಹೇಳಿದ್ದೇವೆ. ಈಗ 185ನ್ನು (ದಿವ್ಯ ಖುರಾನ್ ಸಂದೇಶ ತೆಲುಗು ಭಾಷೆಯಲ್ಲಿ) ಎನ್ನುವ ಗ್ರಂಥದಿಂದ ನೋಡೋಣ. **(2-185) "ರಂಜಾನ್ ತಿಂಗಳು! ಅದರಲ್ಲಿ ದಿವ್ಯಖುರ್‌ಆನ್ ಮಾನವರಿಗೆ ಮಾರ್ಗ ದರ್ಶಕತ್ವವಾಗಿ ಅವತರಿಸಲ್ಪಟ್ಟಿದೆ. ಮತ್ತು ಅದರಲ್ಲಿ ಸನ್ಮಾರ್ಗವನ್ನು ತೋರುವ ಮತ್ತು ಸತ್ಯಾಸತ್ಯಗಳನ್ನು ಬೇರ್ಪಡಿಸುವ ಸ್ಪಷ್ಟವಾದ ಉಪದೇಶಗಳಿವೆ. ಆದ್ದರಿಂದ ನಿಮ್ಮಲ್ಲಿ ಆ ತಿಂಗಳನ್ನು ಹೊಂದಿರುವ ವ್ಯಕ್ತಿ ಆ ತಿಂಗಳೆಲ್ಲವೂ ವಿಧಿಯಾಗಿ ಉಪವಾಸವಿರಬೇಕು. ಆದರೇ ವ್ಯಾಧಿಗ್ರಸ್ಥನಾದವನು, ಪ್ರಯಾಣದಲ್ಲಿ ಇರುವವನು ಆ ಉಪವಾಸಗಳನ್ನು ಬೇರೇ ದಿನಗಳಲ್ಲಿ ಪೂರ್ತಿ ಮಾಡಬೇಕು. ಅಲ್ಲಾಹ್ ನಿಮಗೆ ಸೌಲಭ್ಯ ಮಾಡಲು ಬಯಸುತ್ತಿದ್ದಾನೆಯೇ ಹೊರತು, ನಿಮ್ಮನ್ನು ಕಷ್ಟದಲ್ಲಿಡಲು ಬಯಸುತ್ತಿಲ್ಲ. ಇದು ನಿಮಗೆ ಉಪವಾಸ ದಿನಗಳನ್ನು ಪೂರ್ತಿ ಮಾಡುವುದಕ್ಕೆ ಮತ್ತು ನಿಮಗೆ ಸನ್ಮಾರ್ಗ ತೋರಿರುವುದಕ್ಕೆ ನೀವು ಅಲ್ಲಾಹ್ ಮಹೋನ್ನತೆಯನ್ನು (ಘನತೆಯನ್ನು) ಕೊಂಡಾಡುವುದಕ್ಕೆ ಮತ್ತು ನೀವು ಕೃತಜ್ಞತೆಗಳು ತಿಳಿಸಿಕೊಳ್ಳುವುದಕ್ಕೆ!"**

"ಅಂತಿಮ ದೈವಗ್ರಂಥ ಖುರಾನ್" ನಲ್ಲಿ ಈ ವಿಧವಾಗಿ 185ನೇ ವಾಕ್ಯವನ್ನು ಬರೆದಿದ್ದಾರೆ ನೋಡಿರಿ. (2-185) **"ರಂಜಾನ್ ತಿಂಗಳು ಖುರಾನ್ ಅವತರಿಸಲ್ಪಟ್ಟಿರುವ ತಿಂಗಳು. ಇದು ಮಾನವರೆಲ್ಲರಿಗೂ ಮಾರ್ಗ ದರ್ಶಕತ್ವ. ಅದರಲ್ಲಿ ಸನ್ಮಾರ್ಗದೊಂದಿಗೆ ಸಹ ಸತ್ಯಾಸತ್ಯಗಳನ್ನು ಬೇರ್ಪಡಿಸುವ ಸ್ಪಷ್ಟವಾದ ನಿದರ್ಶನಗಳಿವೆ. ಆದ್ದರಿಂದ ನೀವು ಯಾರು ಈ ತಿಂಗಳನ್ನು ನೋಡುತ್ತೀರೋ ಅವರು ಉಪವಾಸವಿರಬೇಕು, ಆದರೇ ರೋಗಗ್ರಸ್ತನಾಗಿಯೋ, ಪ್ರಯಾಣಿಕ ನಾಗಿಯೋ ಇರುವವರು ಇತರೆ ದಿನಗಳಲ್ಲಿ ಈ ಲೆಕ್ಕವನ್ನು ಪೂರ್ತಿ ಮಾಡಬೇಕು. ಅಲ್ಲಾಹ್ ನಿಮಗೆ ಸೌಲಭ್ಯವನ್ನು ಒದಗಿಸಬೇಕೆಂದುಕೊಂಡಿದ್ದಾನೆಯೇ ಹೊರತು ನಿಮ್ಮನ್ನು ಕಷ್ಟವಿಡಬೇಕೆಂದುಕೊಳ್ಳಲಿಲ್ಲ. ನೀವು ಉಪವಾಸಗಳ ನಿರ್ಣಿತ ಸಂಖ್ಯೆಯನ್ನು ಪೂರ್ತಿ ಮಾಡಿಕೊಳ್ಳಬೇಕೆನ್ನುವುದು, ತಾನು ಅನುಗ್ರಹಿಸಿರುವ ಸನ್ಮಾರ್ಗ ಭಾಗ್ಯಕ್ಕೆ ಪ್ರತಿಯಾಗಿ ಆತನ ದೊಡ್ಡತನವನ್ನು ಕೀರ್ತಿಸಿ, ತಕ್ಕ ರೀತಿಯಲ್ಲಿ ನೀವು ಆತನಿಗೆ ಕೃತಜ್ಞತೆಗಳು ತಿಳಿಸಿಕೊಳ್ಳಬೇಕೆನ್ನುವುದು ಅಲ್ಲಾಹ್ ಅಭಿಲಾಷೆ!"**

ಇದೇ ಆಯತ್ (ವಾಕ್ಯ) "ಖುರ್‌ಆನ್ ಮಜೀದ್" ಗ್ರಂಥದಲ್ಲಿ ಈ ವಿಧವಾಗಿದೆ ನೋಡಿ. **(2–185) "ರಂಜಾನ್ ತಿಂಗಳು ಎಷ್ಟು ಶುಭ ಪ್ರದವಾದುದೆಂದರೇ, ಅದರಲ್ಲಿ ಖುರಾನ್ ಅವತರಿಸಿದೆ. ಅದು ಮಾನವರಿಗೆ ಮಾರ್ಗದರ್ಶಕತ್ವ. ಅದರಲ್ಲಿ ಸನ್ಮಾರ್ಗಕ್ಕೆ ಸಂಬಂಧಿಸಿದ ಸ್ಪಷ್ಟವಾದ ನಿದರ್ಶನಗಳಿವೆ. ಇನ್ನೂ ಅದು ಸತ್ಯಾತ್ಯಗಳನ್ನು ಬೇರ್ಪಡಿಸುವ ಒರೆಕಲ್ಲು. ಆದ್ದರಿಂದ ನಿಮ್ಮಲ್ಲಿ ಆ ತಿಂಗಳನ್ನು ಪಡೆದ ವ್ಯಕ್ತಿ ಆ ತಿಂಗಳೆಲ್ಲಾ ಉಪವಾಸವಿರಬೇಕು. ಆದರೇ ವ್ಯಾಧಿಗ್ರಸ್ಥ ನಾದವನು ಅಥವಾ ಪ್ರಯಾಣದಲ್ಲಿ ಇರುವವನು ಬೇರೆ ದಿನಗಳಲ್ಲಿ ಇವುಗಳನ್ನು ಪೂರ್ತಿಮಾಡಬೇಕು. ಅಲ್ಲಾಹ್ ನಿಮಗೆ ಸೌಲಭ್ಯ ಉಂಟುಮಾಡಬೇ ಕೆಂದುಕೊಳ್ಳುತ್ತಿದ್ದಾನೆ. ಆತನು ನಿಮಗೆ ಕಷ್ಟ ಕೊಡಲು ಇಚ್ಛಿಸುವುದಿಲ್ಲ. ನೀವು ನಿಮ್ಮ ಲೆಕ್ಕವನ್ನು ಪೂರ್ತಿ ಮಾಡಿಕೊಳ್ಳುವುದಕ್ಕೆ, ಈ ಸನ್ಮಾರ್ಗಕ್ಕಾದರೂ ನೀವು ಅಲ್ಲಾಹ್ ದೊಡ್ಡಸ್ತಿಕೆಯನ್ನು, ಘನತೆಯನ್ನು ಕೊಂಡಾಡುವುದಕ್ಕೆ ನೀವು ಕೃತಜ್ಞರಾಗಿ ದಾಸರಾಗಿ ಆಚರಿಸುವುದಕ್ಕಾಗಿ** (ಇದೆಲ್ಲಾ ಮಾಡಲಾಗಿದೆ).

ಮತ್ತೊಂದು ಗ್ರಂಥವು "ಖುರಾನ್ ಭಾವಾಮೃತ" ಎನ್ನುವುದರಲ್ಲಿ ಇದೇ ವಾಕ್ಯವು ಹೀಗಿದೆ ನೋಡಿರಿ. (2-185) **"ರಂಜಾನ್ ಖುರ್‌ಆನ್ ಅವತರಿಸಿದ ತಿಂಗಳು. ಈ ಗ್ರಂಥವು ಮಾನವರಿಗೆ ಮಾರ್ಗದರ್ಶಿನಿ. ಇದರಲ್ಲಿ ಋಜು (ನಿಜ) ಮಾರ್ಗವನ್ನು ತಿಳಿಸುವ, ಸತ್ಯಾಸತ್ಯಗಳನ್ನು, ಒಳ್ಳೆಯ ಕೆಟ್ಟದನ್ನು ಬೇರ್ಪಡಿಸಿ ತೋರಿಸುವ ಸ್ಪಷ್ಟವಾದ ಬೋಧನೆಗಳಿವೆ. ಆದ್ದರಿಂದ ಇನ್ನುಂದೆ ನಿಮ್ಮಲ್ಲಿ ರಂಜಾನ್ ತಿಂಗಳನ್ನು ಹೊಂದುವವರು ಈ ತಿಂಗಳೆಲ್ಲಾ ವಿಧಿಯಾಗಿ ಉಪವಾಸ ಪಾಟಿಸಬೇಕು. ಆದರೇ ರೋಗಗ್ರಸ್ಥರು, ಪ್ರಯಾಣಿಕರು (ತಪ್ಪಿಹೋಗಿರುವ) ಉಪವಾಸಗಳನ್ನು ಇತರೆ ದಿನಗಳಲ್ಲಿ ಆಚರಿಸಿ (ಆ ಸಂಖ್ಯೆಯನ್ನು) ಪೂರ್ತಿ ಮಾಡಬೇಕು. ದೇವರು ನಿಮಗೆ ಸೌಲಭ್ಯ ಕೈಗೂಡಿಸಬೇಕೆಂದು ಬಯಸಿದ್ದಾನೆ ಹೊರತು ನಿಮ್ಮನ್ನು ತೊಂದರೆಗೀಡು ಮಾಡಬೇಕೆಂದು ಭಾವಿಸುತ್ತಿಲ್ಲ. ನೀವು ಉಪವಾಸಗಳ ಸಂಖ್ಯೆಯನ್ನು ಪೂರ್ತಿ ಮಾಡಿಕೊಳ್ಳುವುದಕ್ಕೆ, ದೇವರು ನಿಮಗೆ ಸನ್ಮಾರ್ಗ ತೋರಿರುವುದಕ್ಕೆ ಆತನ ಔನ್ನತ್ಯವನ್ನು ಕೊಂಡಾಡುವುದಕ್ಕೆ, ಆತನಿಗೆ ಕೃತಜ್ಞರಾಗಿ ಇರುವುದಕ್ಕಾಗಿಯು ಈ ಸೌಲಭ್ಯ ಪ್ರಸಾದಿಸಿದ್ದಾನೆ."**

ಇಲ್ಲಿಗೆ ವರುಸೆ ಕ್ರಮವಾಗಿ ತೆಲುಗು ಅನುವಾದ ಮಾಡಿದ ನಾಲ್ಕು ಖುರಾನ್ ಗ್ರಂಥಗಳಲ್ಲಿನ ವಾಕ್ಯಗಳನ್ನು ತೆಗೆದು ಬರೆದು ತೋರಿಸುವುದಾಗಿದೆ. ನಾಲ್ಕು ಗ್ರಂಥಗಳಲ್ಲಿಯೇ ಅಲ್ಲದೇ ಉಳಿದ ಗ್ರಂಥಗಳಲ್ಲಿ ಕೂಡಾ ಈ ವಾಕ್ಯಗಳು ನಾವು ದೊಡ್ಡದಾಗಿ ಗುರುತಿಸಿ ಬರೆದಿರುವ ವಾಕ್ಯವೇ ಇದೆ. ಯಾರಾದರೂ ಸ್ವಲ್ಪ ಬುದ್ಧಿಯನ್ನು ಉಪಯೋಗಿಸಿ ನೋಡಿದರೇ **'ರಂಜಾನ್ ತಿಂಗಳನ್ನು ಹೊಂದುವುದು'** ಎನ್ನುವ ಪದವು ಸ್ವಲ್ಪ ವಿಚಿತ್ರವಾಗಿದೆ. 'ರಂಜಾನ್' ಎಂದರೇ 'ಜ್ಞಾನ' ಎಂದು ಹೇಳಿದ್ದೇವೆ ಅಲ್ಲವೇ! "ಜ್ಞಾನವನ್ನು ತಿಳಿಯುವವನು ರಂಜಾನ್ ಗುರುತನ್ನು ಧರಿಸುತ್ತಾನೆ" ಎಂದು ಹೇಳಿದ್ದೇವಲ್ಲ! ಇಲ್ಲಿ ಅದೇ ಅರ್ಥ ಸರಿಹೋಗುವಂತೆ ಪದಗಳು ಬಳಸಲ್ಪಟ್ಟಿವೆ. ನಾಲ್ಕು ಗ್ರಂಥಗಳನ್ನು ನೋಡಿದರೂ ನಾಲ್ಕು ಗ್ರಂಥಗಳ್ಲಲಿಯೂ ಹಾಗೇ ಇದೆ. **"ಉಪದೇಶ ಪಡೆದವನು ಉಪವಾಸವಿರುತ್ತಾನೆ"** ಎಂದು ಹೇಳಿದಂತೆ, ಈ ವಾಕ್ಯಗಳಲ್ಲಿ ಅದೇ ಅರ್ಥವನ್ನು

ತಿಳಿಯುವಂತೆ **"ರಂಜಾನ್‌ನನ್ನು ಹೊಂದಿದವನು"** ಎಂದು ಹೇಳಿದ್ದಾರೆ. ಈ ಮಾತಿನಿಂದ ಇಲ್ಲಿಯವರೆಗು ನಾನು ಹೇಳಿರುವುದು ಸತ್ಯವೆಂದು ತಿಳಿಯುತ್ತಿದೆ. ಇಲ್ಲಿಯವರೆಗು ನನ್ನ ಮಾತನ್ನು ನಂಬದವರು, ಇಲ್ಲಿ ಬರೆದಿರುವ ವಾಕ್ಯಗಳೊಂದಿಗೆ ಉಪದೇಶವೆಂದರೂ, ರಂಜಾನ್ ಎಂದರೂ ಒಂದೇ ಅರ್ಥ ಹೊಂದಿರುವ ಪದಗಳೆಂದು ತಿಳಿಯುವುದಕ್ಕೆ ಅವಕಾಶವಿದೆ. ಹಾಗೆಯೇ **'ಉಪವಾಸ'** ಎಂದರೇ ಹೊರಗಿನ ಅರ್ಥದ ಪ್ರಕಾರ "ಆಹಾರ ತಿನ್ನದೇ ಇರುವುದು' ಎಂದು ಅಂದುಕೊಳ್ಳದೇ, ಅಂತರಾರ್ಥದ ಪ್ರಕಾರ **'ದೈವ ಚಿಂತನೆ'** ಮಾಡುವುದೇ ಎಂದು ತಿಳಿಯುತ್ತಿದೆ.

ಖುರಾನ್ ಗ್ರಂಥದಲ್ಲಿ ಎರಡನೆಯ ಸೂರಾದಲ್ಲಿಯೇ 185ನೇ ಆಯತ್‌ನ್ನು ಇಲ್ಲಿಯವರೆಗು ನೋಡಿದ್ದೇವೆ. 186ನೇ ಆಯತ್‌ನಲ್ಲಿ ಮನುಷ್ಯನಿಗೆ ಅರ್ಥವಾಗದ ದೈವ ಸಂಬಂಧ ವಿಷಯಗಳನ್ನು ಮನುಷ್ಯ ತನ್ನ ಶರೀರದಲ್ಲಿಯೇ ಆತ್ಮವನ್ನು ಕೇಳಿದರೇ 'ಎಂತಹ ಜ್ಞಾನ ವಿಷಯವನ್ನಾದರೂ ತಿಳಿಸಬಲ್ಲದು' ಎನ್ನುವ ವಿಷಯವನ್ನು ಹೇಳಿದ್ದಾರೆ. ದೇವರು ಎಲ್ಲೋ ಮೇಲೆ ಆಕಾಶದಲ್ಲಿ ಇದ್ದಾನೆಂದು ಅಂದುಕೊಳ್ಳದೇ **'ನಿನಗೆ ಅತ್ಯಂತ ಸಮೀಪದಲ್ಲಿಯೇ ಇದ್ದಾನೆ'** ಎಂದು ವಾಕ್ಯದಲ್ಲಿ ಹೇಳುವುದೇ ಅಲ್ಲದೇ, ನೀನು ದೈವಸಂಬಂಧವಾದ ಯಾವ ಪ್ರಶ್ನೆಯನ್ನು ಕೇಳಿದರೂ ಅದಕ್ಕೆ ಸಮಾಧಾನ ಕೊಡುವುದೆಂದು ಇದೆ. ಆದರೇ ಎಲ್ಲರಿಗೂ ಆತನು ಸಮಾಧಾನ ನೀಡುವುದಿಲ್ಲ. ಯಾರಾದರೇ ದೇವರು ತನ್ನ ಶರೀರದಲ್ಲಿಯೇ ಇದ್ದಾನೆಂದು ವಿಶ್ವಾಸಿಸುತ್ತಿದ್ದಾನೋ ಅವನಿಗೆ ಮಾತ್ರವೇ ಸಮಾಧಾನ ಕೊಡುವನು. ಒಂದುಬಾರಿ ಆ ವಾಕ್ಯವನ್ನು ನೋಡಿದರೇ ಅದರಲ್ಲಿ ಏನಿದೆಯೋ ನೀವೇ ಗ್ರಹಿಸಬಹುದು. (2-186) **"ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೇ ನಾನು ಅವರಿಗೆ ಅತಿ ಸಮೀಪದಲ್ಲಿಯೇ ಇದ್ದೇನೆ. ಕರೆಯುವವನು ನನ್ನನ್ನು ಕರೆದಾಗ ನಾನು ಆತನ ಕರೆಯನ್ನು ಕೇಳಿ ಉತ್ತರಕೊಡುತ್ತೇನೆ. ಆದಕಾರಣ ಅವರು ಸರಿಯಾದ ಮಾರ್ಗವನ್ನು ಪಡೆಯುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇಕು. ಮತ್ತು ನನ್ನಲ್ಲಿ ವಿಶ್ವಾಸ**

**ಹೊಂದಿರಬೇಕು ಎಂದು ಹೇಳು"** ಈ ವಾಕ್ಯವನ್ನು ನೋಡಿದರೇ ಎಲ್ಲರಿಗೂ ಆತನು ಸಮೀಪದಲ್ಲಿಯೇ ಇದ್ದರೂ ಕರೆಯುವವನು ಕರೆದಾಗಲೇ ನಾನು ಮಾತನಾಡುತ್ತೇನೆ ಎನ್ನುವುದರಲ್ಲಿ ಆತನು ಎಲ್ಲರಿಗೂ ಮಾತನಾಡುವುದಿಲ್ಲವೆಂದು, ಆತನ ಮೇಲೆ ವಿಶ್ವಾಸ ಇರುವವನಿಗೆ ಮಾತ್ರವೇ ಮಾತನಾಡುತ್ತಾನೆಂದು ಅರ್ಥವಾಗುತ್ತಿದೆ. ಹಾಗೆ ಮನುಷ್ಯನ ಕರೆಯನ್ನು ಕೇಳಿದ ಆತ್ಮ ದೈವಿಕವಾದ ಉತ್ತರವನ್ನು ಕೊಡುವನು. ಪ್ರಪಂಚ ಸಂಬಂಧವಾದವುಗಳಿಗೆ ಉತ್ತರ ಕೊಡುವುದಿಲ್ಲವೆಂದು ತಿಳಿಯಬೇಕು. ನಂತರ 187ನೇ ಆಯತ್‌ನಲ್ಲಿರುವ ಸಮಾಚಾರದಿಂದ ಈದಿನ ಮುಸ್ಲಿಮ್‌ರೆಲ್ಲರೂ ರಂಜಾನ್ ತಿಂಗಳಲ್ಲಿ ಹಗಲಿನ ಹೊತ್ತು ಅನ್ನವನ್ನು ತಿನ್ನದೇ ಉಪವಾಸ ಮಾಡುತ್ತಿದ್ದಾರೆ. ಆದರೇ ಈ 187ನೇ ವಾಕ್ಯವನ್ನು ಹಾಗೆಯೇ ಎಲ್ಲರೂ (ಮುಸ್ಲಿಮ್‌ರು) ಅರ್ಥ ಮಾಡಿಕೊಂಡಿದ್ದಾರೆ. ಆದ್ದರಿಂದ ಮುಸ್ಲಿಮ್‌ರೆಲ್ಲರೂ **'ರೋಜಾ'** ಎಂಬ ಹೆಸರಿನಿಂದ ಅಲ್ಲಾಹ್ ಆರಾಧನೆಯಲ್ಲಿ ಒಂದು ಆರಾಧನೆಯಾಗಿ ತಿಂಗಳವರೆಗು ಉಪವಾಸವಿರುತ್ತಿದ್ದಾರೆ.

ರಂಜಾನ್ ತಿಂಗಳಲ್ಲಿ ಮುಸ್ಲಿಮ್‌ರು ಆಚರಿಸುವ 'ರೋಜಾ' ಎನ್ನುವ ಉಪವಾಸಗಳನ್ನು ದೇವರು ಹೇಳಿದ್ದಾನಾ? ಅಂದರೇ ದೇವರು ಹೇಳಿದಂತೆ ಎಲ್ಲೂ ಕಾಣಿಸಲಿಲ್ಲ. ಮನುಷ್ಯರು ಮಾಡುವ ಉಪವಾಸಗಳಿಂದ ದೇವರಿಗೆ ಕೆಲಸವಿಲ್ಲ. ಅಷ್ಟೇಅಲ್ಲದೇ 187ನೇ ಆಯತ್‌ನಲ್ಲಿ ಹಗಲು ಉಪವಾಸ ವಿಷಯವೇ ಅಲ್ಲದೇ, ರಾತ್ರಿಹೊತ್ತು ಗಂಡಹೆಂಡತಿ ಒಬ್ಬರಿಗೊಬ್ಬರು ಸೇರುವ ವಿಷಯವನ್ನು ಕೂಡಾ ಹೇಳಿದಂತೆ ಇದೆ. ಗಂಡಹೆಂಡತಿಯರು ಶಾರೀರಕವಾಗಿ ಸೇರುವ ವಿಷಯವಾಗಲೀ, ಮನುಷ್ಯರು ಉಪವಾಸವಿರುವ ವಿಷಯವಾಗಲೀ ದೇವರಿಗೆ ಸಂಬಂಧ ವಿಷಯವಲ್ಲ. ಹಾಗಿರುವಾಗ ದೇವರು ಯಾಕೆ ಈ ವಿಷಯಗಳನ್ನು ಕುರಿತು ಹೇಳಿರುತ್ತಾನೆ? ಎಂದು ಪ್ರಶ್ನೆ ಬರಬಹುದು. ಈಗ ಎರಡನೆಯ ಸೂರಾದಲ್ಲಿನ 187ನೇ ಆಯತ್‌ನ್ನು ಇಲ್ಲಿ ನೋಡೋಣ. (2-187) **"ಉಪವಾಸ ರಾತ್ರಿಗಳಲ್ಲಿ ನೀವು ನಿಮ್ಮ ಹೆಂಡತಿಯರೊಂದಿಗೆ ಸೇರುವುದು ನಿಮಗಾಗಿ ಧರ್ಮ ಸಮ್ಮತ ಮಾಡಲಾಗಿದೆ. ಅವರು ನಿಮಗೆ ವಸ್ತ್ರಗಳು, ನೀವು ಅವರಿಗೆ ವಸ್ತ್ರಗಳು.**

**ನೀವು ರಹಸ್ಯವಾಗಿ ಆತ್ಮದ್ರೋಹಕ್ಕೆ ಭಾಗಿಯಾಗುತ್ತಿದ್ದೀರೆನ್ನುವ ಸಂಗತಿ ಅಲ್ಲಾಹ್‌ಗೆ ತಿಳಿದಿದೆ. ಆದರೂ ಆತನು ಕ್ಷಮೆ ಗುಣದಿಂದ ನಿಮ್ಮಕಡೆಗೆ ಮರಳಿ, ನಿಮ್ಮ ತಪ್ಪನ್ನು ಮನ್ನಿಸಿದ್ದಾನೆ. ಇನ್ನು ಮುಂದೆ ನೀವು ನಿಮ್ಮ ಹೆಂಡತಿಯರೊಂದಿಗೆ ಉಪವಾಸ ರಾತ್ರಿಗಳಲ್ಲಿ ರಮಿಸುವುದಕ್ಕೆ, ಅಲ್ಲಾಹ್ ನಿಮಗಾಗಿ ಬರೆದಿಟ್ಟಿರುವುದನ್ನು ಅನ್ವೇಷಿಸುವುದಕ್ಕೆ ನಿಮಗೆ ಅನುಮತಿ ಇದೆ. ಮುಂಜಾನೆಯಲ್ಲಿ ಬಿಳುಪು ಮಧ್ಯೆರಾತ್ರಿ ಕಪ್ಪನೆ ಛಾಯೆಯಿಂದ ಪ್ರಸ್ಫುಟವಾಗುವವರೆಗು ತಿನ್ನಿರಿ, ಕುಡಿಯಿರಿ. ಆ ನಂತರ ಇವುಗಳೆಲ್ಲವನ್ನು ತ್ಯಜಿಸಿ ರಾತ್ರಿ ಕತ್ತಲಾಗುವವರೆಗು ಉಪವಾಸವಿರಿ. ಇನ್ನು ನೀವು ಮಸ್ಜೀದ್‌ಗಳಲ್ಲಿ "ಏತೆಕಾಫ್" ಆಚರಿಸುವ ಕಾಲದಲ್ಲಿ ಮಾತ್ರ ನಿಮ್ಮ ಹೆಂಡತಿಯರೊಂದಿಗೆ ಸಮಾಗಮ ನಡೆಸಬೇಡಿ. ಇವು ಅಲ್ಲಾಹ್ ನಿರ್ಧಾರಿಸಿರುವ ಹದ್ದುಗಳು. ನೀವು ಅವುಗಳ ಆಸುಪಾಸಿಗೂ ಕೂಡಾ ಹೋಗಬೇಡಿ. ಪ್ರಜೆಗಳು ಜಾಗರೂಕರಾಗಿ ಇರುವುದಕ್ಕಾಗಿ ಅಲ್ಲಾಹ್ ತನ್ನ ಆಯತ್‌ಗಳನ್ನು ಹೀಗೆ ಬಿಡಿಸಿ ಹೇಳುತ್ತಿದ್ದಾನೆ."**

ಈ ಆಯತ್‌ನಲ್ಲಿ ಶೇ. 90 ರಷ್ಟು ಗಂಡಹೆಂಡತಿಯರು ಒಬ್ಬರಿಗೊಬ್ಬರು ಸೇರುವ ವಿಷಯವಿರುವಾಗ, ಶೇ. ಹತ್ತರಷ್ಟು ರಾತ್ರಿ ತಿನ್ನಿರಿ, ಕುಡಿಯಿರಿ ಎಂದು ಹಗಲು ಉಪವಾಸವಿರಿ ಎಂದು ಹೇಳಿದ್ದಾರೆ. ಈ ವಿಷಯವನ್ನು ಎಲ್ಲರೂ ಪ್ರಪಂಚ ಸಂಬಂಧವಾಗಿಯೇ ನೋಡುತ್ತಿದ್ದಾರೆ. ಆದರೇ ಮುಸ್ಲಿಮ್‌ರಿಗೆ ಅರ್ಥವಾಗಿರುವುದು ಶೇ.ಹತ್ತರಷ್ಟು ಹೇಳಿರುವ ರಾತ್ರಿ ತಿನ್ನಿರಿ, ಹಗಲು ತಿನ್ನಬೇಡಿರಿ ಎಂದು ಹೇಳಿರುವುದೇ ಶೇ.ನೂರರಷ್ಟು ಅರ್ಥವಾಗಿದೆ. ಈ ಅಯತ್‌ನಲ್ಲಿ ಹೇಳಿರುವ ಶೇ.90 ರಷ್ಟು ಗಂಡಹೆಂಡತಿಯರ ಸಂಬಂಧವನ್ನು ಬಿಟ್ಟುಹಾಕಿ ಶೇ.ಹತ್ತರಷ್ಟು ರಾತ್ರಿ ಹೊತ್ತು ತಿನ್ನಿರಿ ಎನ್ನುವ ವಿಷಯವನ್ನೇ ಹೇಳಿಕೊಳ್ಳುತ್ತಾ ಅದನ್ನೇ ಎಲ್ಲರೂ ಆಚರಿಸುತ್ತಿದ್ದಾರೆ. ನಾವು ಈ ಆಯತ್ ನೋಡಿದ ನಂತರ ಪ್ರಪಂಚ ಸಂಬಂಧವಾಗಿ ಅರ್ಥ ಮಾಡಿಕೊಂಡರೇ ಈ ವಿಷಯವನ್ನು ದೇವರು ಯಾಕೆ ಹೇಳಿದ್ದಾನೆ? ಈ ವಿಷಯಗಳು ಪ್ರಪಂಚ ವಿಷಯಗಳಾಗಿರುವಾಗ ಈ ವಿಷಯಗಳಿಂದ ದೇವರಿಗೆ ಏನು ಕೆಲಸ ಇರುತ್ತದೆ? ಎಂದು ಆಲೋಚಿಸಿದ್ದೇವೆ.

ಈ ವಾಕ್ಯಕ್ಕಿಂತ ಮೊದಲು 186ನೇ ವಾಕ್ಯವನ್ನು ಹೇಳಿರುವುದರಿಂದ ಆ ವಾಕ್ಯದ ಪ್ರಕಾರ 187ನೇ ಆಯತ್ ಮನುಷ್ಯರಿಗೆ ಅರ್ಥವಾಗಲಿಲ್ಲವೆಂದು ತಿಳಿದಿದೆ. 'ಹಗಲು ಉಪವಾಸ' ಎನ್ನುವ ವಿಷಯವು ಪೂರ್ತಿ ದೈವ ಸಂಬಂಧವಾದುದೆಂದು ತಿಳಿದುಹೋಗಿದೆ. ಹಿಂದಕ್ಕೆ ಹೋಗಿ 184, 185ನೇ ವಾಕ್ಯಗಳನ್ನು ನೋಡಿದ ನಂತರ 'ಉಪವಾಸ' ಎಂದರೇ ತಿನ್ನುವ ಆಹಾರಕ್ಕೆ ಸಂಬಂಧಿಸಿದ ವಿಷಯವಲ್ಲ ವೆಂದು ದೈವಿಕವಾದ ಯೋಗವೆಂದು, ಹಾಗೆ ಪ್ರಪಂಚ ಧ್ಯಾಸ ಇಲ್ಲದೇ ಹೋಗಿ ದೈವಚಿಂತನೆಯಲ್ಲಿ ಇರುವುದು ಉಪವಾಸವಾಗುತ್ತದೆಂದು, ಅದಕ್ಕೆ ಬೇಕಾಗಿರುವ ಜ್ಞಾನವನ್ನು ಗುರುವಿನ ಬಳಿಯಿಂದ ಪಡೆಯುವುದನ್ನು ಉಪದೇಶ ಎಂದೂ, ಉಪದೇಶವನ್ನು ಪಡೆದವನು, ಉಪವಾಸ ಇರಬೇಕಾದ್ದೇ ಎಂದು ತಿಳಿದು ಹೋಗಿದೆ. ಉಪದೇಶವನ್ನೇ 'ರಂಜಾನ್' ಎಂದು ಹೇಳಿದಂತೆ, ರಂಜಾನ್, ರೋಜಾ ಎಂಬ ಪದಗಳು ಖುರಾನ್ ಗ್ರಂಥಕ್ಕಿಂತ ಮೊದಲೇ ಕೃತಯುಗದಲ್ಲಿಯೇ ಹೇಳಲ್ಪಟ್ಟಿವೆಯೆಂದು ತಿಳಿದು ಹೋಗಿದೆ. ಅದರ ಪ್ರಕಾರ ನಿಜವಾದ ಉಪದೇಶ ವನ್ನು ಹೊಂದಿದವನನ್ನು 185ನೇ ವಾಕ್ಯದಲ್ಲಿ **ರಂಜಾನ್‌ನನ್ನು ಹೊಂದಿದವನು** ಎಂದು ಬರೆಯಲ್ಪಟ್ಟಿರುವುದನ್ನು ನಮ್ಮ ಭಾವನೆಗೆ ಬಹಳ ಹತ್ತಿರವಾಗಿದೆ. ಆಗ 187ನೇ ವಾಕ್ಯದಲ್ಲಿ ಬರೆದಿರುವ ಗಂಡಹೆಂಡತಿಯರು ಸೇರುವುದನ್ನು ಧರ್ಮಸಮ್ಮತ ಮಾಡಲ್ಪಟ್ಟಿದೆಯೆಂದು ಹೇಳಿರುವುದನ್ನು ಕುರಿತು ಆಲೋಚಿಸಿದಾಗ ಸ್ವಲ್ಪ ವಿಷಯ ಅರ್ಥವಾಗಿದೆ. ಅದೇನೆಂದರೇ! ಅಲ್ಲಿ ಹೇಳಿರುವುದು ಗಂಡಹೆಂಡತಿ ಶರೀರ ಸಂಬಂಧವಾಗಿ ಸೇರುವುದನ್ನು ಕುರಿತಲ್ಲ. ಗಂಡಹೆಂಡತಿಯರು ಸೇರುವುದಕ್ಕೆ ಅಂದರೇ ಲೈಂಗಿಕ ವಿಷಯಗಳ ಹತ್ತಿರ ಕೂಡಾ ದೈವ ಸಂಬಂಧವಾದ ಧರ್ಮ ಇರುತ್ತದಾ? ಎಂದು ಪ್ರಶ್ನೆ ಬಾರದೆ ಇರುವುದಿಲ್ಲ. ಹಾಗೆ ಪ್ರಶ್ನಿಸಿಕೊಂಡು ನೋಡಿದರೇ ಆ ವಿಷಯದಲ್ಲಿ ದೇವರು ಏನು ಹೇಳಲಿಲ್ಲವೆಂದು, ಆ ಕೆಲಸಗಳೆಲ್ಲವೂ ಅವರವರ ಕರ್ಮಗಳನ್ನು ಅನುಸರಿಸಿ ಮೊದಲೇ ನಿರ್ಣ ಯಿಸಲ್ಪಟ್ಟಿರುತ್ತವೆಂದು ಹೇಳದೇ ತಪ್ಪುವುದಿಲ್ಲ. ಪ್ರತಿ ಚಿಕ್ಕ ಪ್ರಪಂಚ ವಿಷಯವು ಮೊದಲೇ ಬರೆದಿಟ್ಟಿರುವ ಕರ್ಮಪತ್ರದ ಪ್ರಕಾರ ನಡೆಯಲೇಬೇಕು. ಈ ವಿಷಯದಲ್ಲಿ ಧರ್ಮವೆನ್ನುವುದು ಇರುವುದಿಲ್ಲ. ಆ ವಿಷಯದ ಮೇಲೆ ದೇವರು

ಎಂತಹ ಧರ್ಮನಿರ್ಣಯ ಮಾಡಲಿಲ್ಲ. ವಾಕ್ಯವನ್ನು ನಾವು ಸರಿಯಾಗಿ ಗ್ರಹಿಸಿಕೊಳ್ಳಲಿಲ್ಲ.

ಗ್ರಂಥ ಪ್ರಾರಂಭದಲ್ಲಿಯೇ ಮೂರನೆಯ ಸೂರಾ ಮೊದಲಿನಲ್ಲಿಯೇ ಏಳನೆಯ ಆಯತ್‌ನಲ್ಲಿ ಈ ಗ್ರಂಥದಲ್ಲಿ **ಮುತಷಾಬಿಹಾತ್** ವಾಕ್ಯಗಳಿವೆಯೆಂದು ಗ್ರಂಥವನ್ನು ಬೋಧಿಸಿರುವ ಜಿಬ್ರಯೇಲ್‌ರವರೇ ಹೇಳಿರುವುದಾಗಿದೆ. ಜ್ಞಾನವನ್ನು ವಾಕ್ಯರೂಪದಲ್ಲಿ ಬೋಧಿಸಿರುವಾಗ ಅದು ಗ್ರಂಥರೂಪವಾಗಿ ಪ್ರಜೆಗಳಲ್ಲಿ ಹೋದಾಗ ಅದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ಹೋದರೇ ಮಾಡಿರುವ ಕೆಲಸ ವ್ಯರ್ಥವಾಗುತ್ತದೆ ಎಂದು ಜಿಬ್ರಯೇಲ್ ಮೊದಲೇ ತಾನು ಹೇಳಿರುವ ವಾಕ್ಯಗಳಲ್ಲಿ ಮುತಷಾಬಿಹಾತ್ (ಸೂಕ್ಷ್ಮ ಅರ್ಥಗಳಿರುವ) ವಾಕ್ಯಗಳಿರುವವೆಂದು ಹೇಳಿರುವುದಾಗಿದೆ. ಜಿಬ್ರಯೇಲ್ ಮೊದಲೇ ಹೇಳಿದರೂ ಬಹಳಜನ ಮುಸ್ಲಿಮ್‌ರು ಮುತಷಾಬಿಹಾತ್ ವಾಕ್ಯಗಳಿರುವಂತಾಗಲೀ, ಅವುಗಳಿಗೆ ಸೂಕ್ಷ್ಮವಾದ ಅರ್ಥವಿದೆ ಎಂದಾಗಲೀ, ಹೊರಗೆ ಹೇಳಿಕೊಳ್ಳುತ್ತಿಲ್ಲ. ಯಾರಾದರೂ ಸೂಕ್ಷ್ಮವಾಗಿ ವಿವರ ಹೇಳುವವನಿದ್ದರೇ ಇವು ಮನುಷ್ಯರು ಹೇಳುವ ವಿಷಯಗಳಲ್ಲ ಇದರ ಅರ್ಥ ದೇವರಿಗೇ ಗೊತ್ತು ಎಂದು ಅವನನ್ನು ಅವಹೇಳನೆ ಮಾಡುತ್ತಿದ್ದಾರೆ. ಮನುಷ್ಯರು ಸ್ವತಃವಾಗಿ ಹೇಳಲಾರರು ಎಂದು ನಾನು ಕೂಡಾ ಒಪ್ಪಿಕೊಳ್ಳುತ್ತೇನೆ. ಆದರೇ ಮನುಷ್ಯನಲ್ಲಿರುವ ದೇವರು ಹೇಳಬಹುದಲ್ಲವೇ! ಎಂದು ಯಾರೂ ಅಂದುಕೊಳ್ಳುತ್ತಿಲ್ಲ. ಈ ವಿಧವಾಗಿ ಮುತಷಾಬಿಹಾತ್ ವಾಕ್ಯಗಳ ವಿವರವು ಮನುಷ್ಯರು ತಿಳಿಯಲಾರದೆ ಹೋಗಿದ್ದಾರೆ.

ದೇವರು ಮುತಷಾಬಿಹಾತ್ ವಾಕ್ಯಗಳನ್ನು ಹೇಳದೇ ಸ್ಥೂಲವಾದ ಮುಹ್ಕಮಾತ್ ವಾಕ್ಯಗಳೇ ಹೇಳಿದ್ದರೇ ಚೆನ್ನಾಗಿರುತ್ತಿತ್ತು ಅಲ್ಲವೇ! ಎಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಸಮಾಧಾನ ಏನೆಂದರೇ! ದೇವರು ಎಲ್ಲಾ ತಿಳಿದಿರುವವನು. ಆತನು ಮನುಷ್ಯರು ಓದುವ ವಾಕ್ಯವು ಮನುಷ್ಯರಿಗೆ ಸುಲಭವಾಗಿ ಅರ್ಥವಾಗಬಾರದೆಂದೇ ಅಂತಹ ಸೂಕ್ಷ್ಮ ಅರ್ಥವಿರುವ ವಾಕ್ಯಗಳನ್ನು ಇಟ್ಟಿದ್ದಾನೆ. ಅಂತಹ ವಾಕ್ಯಗಳನ್ನು ತಿಳಿಯಬೇಕೆಂದು ಯಾರು

ತಪನೆ ಪಡುತ್ತಾನೋ, ಅವನಿಗೆ 2–186 ವಾಕ್ಯದಲ್ಲಿ ಹೇಳಿದಂತೆ ತಾನೇ ಅವನ ಶರೀರದೊಳಗಿನಿಂದಲೇ ತಿಳಿಸುತ್ತಾನೆ. ಕಷ್ಟವಾದ ವಾಕ್ಯಗಳು ದೇವರ ಮೇಲೆ ನಂಬಿಕೆ ಇಲ್ಲದವರಿಗೆ ಅರ್ಥವಾಗಬಾರದೆನ್ನುವ ಉದ್ದೇಶದಿಂದಲೇ ದೇವರು ಇರಿಸುವುದು ನಡೆದಿದೆ. ಈದಿನ ಎಷ್ಟೋ ಮುಸ್ಲಿಮ್ ಸಮಾಜವು ಭೂಮಿಮೇಲೆ ಇದೆ. ಕೆಲವು ಕೋಟಿಗಳ ಸಂಖ್ಯೆಯಲ್ಲಿ ಮುಸ್ಲಿಮ್‌ರು ಇರುವಾಗ, ಅದರಲ್ಲಿ ಲಕ್ಷ, ಸಾವಿರ, ನೂರು, ಹತ್ತರ ಸಂಖ್ಯೆಯಲ್ಲಿ ಕೂಡಾ ಕೆಲವು ವಿಷಯಗಳು ಸಕ್ರಮವಾಗಿ ಅರ್ಥವಾಗಿರುವವರಿದ್ದಾರೆಂದು ಹೇಳಲಾರೆವು. ಮುಸ್ಲಿಮ್‌ರಲ್ಲಿ ಒಂದು ಕ್ರಮಶಿಕ್ಷಣ ಇದೆ. ಯಾವ ಇತರ ಮತಗಳಲ್ಲಿ ಇಲ್ಲದ ಕ್ರಮಶಿಕ್ಷಣ ಮುಸ್ಲಿಮ್‌ರಲ್ಲಿ ಇರುವುದನ್ನು ವಿಶೇಷವಾಗಿ ಹೇಳಿಕೊಳ್ಳಬಹುದು. ಅಂತಹ ವಿಶೇಷ ಉಳಿದ ಮತಗಳಲ್ಲಿ ಇಲ್ಲವೆಂದೇ ಹೇಳಬಹುದು. ಆದರೇ ಅವರ ಹಿರಿಯರು ಹೇಗೆ ಹೇಳಿದರೇ ಹಾಗೆ ಕೇಳುವುದು ಕ್ರಮಶಿಕ್ಷಣವೇ ಆದರೇ ಅದು ಪ್ರಪಂಚ ವಿಷಯಗಳಲ್ಲಿ ದೊಡ್ಡದಾಗಿಯೇ ಕಾಣಿಸುತ್ತಿರುತ್ತದೆ. ಕಾಣಿಸುವ ವಿಧವಾಗಿ ಹಿರಿಯರ ಮಾತಿನ ಪ್ರಕಾರ ನಡೆಯುವುದು ದೊಡ್ಡ ಕೆಲಸವೇ ಆಗುತ್ತದೆ. ಅದೇ ಪರಮಾತ್ಮ (ದೇವರ) ವಿಷಯದೊಳಗೆ ಬರುವಷ್ಟರಲ್ಲಿ (6–91) ಆಯತ್‌ನಲ್ಲಿ **"ನಾನು ಹೇಳಿರುವ ಜ್ಞಾನವು ನಿಮಗಾಗಲೀ, ನಿಮ್ಮ ಹಿರಿಯರಿಗಾಗಲೀ ತಿಳಿದಿಲ್ಲ"** ಎಂದು ದೇವರೇ ಹೇಳಿರುವುದರಿಂದ ದೇವರ ಜ್ಞಾನವು ಅವರ ಹಿರಿಯರಿಗೆ ಕೂಡಾ ತಿಳಿದಿಲ್ಲವೆಂದೇ ಹೇಳಬಹುದು. ಆದ್ದರಿಂದ ದೇವರ ಜ್ಞಾನ ವಿಷಯದಲ್ಲಿ ಹಿರಿಯರು ಹೇಳಿದಂತೆ ಕೇಳುತ್ತೇವೆ ಎನ್ನುವ ಕ್ರಮ ಶಿಕ್ಷಣ ನಷ್ಟವನ್ನು ಕೈಗೂಡಿಸಿದೆ. ಪ್ರಪಂಚ ವಿಷಯದಲ್ಲಿ ದೊಡ್ಡದಾಗಿ ಹೇಳಲ್ಪಟ್ಟಿರುವ ಕ್ರಮಶಿಕ್ಷಣ ಜ್ಞಾನ ವಿಷಯದಲ್ಲಿ ಜ್ಞಾನವನ್ನು ತಿಳಿಯದಂತೆ ಮಾಡಿದೆ. ಹಿರಿಯರು ಹೇಳಿರುವಹಾಗೆ ಕೇಳುವುದರಿಂದ ಅವರು ಹೇಳಿರುವ ಕೆಲವು ತಪ್ಪು ಭಾವನೆಗಳು ಎಲ್ಲರಿಗೂ ಹಬ್ಬಿಹೋಗಿವೆ. ಉಪವಾಸ ವಿಷಯದಲ್ಲಿ ಅದೇ ನಡೆದಿದೆ. ಹಾಗೆಯೇ ಗಂಡಹೆಂಡತಿ ಸೇರುವಿಕೆ ಎನ್ನುವ ವಿಷಯದಲ್ಲಿ ಅದೇ ನಡೆದಿದೆ.

ಸೂರಾ ಎರಡು 184, 185 ಆಯತ್‌ಗಳಲ್ಲಿ ಹೇಳಿರುವ, ಹೇಳಲ್ಪಟ್ಟಿರುವ **'ಉಪದೇಶ'** ಏನೋ ಅಲ್ಲಿರುವ **'ಉಪವಾಸ'** ಏನೋ ತಿಳಿಯದೇ ಹೋಗಿದೆ. ಅದೇ ವಿಧವಾಗಿ 187ನೇ ಆಯತ್‌ನಲ್ಲಿ ಶೇ.90 ರಷ್ಟು ಪಾಲು ಗಂಡಹೆಂಡತಿಯರ ಸೇರುವಿಕೆ ವಿಷಯ ಹೇಳಿದರೇ ಅದು ದಂಪತಿಗಳ ಶಾರೀರಕ ಸೇರುವಿಕೆ ಕೆಳಗೆ ಹೋಲಿಸಿಕೊಂಡಿದ್ದಾರೆ. ಹಾಗೆ ಅಂದುಕೊಳ್ಳುವ ಮುನ್ನ ಈ ವಿಷಯದಲ್ಲಿ ದೇವರಿಗೆ ಸಂಬಂಧವಿಲ್ಲ ಅಲ್ಲವೇ! ದೇವರು ಹೇಳುವುದು ಜ್ಞಾನವಿಷಯವಲ್ಲವೆ! ಕರ್ಮಕ್ಕೆ ಸಂಬಂಧಿಸಿರುವ ಪ್ರಪಂಚ ವಿಷಯವು ಯಾಕೆ ಹೇಳುತ್ತಾನೆ? ಎಂದು ಸ್ವಲ್ಪವಾದರೂ ಆಲೋಚಿಸಲಾರದೆ ಹೋಗಿದ್ದಾರೆ. ಮನುಷ್ಯನಿಗೆ ಐದು ಜ್ಞಾನೇಂದ್ರಿಯಗಳ ಮೂಲಕ ಕಷ್ಟಗಳು ಸುಖಗಳು ಶರೀರದಲ್ಲಿನ ಜೀವಿಗೆ ಸೇರುತ್ತಿರುತ್ತವೆ. ಆಹಾರ ವಿಷಯಕ್ಕೆ ಬಂದರೇ ಅವನು ಮಾಡಿಕೊಂಡಿರುವ ಕರ್ಮವನ್ನು ಅನುಸರಿಸಿ ಅವನಿಗೆ ಯಾವ ಆಹಾರ ಸಿಗಬೇಕೋ ಅದು ನಿರ್ಣಯದ ಮೊದಲೇ ನಡೆದುಹೋಗಿರುತ್ತದೆ. ಯಾವುದನ್ನು ಯಾವಾಗ ತಿನ್ನಬೇಕೆಂದು ಬರೆದಿಟ್ಟಿದ್ದರೇ ಅದು ಆಗಲೇ ಲಭ್ಯವಾಗುತ್ತದೆ. ಸುಖ ದುಃಖಗಳನ್ನು ಐದು ಜ್ಞಾನೇಂದ್ರಿಯಗಳ ಮೂಲಕ ಮನುಷ್ಯ ಅನುಭವಿಸುವುದು ನಡೆಯುತ್ತಿರುವ ಸತ್ಯ. ನಾಲಿಗೆ ಮೂಲಕ ರುಚಿ ಎನ್ನುವ ಸುಖವನ್ನು ಅನುಭವಿಸಬೇಕಾಗಿರುತ್ತದೆ. ಮನುಷ್ಯ ಯಾವ ಮತಸ್ಥನಾದರೂ ಅದು ಮೇಲಿನ ವಿಷಯವೇ ಹೊರತು ಒಳಗೆ ಮಾತ್ರ ಎಲ್ಲರಿಗೂ ಎಲ್ಲ ಮತದವರಿಗೂ ಒಂದೇ ವಿಧಾನವಿದೆ. ಒಂದೇ ನಾಲಿಗೆ ಮೂಲಕ ಮನುಷ್ಯ **ರುಚಿ** ಎನ್ನುವ ಸುಖವನ್ನೋ ಕಷ್ಟವನ್ನೋ ಅನುಭವಿಸಬೇಕಾಗಿರುತ್ತದೆ. ಮನುಷ್ಯನ ಆಹಾರ ನಾಲಿಗೆಗೆ ಸಂಬಂಧಿಸಿರುವುದು. ಅಂದರೇ ಶರೀರ ಇಂದ್ರಿಯ ಸಂಬಂಧವಾದುದು. ಹಾಗೆಯೇ ಗಂಡಹೆಂಡತಿ ಶರೀರ ಸೇರುವಿಕೆಗೆ ಸಂಬಂಧಿಸಿದ ವಿಷಯ, ಐದು ಜ್ಞಾನೇಂದ್ರಿಯಗಳಲ್ಲಿ ಚರ್ಮಕ್ಕೆ ಸಂಬಂಧಿಸಿರುತ್ತದೆ. ಇಲ್ಲಿ ಮುಸ್ಲಿಮ್‌ರಿಗೆಂದು, ಹಿಂದೂವಿಗೆಂದು, ಕ್ರೈಸ್ತರಿಗೆಂದು ಬೇರೆಬೇರೆ ವಿಧಾನವಿರುವುದಿಲ್ಲ. ಶರೀರ ವಿರುವವರಿಗೆಲ್ಲರಿಗೂ ಒಂದೇ ವಿಧಾನವಿರುತ್ತದೆ. ಶರೀರದಲ್ಲಿ ಐದು ಜ್ಞಾನೇಂದ್ರಿಯಗಳು ಕ್ರಮವಾಗಿ ಹೀಗಿವೆ. 1) ಕಣ್ಣು, 2) ಮೂಗು, 3) ನಾಲಿಗೆ,

4) ಕಿವಿ, 5) ಚರ್ಮ. ಈ ಐದು ಪ್ರಪಂಚ ಸುಖ ದುಃಖಗಳಿಗೆ ದ್ವಾರಗಳಂಥವು. ಇವುಗಳಿಂದ ಶರೀರದಲ್ಲಿನ ಜೀವಿಗೆ ಕಷ್ಟಸುಖಗಳು ಸೇರುತ್ತಿರುತ್ತವೆ. ಆಹಾರ ಸುಖವು **ನಾಲಿಗೆ** ಮೂಲಕ ಒಳಗಿನ ಜೀವಿಗೆ ಸೇರಿದರೇ, ಗಂಡಹೆಂಡತಿಯರ ಸೇರುವಿಕೆ ಸುಖವು **ಚರ್ಮ** ಎನ್ನುವ ಜ್ಞಾನೇಂದ್ರಿಯ ಮೂಲಕ ಸೇರುತ್ತದೆ. ಈ ಐದು ಅವಯವ ಸುಖದುಃಖಗಳು ಮನುಷ್ಯ ಮಾಡಿಕೊಂಡಿರುವ ಕರ್ಮವನ್ನು ಅನುಸರಿಸಿ ಇರುತ್ತದೆ. ಈ ವಿಷಯಗಳನ್ನು ದೇವರು ಮನುಷ್ಯನನ್ನು ಜನ್ಮಕ್ಕೆ ಕಳುಹಿಸಿದಾಗಲೇ ತನ್ನ ತೀರ್ಪಿನಲ್ಲಿ ಕರ್ಮಪತ್ರವಾಗಿ ಬರೆದು ಕಳು ಹಿಸಿರುತ್ತಾನೆ. ಕರ್ಮಪತ್ರದಲ್ಲಿ ಮೊದಲೇ ಬರೆದಿರುವುದರ ಪ್ರಕಾರವೇ ಆಹಾರವಾಗಲೀ, ಗಂಡಹೆಂಡತಿಯರು ಇರುವುದಾಗಲೀ ನಡೆಯುತ್ತಿರುತ್ತದೆ. ಮಧ್ಯದಲ್ಲಿ ದೇವರು ಇವುಗಳ ಜೋಕ್ಯ ಮಾಡಿಕೊಳ್ಳುವುದಿಲ್ಲ. ಜೀವಿಯ ಕರ್ಮವನ್ನು ಅನುಸರಿಸಿ ಆತ್ಮ ಅವನನ್ನು ನಡೆಸುತ್ತಿರುವಾಗ, ಅಲ್ಲಾಹ್ (ದೇವರು) ಸಾಕ್ಷಿಯಾಗಿ ನೋಡುತ್ತಾ ಇರುತ್ತಾನೆ. ಇದೇ ವಿಷಯವೇ ಸೂರಾ 50, ಆಯತ್ 21 (50–21) ರಲ್ಲಿ ಹೇಳುವುದಾಗಿದೆ. ಅಲ್ಲಿ ಹೇಳಿರುವ ವಾಕ್ಯವನ್ನು ಮನುಷ್ಯರು ಮರೆಯಬಾರದು.

ಸುಖದುಃಖಗಳಿಗೆ ಅತೀತವಾದುದು ನಿದ್ದೆ. ದೇವರು ಮನುಷ್ಯನಿಗೆ ಕಷ್ಟ ಸುಖಗಳನ್ನು ಕರ್ಮಬದ್ಧ ಮಾಡಿದ್ದಾನೆ ಆದರೇ ನಿದ್ದೆಯನ್ನು ಕರ್ಮಕ್ಕೆ ಅತೀತ ಮಾಡಿದ್ದಾನೆ. ಆದ್ದರಿಂದ ನಿದ್ದೆಯಲ್ಲಿ ಸುಖವಿರುವುದಿಲ್ಲ, ಕಷ್ಟ ಇರುವುದಿಲ್ಲ. ಸುಖದುಃಖ ಕರ್ಮಗಳು ಜಾರಿಯಾಗದಿರುವಾಗ ಮನುಷ್ಯ ನಿದ್ದೆಯೊಳಗೆ ಹೋಗುತ್ತಾನೆ. ಮನುಷ್ಯ ಹಗಲು ಎಚ್ಚರದಲ್ಲಿದ್ದು ಕರ್ಮಗಳು ಆಚರಿಸುವಂತೆ, ರಾತ್ರಿಹೊತ್ತು ಕರ್ಮಗಳಿಗೆ ಅತೀತವಾಗಿ ನಿದ್ದೆಹೋಗುವಂತೆ ದೇವರು ನಿರ್ಣಯಿಸಿದ್ದಾರೆ. ನಿದ್ದೆಯಲ್ಲಿ ಶರೀರ ಎನ್ನುವ ಪ್ರಕೃತಿ (ಸ್ತ್ರೀ), ಪುರುಷನು ಎನ್ನುವ ಆತ್ಮ ಎರಡು ಏಕವಾಗಿಹೋಗುತ್ತವೆ. ಆಗ ಪುರುಷನಾಗಿರುವ ಆತ್ಮವಾಗಲೀ, ಪ್ರಕೃತಿ (ಸ್ತ್ರೀ) ಯಾಗಿರುವ ಶರೀರವಾಗಲೀ ಬೇರೆಬೇರೆಯಾಗಿಲ್ಲದೇ ಒಂದಾಗಿರುತ್ತದೆ. ಅದನ್ನೇ 'ಸ್ತ್ರೀ ಪುರುಷರ ಸೇರುವಿಕೆ' ಎಂದು ಅನ್ನುತ್ತಾರೆ.

ಶರೀರದಲ್ಲಿ ನಿವಾಸಿಸುವ ಆತ್ಮ ಶರೀರದೊಂದಿಗೆ ಬೆರೆತುಹೋದಾಗ ನಿದ್ದೆಯಾಗುವುದು. ಹಾಗೆಯೇ ಶರೀರವೇ ಆತ್ಮದಲ್ಲಿ ಬೆರೆತಾಗ ಕೂಡಾ ನಿದ್ದೆಯೇ ಆಗುವುದು. ಆದ್ದರಿಂದ ಆತ್ಮ ಶರೀರವನ್ನು ಬೆರೆಯಬಹುದು. ಶರೀರವು ಆತ್ಮನು ಬೆರೆಯಬಹುದು. ಇಲ್ಲಿ ನಿಮಗೆ ಅರ್ಥವಾಗುವುದಕ್ಕೆ ಶರೀರವನ್ನು ಪ್ರಕೃತಿಯೆಂದು, ಆತ್ಮನನ್ನು ಪುರುಷನೆಂದು ಹೇಳಿರುವುದಾಗಿದೆ. ಭಗವದ್ಗೀತೆ ಗ್ರಂಥದಲ್ಲಿ ಪ್ರಕೃತಿಯಿಂದ ತಯಾರಾದ ಶರೀರವನ್ನು ಸ್ತ್ರೀ ಅಂಶವೆಂದು, ಆತ್ಮವನ್ನು, ಜೀವಾತ್ಮನನ್ನು, ಪರಮಾತ್ಮನನ್ನು ಮೂವರು ಪುರುಷರೆಂದು ಹೇಳಿರುವುದಾಗಿದೆ. ಆತ್ಮ ಪುರುಷನೆಂದು ಹೇಳುತ್ತಾ ಆತ್ಮ, ಶರೀರವು ಬೆರೆತಾಗ ನಿದ್ದೆಯಾಗುವುದು. ಆಗ ಶರೀರದಲ್ಲಿ ಸುಖದುಃಖಗಳನ್ನು ಜೀವಿಯು ಅನುಭವಿಸುತ್ತಿಲ್ಲ.

ಸೂರಾ ಎರಡು ಆಯತ್ 187ರಲ್ಲಿ ಪ್ರಕೃತಿ ಆತ್ಮದಲ್ಲಿ ಬೆರೆಯಬಹುದು. ಆತ್ಮ ಪ್ರಕೃತಿಯಲ್ಲಿ ಬೆರೆಯಬಹುದು ಎನ್ನುವ ವಿಷಯವನ್ನು 'ನಿಮಗೆ ನಿಮ್ಮ ಹೆಂಡತಿಯರು ವಸ್ತ್ರಗಳು, ನಿಮ್ಮ ಹೆಂಡತಿಯರಿಗೆ ನೀವು ವಸ್ತ್ರಗಳು' ಎಂದು ಹೇಳಿದ್ದಾರೆ. ಹೆಂಡತಿ ಎಂದರೇ ಭರಿಸಲ್ಪಡುವುದು ಪ್ರಕೃತಿ ಎಂದೂ, ಗಂಡ ಎಂದರೇ ಭರಿಸುವವನು ಆತ್ಮಯೆಂದು ತಿಳಿಯಬೇಕು. ನಿದ್ದೆಯನ್ನು ಗಂಡಹೆಂಡತಿಯರ ಸೇರುವಿಕೆಯಾಗಿ ನೋಡಬೇಕು. ಮನುಷ್ಯ ರಾತ್ರಿ ಮಲಗಿಕೊಂಡು ನಿದ್ದೆ ಹೋಗುವುದಕ್ಕೆ ಶರೀರದಲ್ಲಿ ದೇವರು ನಿರ್ಣಯಿಸಿದ್ದಾನೆ. ಅದನ್ನೇ 'ಧರ್ಮಸಮ್ಮತ ಮಾಡಲ್ಪಟ್ಟಿದೆ' ಎಂದು ಹೇಳಿದ್ದಾನೆ. ರಾತ್ರಿ ಹೊತ್ತು ನಿದ್ದೆ ಹೋಗುವುದು ಧರ್ಮಸಮ್ಮತ. ಆದ್ದರಿಂದ ರಾತ್ರಿ ಹೊತ್ತು ನಿದ್ದೆ ಹೋಗುವುದರಿಂದ ಪಾಪ ಬರುವುದಿಲ್ಲ. ಹಗಲು ಹೊತ್ತು ನಿದ್ದೆ ಅಧರ್ಮವು. ಹಗಲು ನಿದ್ದೆ ಧರ್ಮಸಮ್ಮತವಲ್ಲದ್ದು. ಹಗಲು ನಿದ್ದೆ ಹೋಗುವವರನ್ನು 'ನೀವು ರಹಸ್ಯವಾಗಿ ಆತ್ಮದ್ರೋಹಕ್ಕೆ ಭಾಗಿಯಾಗುತ್ತಿದ್ದೀರೆಂದು' ಹೇಳಿದ್ದಾನೆ. ಆದ್ದರಿಂದ ರಾತ್ರಿ ಹೊತ್ತು ನಿದ್ದೆಹೋಗುವುದು ಧರ್ಮ ಸಮ್ಮತಮಾಡಲಾಗಿದೆ. ಆದರೇ ಮುಂಜಾನೆಯ ಬಿಳುಪು ಕತ್ತಲೆಯಿಂದ ಕಾಣಿಸುವವರೆಗು ಅಂದರೇ, **ನಾಲಕ್ಕು ಗಂಟೆಗಳಿಂದ ಆರು ಗಂಟೆಗಳವರೆಗು** ಎರಡು ಗಂಟೆಗಳು ನಿಮಗಾಗಿ ದೇವರು

ತಿಳಿಸಿರುವ ಜ್ಞಾನವನ್ನು, ಬರೆದಿಟ್ಟಿರುವ ದೈವಗ್ರಂಥಗಳಲ್ಲಿ ಅನ್ವೇಷಿಸುವುದಕ್ಕೆ ಅನುಮತಿ ಇದೆ ಎಂದು ಹೇಳಿದ್ದಾನೆ. ಬೆಳಗಿನ ಜಾವದಲ್ಲಿ ಎರಡು ಗಂಟೆಗಳಕಾಲ ದೇವರ ಜ್ಞಾನವನ್ನು ಗ್ರಂಥಗಳಲ್ಲಿ ಹುಡುಕಿ ತಿಳಿದುಕೊಳ್ಳುವುದಕ್ಕೆ ದೇವರು ಅನುಮತಿ ಕೊಟ್ಟಿದ್ದಾನೆ. ಆದ್ದರಿಂದ ಆ ಸಮಯದಲ್ಲಿ ನಿದ್ದೆಯಿಂದ ಏಳುವುದು ಧರ್ಮಸಮ್ಮತ. ಉಳಿದ ರಾತ್ರಿ ಎಚ್ಚರದಿಂದಿರುವುದು ಹಗಲು ಮಾಡಬೇಕಾಗಿರುವ ಕೆಲಸಗಳನ್ನು ರಾತ್ರಿ ಮಾಡುವುದು ಅಧರ್ಮವಾಗುತ್ತದೆ. 'ಬೆಳಗಿನ ಜಾವದಲ್ಲಿ ಬೆಳ್ಳನೆಯ ಛಾಯೆಗಳು ಕಾಣಿಸುವವರೆಗು ತಿನ್ನಿರಿ, ಕುಡಿಯಿರಿ' ಎಂದು ಇದೆ ಅಲ್ಲವೇ! ಎಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ. ನಿಮಗಾಗಿ ಬರೆದಿಟ್ಟಿರುವುದನ್ನು ಅನ್ವೇಷಿಸಿರಿ ಎಂದು ಹೇಳಿ, ಆ ಕೆಲಸ ಮಾಡಬೇಕಾಗಿರುವುದು ಬೆಳಗಿನ ಜಾವದಲ್ಲಿ ಎಂದು ಹೇಳಿ ಆಗ ನಿಮಗೆ ಓದಲು ಬಂದರೇ ಓದಿರಿ. ಓದು ಬರದಿದ್ದರೇ ಇತರರ ಮೂಲಕ ಕೇಳಿರಿ ಎಂದು ಹೇಳಿದ್ದಾನೆ. **'ಓದಿರಿ, ಕೇಳಿರಿ'** ಎಂದು ಹೇಳುವ ಮಾತನ್ನು ಮರೆಯಲ್ಲಿ ತಿನ್ನಿರಿ, ಕುಡಿಯಿರಿ ಎಂದು ಹೇಳಿದ್ದಾರೆ. ದೈವಜ್ಞಾನವೆಲ್ಲ ಹಾಗೆಯೇ ಹೇಳಲ್ಪಡುತ್ತಾ ಇರುತ್ತದೆ. ಅದನ್ನು **ಬುದ್ಧಿ ಶ್ರದ್ಧೆ** ಇರುವವನು ತಿಳಿಯಬಲ್ಲನು ಎಂದು (3–7) ರಲ್ಲಿ ಹೇಳಿರುವುದಾಗಿದೆ. ಬೆಳಗಾದ ನಂತರ ಕೇಳುವುದು, ಓದುವುದು ಬಿಟ್ಟು ಅದನ್ನು ಆಚರಿಸುತ್ತಾ ಯೋಗವನ್ನು (ಉಪವಾಸವನ್ನು) ಮಾಡಬೇಕು. ಯೋಗ (ಉಪವಾಸ) ಎಂದರೇ ಜೀವಾತ್ಮ, ಆತ್ಮದೊಂದಿಗೆ ಬೆರೆತು ನಿವಾಸಿಸುವುದು ಎಂದು ಅರ್ಥ. ಆತ್ಮ, ಜೀವಾತ್ಮ ಕೂಡಿರುವುದನ್ನು 'ಯೋಗ' ಎಂದು ಅನ್ನುತ್ತೇವೆ, ಅದನ್ನೇ ವಾಕ್ಯದಲ್ಲಿ ಉಪವಾಸ ಎಂದು ಹೇಳಿದ್ದಾನೆ. **ಹಗಲು ಯೋಗ, ರಾತ್ರಿ ನಿದ್ದೆ, ಮುಂಜಾನೆಯಲ್ಲಿ ಜ್ಞಾನ ತಿಳಿಯುವುದು** ಮನುಷ್ಯನಿಗೆ ಧರ್ಮಸಮ್ಮತ ಮಾಡುವುದೆಂದು ಈ ವಾಕ್ಯದಲ್ಲಿ ತಿಳಿದಿದೆ. ದೇವರು ಹೇಳಿರುವ ವಿಷಯವನ್ನು ಸೂಕ್ಷ್ಮವಾಗಿಯೇ ಯೋಚಿಸಬೇಕು ಆದರೇ, ಸ್ಥೂಲವಾಗಿ ಯೋಚಿಸಿದರೇ ಅಲ್ಲಿ ಹೇಳಿರುವ ಜ್ಞಾನರಹಸ್ಯ ತಿಳಿಯದೇ ಹೋಗುತ್ತದೆ. ಕೆಲವರು ಹಿರಿಯರು ತಾವು ಹೇಳುವ ಜ್ಞಾನವನ್ನು ಸ್ಥೂಲವಾಗಿ ಹೇಳದೆ ಸೂಕ್ಷ್ಮವಾಗಿ ಹೇಳಿದ್ದಾರೆ.

ಉದಾಹರಣೆಗೆ ಕಾಲ ಜ್ಞಾನವನ್ನು (ಭವಿಷ್ಯತ್ತನ್ನು) ಬರೆದಿರುವ ಪೋತುಲೂರಿ ವೀರಬ್ರಹ್ಮಯ್ಯನವರು ತಾನು ಹೇಳುವ ಜ್ಞಾನ ವಿಷಯವನ್ನು ಹೇಗೆ ಸೂಕ್ಷ್ಮ ಜ್ಞಾನವಾಗಿ ಹೇಳಿದ್ದಾನೋ, ಆತನು ಹೇಳಿರುವ ಪದಗಳು, ವಾಕ್ಯಗಳು ಜ್ಞಾನವೇ ಆದರೂ ಹೇಗೆ ಅರ್ಥವಾಗದೇ ಇದೆಯೋ ಒಂದುಬಾರಿ ನೋಡಿರಿ.

**ಆಹಾ! ಬ್ರಹ್ಮಾಂಡವಾದುದು ಆದಿ ಮಂತ್ರವು ನಮ್ಮ ಬ್ರಹ್ಮಯ್ಯನವರು ಹೇಳಿರುವುದು ದೊಡ್ಡ ಮಂತ್ರ.**

1) **ರೆಕ್ಕ ಮುಕ್ಕು ಲೇನಿ ಪಕ್ಷಿ ರೇಯಿ ಪಗಲು ತಪಸ್ಸು ಚೇಸಿ ಒಕ್ಕ ಚೆರುವು ಚೇಪಲನ್ನೀ ಒಕ್ಕಟೇ ಮ್ರಿಂಗೆನು. "ಆಹಾ"**

2) **ಇಂಟಿ ವೆನುಕ ತುಟ್ಟೆ ಪುರುಗು ಇಂಟಿಲೋನಿ ಅಂದರಿಸಿ ಮ್ರಿಂಗೆ, ಚೂಡವಚ್ಚಿನ ಜನುಲನೆಲ್ಲ ಚೂಚಿ ಮ್ರಿಂಗೆನು. "ಆಹಾ"**

3) **ಕಾಳ್ಳು ಚೇತುಲು ಲೇನಿವಾಡು ಕಡುವ ಮುಂತ ಚೇತಪಟ್ಟಿ ನಿಂಡು ಬಾವಿ ನೀಳ್ಳನ್ನೀ ಒಕ್ಕಡೇ ಮುಂಚೆನು. "ಆಹಾ"**

4) **ಏಟಿಮೀದ ಸ್ವಾತಿ ಕೊಂಗ ವೇಟಲಾಡುಚು ರಾಗ ಚಾಟುನುನ್ನ ಮೀನುಪಿಲ್ಲ ಅಟ್ಲೇ ಮ್ರಿಂಗೆನು. "ಆಹಾ"**

5) **ಚೆಪ್ಪಿನಾಡು ವೀರದಾಸು ಚೋದ್ಯಮುಗಾನು ಆತ್ಮ ತತ್ತ್ವಮು, ಗೊಪ್ಪವಾರು ದೀನಿ ಭಾವಮು ವಿಪ್ಪಿ ಚೆಪ್ಪಿತೇ ಚಾಲು. "ಆಹಾ"**

**ಇದರ ಅರ್ಥವೇನೆಂದರೇ :–** ಮಹತ್ತರವಾದ ಮಂತ್ರ ಬ್ರಹ್ಮಯ್ಯನವರು ಹೇಳಿರುವುದು. ಆ ಮಂತ್ರವು ನಮ್ಮ ಶ್ವಾಸವೇ. ಶ್ವಾಸ ಒಳಗೆ ಪ್ರವೇಶಿಸಿದಾಗ **"ಸೋ"** ಎನ್ನುವ ಶಬ್ಧದಿಂದ, ಹೊರಗೆ ಬರುವಾಗ **"ಹಂ"** ಎನ್ನುವ ಶಬ್ಧದಿಂದ ಚಲಿಸುತ್ತಿದೆ. ಈ ಎರಡು ಶಬ್ದಗಳು ಸೇರಿ **"ಸೋಹಂ"** ಎನ್ನುವ ಶಬ್ದವು ಏರ್ಪಟ್ಟಿದೆ. ಈ ಶಬ್ದವು ಮಹಿಮೆ ಇರುವುದು ಆದ್ದರಿಂದ ಇದನ್ನು ಮಂತ್ರವೆಂದು

ಹೇಳಿದ್ದಾನೆ. ಮತ್ತು ಅಕ್ಷರ ಸಮ್ಮೇಳನಗಳಿಂದ ಕೂಡಿಕೊಂಡಿರುವುದು ಆದ್ದರಿಂದ ಮಂತ್ರವೆಂದು ಹೇಳಲ್ಪಟ್ಟಿದೆ. **"ಸೋಹಂ"** ಎನ್ನುವ ಮಂತ್ರವು ಆದಿ ಮಂತ್ರವಾಗಿ ಬದಲಾಗುತ್ತಿದೆ. ಅದು ಹೇಗಿದೆ ಎಂದರೇ! **"ಸೋ"** ಎನ್ನುವ ಶಬ್ಧದಲ್ಲಿ ಕೊನೆಯದಾಗಿ **"ಓ"** ಎನ್ನುವ ಶಬ್ದವಿದೆ. "ಹಂ" ಎನ್ನುವ ಶಬ್ಧದಲ್ಲಿ ಕೊನೆಯದಾಗಿ **"ಮ್"** ಎನ್ನುವ ಶಬ್ದವಿದೆ. ಒಂದುಬಾರಿ ಶ್ವಾಸ ಒಳಗೆ ಹೋಗಿ ಹೊರಗೆ ಬಂದರೆ "ಸೋಹಂ" ಎನ್ನುವ ಮಂತ್ರ ಏರ್ಪಡುತ್ತಿದೆ. ಆ ಸೋಹಂ ಮಂತ್ರದಲ್ಲೇ **"ಓಮ್"** ಎನ್ನುವ ಶಬ್ದವು ಒಳಗೊಂಡಿದೆ. ಆದಕಾರಣ "ಸೋಹಂ" ತಾಯಿ, "ಓಮ್" ಶಿಶುವು. "ಓಂ" ಪ್ರಪಂಚ ಹುಟ್ಟುವಿಕೆಯಲ್ಲಿ ಮೊದಲು ಹುಟ್ಟಿರುವ ಶಬ್ದವಾದ್ದರಿಂದ ಇದನ್ನು ಆದಿ ಮಂತ್ರ ಎನ್ನುವುದು ಸಂಭವಿಸಿದೆ.

1) **ರೆಕ್ಕ ಮುಕ್ಕು ಲೇನಿ ಪಕ್ಷಿ ರೇಯಿ ಪಗಲು ತಪಸ್ಸು ಚೇಸಿ ಒಕ್ಕ ಚೆರುವು ಚೇಪಲನ್ನೀ ಒಕ್ಕಟೇ ಮ್ರಿಂಗೆನು.**

**ವಿವರ :–** ಮೂಗಿನ ಹೊಳ್ಳೆಗಳಿಂದ ಪ್ರವೇಶಿಸುವ ಶ್ವಾಶಕ್ಕೆ ಆಕಾರವಿಲ್ಲ. ಆದ್ದರಿಂದ 'ರೆಕ್ಕೆ ಮೂಗು ಇಲ್ಲದ ಪಕ್ಷಿ' ಎಂದು ಹೇಳಿದ್ದಾರೆ. ಶ್ವಾಸವು ರಾತ್ರಿ ಹಗಲು ಬಿಡದೆ ಸೋಹಂ ಎನ್ನುವ ಮಂತ್ರವನ್ನು ಜಪಿಸುತ್ತಿದೆ. ಆದ್ದರಿಂದ 'ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿದೆ' ಎಂದು ಹೇಳಿದ್ದಾರೆ. ಈ ಶ್ವಾಸವೇ ಶರೀರದೊಳಗೆ ಪ್ರವೇಶಿಸಿ ಕುಂಭಕದ ಮೂಲಕ ನಿಂತು ಶರೀರದಲ್ಲಿರುವ ಕದಲಿಕೆಗಳನ್ನು (ಚೈತನ್ಯಗಳ) ಎಲ್ಲವನ್ನು ನಿಲ್ಲಿಸಿ ಹಾಕುತ್ತಿದೆ. ಆದಕಾರಣ 'ಕೆರೆಯಲ್ಲಿ ಅನೇಕ ವಿಧಗಳಾಗಿ ಚಲಿಸುವ ಮೀನುಗಳೆಲ್ಲವನ್ನು ನುಂಗಿತು' ಎಂದು ಹೇಳಿದ್ದಾರೆ.

2) **ಇಂಟಿ ವೆನುಕ ತುಟ್ಟೆ ಪುರುಗು ಇಂಟಿಲೋನಿ ಅಂದರಿಸಿ ಮ್ರಿಂಗೆ, ಚೂಡವಚ್ಚಿನ ಜನುಲನೆಲ್ಲ ಚೂಚಿ ಮ್ರಿಂಗೆನು.**

**ವಿವರ :–** ಶ್ವಾಸ ಎಲ್ಲವೇಳೆಯಲ್ಲಿ "ಸೋಹಂ" ಎನ್ನುವ ಶಬ್ದ ಮಾಡುತ್ತಿದೆ. ಆದ್ದರಿಂದ 'ಗೀ' ಎಂದು ಅರಚುವ ಜೇರುಂಡ ಹುಳವಾಗಿ ಹೇಳಿದ್ದಾರೆ. ಶ್ವಾಸಕ್ಕೆ ಆಧಾರ ಶರೀರದಲ್ಲಿ ಕಾಣದೆ ಇರುವ ಬ್ರಹ್ಮನಾಡಿಯಲ್ಲಿನ ಚೈತನ್ಯ.

ಆದ್ದರಿಂದ 'ಮನೆಯ ಹಿಂದೆ ಜೇರುಂಡೆ' ಎಂದು ಹೇಳಿದ್ದಾರೆ. ಮನೆ ಎಂದರೇ ಶರೀರ. ಶ್ವಾಸ ಕುಂಭಕದ ಮೂಲಕ ಶರೀರದಲ್ಲಿರುವ ವ್ಯಾನ, ಸಮಾನ, ಉದಾನ, ಪ್ರಾಣ, ಅಪಾನ ವಾಯುವುಗಳೆಲ್ಲವೂ ಬಂಧಿಸಲ್ಪಪಡುತ್ತಿವೆ. ಆದ್ದರಿಂದ 'ಮನೆಯಲ್ಲಿನವರೆಲ್ಲರನ್ನು ನುಂಗಿತು' ಎಂದು ಹೇಳಿದ್ದಾರೆ. ಶ್ವಾಸ ಕುಂಭಿಸಿದ ನಂತರ ಶ್ವಾಶ ಕೋಶಗಳು ಖಾಲೀ ಇರುವುದರಿಂದ ಎರಡು ಇಲ್ಲವೇ ಮೂರುಬಾರಿ ಸ್ವಲ್ಪಸ್ವಲ್ಪವಾಗಿ ಹೊರಗಿನ ಗಾಳಿ ಒಳಗೆ ಪ್ರವೇಶಿಸಿ, ಪ್ರವೇಶಿಸಿದ ಗಾಳಿ ಪುನಃ ಹೊರಗೆ ಬಾರದೆ ನಿಲ್ಲುವುದರಿಂದ 'ನೋಡಬಂದ ಜನರನ್ನೆಲ್ಲ ನೋಡಿ ನುಂಗಿತು' ಎಂದು ಹೇಳಿದ್ದಾರೆ.

3) **ಕಾಳ್ಳು ಚೇತುಲು ಲೇನಿವಾಡು ಕಡುವ ಮುಂತ ಚೇತಪಟ್ಟಿ ನಿಂಡು ಬಾವಿ ನೀಳ್ಳನ್ನೀ ಒಕ್ಕಡೇ ಮುಂಚೆನು**.

**ವಿವರ :–** ಶ್ವಾಸಕ್ಕೆ ರೂಪವಿಲ್ಲ ಆದ್ದರಿಂದ 'ಕಾಲು ಕೈಗಳು ಇಲ್ಲದವನೆಂದು' ಹೇಳಿದ್ದಾರೆ. ಶ್ವಾಸ ಮೂಗಿನ ರಂಧ್ರಗಳಲ್ಲಿ ಒಂದರಲ್ಲಿ ಹೆಚ್ಚು ಒಂದರಲ್ಲಿ ಕಡಿಮೆ ಒಳಗೆ ಹೊರಗೆ ಚಲಿಸುತ್ತಿದೆ, ಹೆಚ್ಚಿನ ಶ್ವಾಸವನ್ನು ಕೊಡ ಎಂದು, ಕಡಿಮೆ ಶ್ವಾಸವನ್ನು ಕುಡಿಕೆಗೆ ಹೋಲಿಸಿ ಹೇಳಿದ್ದಾರೆ. ಆದ್ದರಿಂದ 'ಕೊಡ ಕುಡಿಕೆ ಕೈಯಲ್ಲಿಹಿಡಿದು' ಎಂದು ಹೇಳಿದ್ದಾರೆ. ಶರೀರದಲ್ಲಿನ ಆಲೋಚನೆಗಳೆಲ್ಲ ಶ್ವಾಸ ಒಂದನ್ನು ನಿಲ್ಲಿಸಿರುವುದರಿಂದ ನಿಂತು ಹೋಗುತ್ತಿವೆ. ಆದ್ದರಿಂದ 'ಬಾವಿ ನೀರೆಲ್ಲಾ ಒಬ್ಬನೇ ತುಂಬಿದ್ದಾನೆ' ಎಂದು ಹೇಳಿರುವುದಾಗಿದೆ. ಶರೀರವನ್ನು ಬಾವಿಯಾಗಿ ಹೋಲಿಸಲಾಗಿದೆ.

4) **ಏಟಿಮೀದ ಸ್ವಾತಿ ಕೊಂಗ ವೇಟಲಾಡುಚು ರಾಗ ಚಾಟುನುನ್ನ ಮೀನುಪಿಲ್ಲ ಅಟ್ಲೇ ಮ್ರಿಂಗೆನು**.

**ವಿವರ :–** ಶ್ವಾಸ ಶರೀರದಲ್ಲಿ ನಿಂತುಹೋಗಿರುವುದರಿಂದ ಶ್ವಾಸ ಕೋಶಗಳು ನಂತರ ನರಗಳು, ಆ ನಂತರ ಸೂರ್ಯಚಂದ್ರ ನಾಡಿಗಳು, ಷಟ್ ಚಕ್ರಗಳು ಒಂದರ ನಂತರ ಒಂದು ತಮ್ಮತಮ್ಮ ಚೈತನ್ಯವನ್ನು ಕಳೆದುಕೊಳ್ಳುತ್ತಿವೆ. ಆದ್ದರಿಂದ

'ಕೆರೆಯ ಮೇಲೆ ಬೆಳ್ಳಕ್ಕಿ ಬೇಟೆಯಾಡುತ್ತಾ ಬಂದಾಗ' ಎಂದು ಹೇಳಿರುವುದಾಗಿದೆ. ಒಂದರ ನಂತರ ಒಂದು ತಮ್ಮ ಚೈತನ್ಯಗಳನ್ನು ಕಳೆದುಕೊಂಡರೂ, ಕೊನೆಯಲ್ಲಿರುವ ಏಳನೆಯ ಕೇಂದ್ರವು ಶ್ವಾಸ ನಿರೋಧದಿಂದ ತನ್ನ ಶಕ್ತಿಯನ್ನು ಕಳೆದುಕೊಳ್ಳದೆ ನಿಂತಿರುವುದರಿಂದ, ಎಲ್ಲವುಗಳ ಚೈತನ್ಯಗಳನ್ನು ನಿಲ್ಲಿಸಿರುವ ಶ್ವಾಸ ಏಳನೆಯ ಕೇಂದ್ರದ ಬಳಿಗೆ ಬಂದು ತನ್ನ ಶಕ್ತಿ ಸಾಲದೆ ನಿಂತುಹೋಗಿರುವುದರಿಂದ, 'ಮರೆಯಲ್ಲಿರುವ ಮೀನಿನ ಮರಿ ಬೆಳ್ಳಕ್ಕಿಯನ್ನು ನುಂಗಿತು' ಎಂದು ಹೇಳಿರುವುದಾಗಿದೆ. ಇಂತಹ ತತ್ವಗಳು ಪ್ರಾಣಾಯಾಮವನ್ನು ಕುರಿತು ಎಷ್ಟನ್ನೋ ಹಿರಿಯರು ಹೇಳಿದ್ದಾರೆ. ಆದರೇ ಇಂದಿನ ಪ್ರಜೆಗಳು ಅವುಗಳಿಗೆ ಸರಿಯಾದ ಅರ್ಥ ತಿಳಿದುಕೊಳ್ಳಲಾರದೆ ಜನ್ಮವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ.

ಇಂತಹ ಸೂಕ್ಷ್ಮಜ್ಞಾನವನ್ನೇ **ವೇಮನಯೋಗಿ** ತನ್ನ ಪದ್ಯಗಳಲ್ಲಿ ಹೇಗೆ ಅರ್ಥವಾಗದೇ ಬರೆದಿದ್ದಾನೋ ನೋಡಿರಿ. ಇವರು ದೇವರು ಅನುಸರಿಸಿರುವ ಮಾರ್ಗವನ್ನೇ ಅನುಸರಿಸಿ ದೇವರು ಹೇಳಿರುವ ಹಾಗೆಯೇ ತಾವು ಹೇಳುವ ಜ್ಞಾನವನ್ನು ಸೂಕ್ಷ್ಮವಾಗಿ ಹೇಳಿದ್ದಾರೆ. ಒಂದು ಸಲ ವೇಮನಯೋಗಿ ಪದ್ಯ ಒಂದನ್ನು ನೋಡೋಣ.

**ಇನುಮುನ ಜೇಸಿನ ಮೈನಪು ಕಡ್ಡಿ**
**ಮುಂಟ ಮೊನನು ನರ್ರಾವುಲ ದೊಡ್ಡಿ**
**ಕೂರ್ಚುಂಡಿ ಮೇಪಿನ ಕುಂದನಪು ಗಡ್ಡಿ**
**ವಿಪ್ಪಿ ಚೆಪ್ಪರಾ ವೇಮಾರೆಡ್ಡಿ**

**ಭಾವಾರ್ಥ :-** ನಮ್ಮ ಶರೀರದಲ್ಲಿನ ಮನಸ್ಸು ಎಲ್ಲ ಭಾಗಗಳಿಗಿಂತಲೂ ಮುಖ್ಯವಾದುದು. ಮನಸ್ಸು ಚಲಿಸದೆ ನಿಂತುಹೋದವನಿಗೆ **ಆತ್ಮದರ್ಶನ** ಸುಲಭವಾಗಿ ಆಗುತ್ತದೆ. ವಶವಾದ ಮನಸ್ಸು ಆತ್ಮ ದರ್ಶನಕ್ಕೆ ಕಾರಣವಾಗುತ್ತಿದೆ. ಆದ್ದರಿಂದ ಅದು ಮಿತ್ರನೊಂದಿಗೆ ಸಮಾನವಾಗಿ ಹೇಳಲ್ಪಡುತ್ತಿದೆ. ವಶವಾಗದೆ ಚಲಿಸುತ್ತ ಪ್ರಪಂಚ ವಿಷಯಗಳನ್ನೇ ಪ್ರೇರಣೆ ಮಾಡುತ್ತಾ ಆತ್ಮದರ್ಶನಕ್ಕೆ

ಆತಂಕಪಡಿಸುವ ಮನಸ್ಸನ್ನು ಶತ್ರುವಾಗಿ ಹೇಳಲ್ಪಡುತ್ತಿದೆ. ಒಂದು ಮನಸ್ಸೇ ಚಲಿಸಿದಾಗ ಶತ್ರುವಾಗಿ, ಚಲಿಸದೆ ನಿಂತುಹೊದಾಗ ಕಡೆ ಮಿತ್ರನಾಗಿ ಇದೆ. ಆದ್ದರಿಂದ ಮನಸ್ಸನ್ನು ಒಂದೇ ಕಡ್ಡಿಯಾಗಿ ಹೋಲಿಸಿ ಆ ಕಡ್ಡಿ ಕಬ್ಬಿಣವಾಗಿ, ಮೇಣವಾಗಿ ಎರಡು ವಿಧಗಳಾಗಿ ಇದೆಯೆಂದು ವೇಮನ ತಿಳಿಸುತ್ತಿದ್ದಾನೆ. ಚಲಿಸುವ ಮನಸ್ಸು ಮೇಣದ ಕಡ್ಡಿಯೊಂದಿಗೆ ಸಮಾನ, ಇಷ್ಟಬಂದಹಾಗೆ ಬಾಗುತ್ತದೆ. ಚಲಿಸದೆ ಏಕಾಗ್ರತೆಯಾಗಿ ನಿಂತ ಮನಸ್ಸು ಕಬ್ಬಿಣದ ಕಡ್ಡಿಗೆ ಸಮಾನ. ಅದು ಪಕ್ಕಕ್ಕೆ ಬಾಗದೆ ಭದ್ರವಾಗಿ ನಿಂತಿರುತ್ತದೆ.

ಹೊರಗಿರುವ ಜ್ಞಾನೇಂದ್ರಿಯಗಳ ಮೂಲಕ ಬರುವ ವಿಷಯಗಳು ಎಲ್ಲವೂ ಮೊದಲು ಮನಸ್ಸಿಗೆ ಸೇರುತ್ತವೆ. ಹಾಗೆ ಸೇರಿದ ವಿಷಯಗಳನ್ನು ಮನಸ್ಸು ಗ್ರಹಿಸಿ ಆ ವಿಷಯಗಳನ್ನು ಒಳಗಿರುವ ಬುದ್ಧಿ, ಚಿತ್ತ, ಜೀವಿಗೆ ತಿಳಿಸುವುದು. ಬುದ್ಧಿ, ಚಿತ್ತ ಹೇಳಿರುವ ಮರುತ್ತರಗಳನ್ನು ಮನಸ್ಸು ಗ್ರಹಿಸಿ ಹೊರಗಿರುವ ಕರ್ಮೇಂದ್ರಿಯಗಳಿಗೆ, ಬಾಹ್ಯೇಂದ್ರಿಯಗಳಿಗೆ ಮನಸ್ಸು ಮಧ್ಯವರ್ತಿಯಾಗಿ ಇದೆ. ಮನಸ್ಸು ಬ್ರಹ್ಮನಾಡಿ ಕುಂಡಲೀ ಶಕ್ತಿ ಪ್ರಾರಂಭವಾಗುವ ಭ್ರೂಮಧ್ಯ ಸ್ಥಾನಕ್ಕೆ ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳ ಮೇಲೆ ಇದೆ. ಆದ್ದರಿಂದ 'ಮನೆಯಹಿತ್ತಲು' ಎಂದು ಹೇಳಿದ್ದಾರೆ. ಎಲ್ಲ ವಿಷಯಗಳು ನರಗಳ ಮೂಲಕ ಮನಸ್ಸಿಗೆ ಸೇರುತ್ತಿವೆ. ಆದ್ದರಿಂದ ವಿಷಯಗಳನ್ನು ಹಸುಗಳಾಗಿ ಹೋಲಿಸಿ ಅವು ಎಲ್ಲವೂ ಸೇರುವ ಸ್ಥಳವಾದ ಮನಸ್ಸನ್ನು 'ಹಿತ್ತಲಿ'ಗೆ ಹೋಲಿಸಿದ್ದಾರೆ.

ಮನಸ್ಸು ಹೊರಗಿನ ವಿಷಯಗಳನ್ನು ಶೇಕರಿಸಿ ಒಳಕ್ಕೆ, ಒಳಗಿನ ವಿಷಯಗಳನ್ನು ಶೇಕರಿಸಿ ಹೊರಕ್ಕೆ ಕಳುಹಿಸುವುದೇ ಅಲ್ಲದೇ ಎಲ್ಲ ವಿಷಯಗಳನ್ನು ಜ್ಞಾಪಕ ಇಟ್ಟುಕೊಳ್ಳುವ ಶಕ್ತಿಹೊಂದಿದೆ. ಅಷ್ಟೇಅಲ್ಲದೇ ಹೊಸ ವಿಷಯಗಳನ್ನು ಕೂಡಾ ಜ್ಞಾಪಕ ಮಾಡುವ ಶಕ್ತಿ ಇರುವುದಾಗಿ ಇದೆ. ಮೊದಲು ಒಂದು ವಿಷಯವನ್ನು ಜ್ಞಾಪಕ ತರುವುದು. ಕೂಡಲೇ ಅದನ್ನು ಬಿಟ್ಟು ಮೊದಲನೆಯದಕ್ಕೆ ಅನುಬಂಧವಾದ ಬೇರೊಂದು ವಿಷಯವನ್ನು ತರುತ್ತದೆ. ಅದನ್ನು ಬಿಟ್ಟು

ಅದಕ್ಕೆ ಅನುಬಂಧವಾದ ಇನ್ನೊಂದು ವಿಷಯವನ್ನು ತರುವುದು. ಅದನ್ನು ಬಿಟ್ಟು ಅದಕ್ಕೆ ಅನುಬಂಧವಾದ ಇನ್ನೊಂದು ವಿಷಯವನ್ನು ತರುತ್ತದೆ. ಈ ವಿಧವಾಗಿ ಅದು ಒಂದಕ್ಕೊಂದು ಅನುಬಂಧ ವಿಷಯಗಳನ್ನೇ ಜ್ಞಾಪಕ ಮಾಡುತ್ತಾ, ಕೊನೆಗೆ ಯಾವ ವಿಷಯವನ್ನೋ ತಂದು ಇಡುತ್ತದೆ. ಮೊದಲ ವಿಷಯಕ್ಕೆ, ಕೊನೆಯ ವಿಷಯಕ್ಕೆ ನೋಡಿದರೆ ಸಂಬಂಧವಿಲ್ಲದೆ ಇರುತ್ತದೆ. ಆರಂಭವಾಗುವುದು ಒಂದು ವಿಷಯ, ಕೊನೆಗೆ ನಿಲ್ಲುವುದು ಮತ್ತೊಂದು ವಿಷಯವಿರುತ್ತದೆ. ಮನಸ್ಸು ವಿಷಯ ಪ್ರೇರಣೆ ಮಾಡಿದಾಗ ಬಗೆಹರಿಯದ ವಿಷಯಗಳನ್ನು ತಂದಿಡುತ್ತಿರುತ್ತದೆ.

'ಕುಂದನದ (ಬಂಗಾರದ) ಹುಲ್ಲು ಮೇಲ್ನೋಟಕ್ಕೆ ಹುಲ್ಲಿನಹಾಗೆ ಕಾಣಿಸಿದರೂ ಒಳಗೆ ಬೇರುಗಳು ಒಂದರೊಂದಿಗೆ ಒಂದು ಬೆರೆತಿರುತ್ತದೆ. ಕುಂದನದಹುಲ್ಲಿನ ಬೇರುಗಳು ಕೂಡಾ ಬಗೆಹರಿಯದ ಮನಸ್ಸಿನ ಹಾಗೆಯೇ ಇವೆ. ಆದ್ದರಿಂದ 'ಕುಂದನದ ಹುಲ್ಲಿಗೆ' ಹೋಲಿಸಿದ್ದಾರೆ. ಮನಸ್ಸನ್ನು ಬಿಟ್ಟುಹಾಕಿದರು ಬಗೆಹರಿಯದ ಚಿಂತೆಗಳು ಮಾಡುತ್ತಿರುತ್ತದೆ. ಆದಕಾರಣ 'ಕುಳಿತು ಮೇಯಿಸಿರುವ ಕುಂದನದ ಹುಲ್ಲು' ಎಂದು ಹೇಳಿದ್ದಾರೆ.

ಮೇಲಿನ ತತ್ತ್ವದಲ್ಲಿ ವೀರಬ್ರಹ್ಮಯ್ಯನವರು ಶ್ವಾಸವನ್ನು ಕುರಿತು ನಿಗೂಢವಾಗಿ ಬರೆದಾಗ, ಕೆಳಗಿನ ಪದ್ಯದಲ್ಲಿ ವೇಮನ ಯೋಗಿಯವರು ಮನಸ್ಸನ್ನು ಕುರಿತು ನಿಗೂಢವಾಗಿ ಬರೆಯಲಾಗಿದೆ. ಇವರು ಬರೆದಿರುವ ವಿಷಯಗಳನ್ನು ಸ್ಥೂಲವಾಗಿ ಮೇಲ್ನೋಟಕ್ಕೆ ಅರ್ಥಮಾಡಿಕೊಂಡರೇ ಏನೂ ಅರ್ಥವಾಗುವುದಿಲ್ಲ. ಅದೇ ಸುಕ್ಷ್ಮವಾಗಿ ಅರ್ಥ ಮಾಡಿಕೊಂಡರೇ ಅವರು ಹೇಳುವ ವಿಷಯವು ಸುಲಭವಾಗಿ ಅರ್ಥವಾಗಬಹುದು. ದೇವರು ಕೂಡಾ ತನ್ನ ಜ್ಞಾನವನ್ನು ಹೆಚ್ಚಾಗಿ ಸೂಕ್ಷ್ಮರೂಪದಲ್ಲಿಯೇ ಹೇಳಿದ್ದಾನೆ. ದೇವರು ಸೂಕ್ಷ್ಮವಾದವನು ಆದ್ದರಿಂದ ತನ್ನ ಜ್ಞಾನವು ಕೂಡಾ ಸೂಕ್ಷ್ಮವಾಗಿ ಇರುವಂತೆ ಹೇಳಿದ್ದಾನೆ. ನಾವು ಸೂಕ್ಷ್ಮವಾಗಿ ಆಲೋಚಿಸಿದರೇ ದೇವರೇ ಅದಕ್ಕೆ ಅರ್ಥವನ್ನು ಅಂತರಂಗದಲ್ಲಿ ತಿಳಿಸುವನು. ಉದಾಹರಣೆಗೆ ನಾವು ಒಂದು ತತ್ತ್ವವನ್ನು, ಒಂದು ಪದ್ಯವನ್ನು ತೋರಿಸಿ

ಅದಕ್ಕೆ ಅರ್ಥವಾಗುವಂತೆ ವಿವರವನ್ನು ಬರೆದಿದ್ದೇವೆ. ಅರ್ಥವಾಗದ ಆ ಪದ್ಯಕ್ಕೆ, ತತ್ತ್ವಕ್ಕೆ ದೇವರೇ ನನಗೆ ಭಾವನೆಯನ್ನು ತಿಳಿಸಿದ್ದಾನೆಂದು ಧೈರ್ಯವಾಗಿ ಹೇಳಬಲ್ಲೆವು.

ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಬಹಳಮಟ್ಟಿಗೆ ಸೂಕ್ಷ್ಮ ಜ್ಞಾನದೊಂದಿಗೆ ಕೂಡಿಕೊಂಡಿರುವ ಮುತಷಾಬಿಹಾತ್ ವಾಕ್ಯಗಳಿವೆ. ಅವುಗಳನ್ನು ತಿಳಿಯುವುದಕ್ಕೆ ಅಪಾರವಾದ ಶ್ರದ್ಧೆ, ತೀಕ್ಷಣವಾದ ಬುದ್ಧಿ ಅವಶ್ಯಕ. ಆ ಎರಡು ನನಗೆ ದೇವರೇ ಕೊಟ್ಟಿದ್ದಾನೆ. ಆದ್ದರಿಂದ ಕಷ್ಟಕರವಾದ ಸೂಕ್ಷ್ಮತೆಯಿಂದ ಕೂಡಿಕೊಂಡಿರುವ 110 ವೇಮನ ಪದ್ಯಗಳಿಗೆ ಸುಲಭವಾಗಿ ವಿವರವನ್ನು ಬರೆದಿದ್ದೇನೆ. ಹಾಗೆಯೇ ವೀರಬ್ರಹ್ಮಯ್ಯನವರ ಹನ್ನೆರಡು ಕಠಿಣವಾದ ತತ್ತ್ವಗಳಿಗೆ ವಿವರವನ್ನು ಬರೆದಿದ್ದೇವೆ. ಈಗ ದೇವರು ಅಂತಿಮ ದೈವಗ್ರಂಥವನ್ನು ಒರೆಕಲ್ಲಾಗಿ ಮಾಡಿ ಮನುಷ್ಯರು ಅರ್ಥಮಾಡಿಕೊಂಡಿರುವ ವಿಷಯಗಳಲ್ಲಿ ಸತ್ಯಾಸತ್ಯವನ್ನು ನಿರ್ಧಾರಿಸಿ ಹೇಳಿದಂತೆ ಮಾಡಿದ್ದಾನೆ. ಇದು ದೈವಕಾರ್ಯವೇ ಹೊರತು ನನ್ನ ಕಾರ್ಯ ಏನೂ ಅಲ್ಲ. ಇದೇ ವಿಧಾನದಲ್ಲಿ **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂದು ಒಂದು ಗ್ರಂಥವನ್ನು ಬರೆದಿದ್ದೇವೆ. ಈಗ ಅದೇ ಹೆಸರಿನಮೇಲೆ ಎರಡನೆಯ ಭಾಗವನ್ನು ಕೂಡಾ ಬರೆಯಬೇಕೆಂದುಕೊಂಡಿದ್ದೇವೆ. ಇದು ದೇವರ ಪ್ರೇರಣೆಯಾದ್ದರಿಂದ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿನ ಅನೇಕ ಸೂಕ್ಷ್ಮಜ್ಞಾನ ವಿಷಯಗಳು ವಿವರವಾಗಿ ತಿಳಿಯುವವೆಂದು ಅಂದುಕೊಳ್ಳುತ್ತಿದ್ದೇನೆ. ಇಲ್ಲಿಯವರೆಗು ರಂಜಾನ್, ರೋಜಾ ದೇವರ ಆರಾಧನೆಯಲ್ಲಿ ಭಾಗವಾಗಿಯೇ ಈಗ ಕಾಣಿಸಿದರೂ, ಖುರಾನ್ ಗ್ರಂಥದಲ್ಲಿ ಹಾಗೆಯೇ ಕಾಣಿಸಿದರೂ, ಇದು ಪೂರ್ವವು ಮನುಷ್ಯರ ಮಧ್ಯದಲ್ಲಿ ಇನ್ನೊಂದು ರೂಪದಲ್ಲಿ ಇನ್ನೊಂದು ಅರ್ಥದಿಂದ ಇರುತ್ತಿದ್ದವೆಂದು ತಿಳಿಯಿತು. ಅಂದಿನ ಕಾಲದಲ್ಲಿನ ವಿಷಯಗಳನ್ನು ತಿಳಿಸುವವರು ಯಾರೂ ಇಲ್ಲದಿದ್ದರೂ, ಈಗ ದೇವರೇ ಆ ವಿಷಯಗಳನ್ನು ನಮಗೆ ತಿಳಿಸಿರುವುದು ನಡೆದಿದೆ. ಅದರ ಪ್ರಕಾರ ರಂಜಾನ್ ಕುರಿತು, ರೋಜಾನನ್ನು ಕುರಿತು ತಿಳಿದುಕೊಂಡಿದ್ದೇವೆ. ಪೂರ್ವವಿರುವ

ಆಚರಣೆ ಪ್ರಕಾರ ಇವುಗಳನ್ನು ಅರ್ಥ ಮಾಡಿಕೊಂಡು ಹಾಗೆಯೇ ಆಚರಿಸಿದರೇ ಈದಿನ ಅಲ್ಲಾಹ್ ಹೇಳಿರುವ ವಾಕ್ಯಗಳಿಗೆ ಕೂಡಾ ಭಾವವು ಸರಿಹೋಗುವುದೆಂದು ತಿಳಿಯುತ್ತಿದೆ. ಹಾಗಾಗದಿದ್ದ ಪಕ್ಷದಲ್ಲಿ ತಪ್ಪು ಭಾವನೆಗಳೊಂದಿಗೆ ದೇವರು ಹೇಳಿರುವುದು ಅರ್ಥವಾಗದೆ ತಪ್ಪುದಾರಿಯಲ್ಲಿ ಹೋಗುವುದಕ್ಕೆ ಅವಕಾಶವಿದೆ. ಆದ್ದರಿಂದ ದೇವರು ಪೂರ್ವದಲ್ಲಿ ಹೇಳಿರುವ ವಿಧಾನವನ್ನೇ ಅನುಸರಿಸೋಣ.

## ತೌರಾತ್ - ತೌಹೀದ್

**'ಅಲ್ಲಾಹ್'** ಎನ್ನುವ ಪದವು ಕೂಡಾ ಸೃಷ್ಟಿ ಆದಿಯಲ್ಲಿನದೇ. ಯಾವ ವಿಧವಾಗಿ **'ನಮಾಜ್, ರಂಜಾನ್, ರೋಜಾ, ಜಕಾತ್, ಹಜ್'** ಎನ್ನುವ ಪದಗಳು ಇಂದಿನವಲ್ಲವೋ, ಹಾಗೆಯೇ 'ಅಲ್ಲಾಹ್' ಎನ್ನುವ ಪದವು ಕೂಡಾ ಈ ಮಧ್ಯ ಕಾಲದಲ್ಲಿ ಬಂದಿರುವುದಲ್ಲ. ಈ ಪದಗಳೆಲ್ಲವೂ ಸೃಷ್ಠಿ ಆದಿಯಿಂದ ಇವೆ. ಆದರೂ ಯಾರಿಗೂ ತಿಳಿದಿಲ್ಲ. ಅಷ್ಟೇಅಲ್ಲದೇ ಈ ಪದಗಳೆಲ್ಲವೂ ಆದಿನವಿದ್ದ ತೆಲುಗು ಭಾಷೆಯಲ್ಲಿನವೇ ಆದರೂ, ಆ ವಿಷಯವು ಈದಿನ ಸ್ವಲ್ಪವಾದರೂ ಯಾರಿಗೂ ತಿಳಿದಿಲ್ಲ. 'ಅಲ್ಲಾಹ್' ಎನ್ನುವುದು ದೇವರ ಹೆಸರಲ್ಲ. ಆತನಿಗಿರುವ ಬಿರುದು ಎಂದು ಹೇಳಬಹುದು. 'ಬಿರುದು' ಎಂದರೇ ಒಬ್ಬ ಮನುಷ್ಯನಲ್ಲಿ ಇರುವ ದೊಡ್ಡತನವನ್ನು ಇಲ್ಲವೇ ಪ್ರತಿಭೆಗೆ ಇಡುವ ಹೆಸರು ಎಂದು ತಿಳಿಯಬೇಕು. 'ಅಲ್ಲಾಹ್' ಎನ್ನುವುದರಲ್ಲಿ ದೇವರವೊಂದು ಪ್ರತಿಭೆ ಏನೋ ತಿಳಿಯಬಲ್ಲದು. ಆತನ ದೊಡ್ಡಸ್ಥಿಕೆ ಏನೋ ತಿಳಿಯಬಲ್ಲದು. **ಅಲ್ಲಾಹ್ ಎಂದರೇ ಹದ್ದು ಇಲ್ಲದವನು, ಎಲ್ಲೆ ಇಲ್ಲದವನು ಎಂದು ಅರ್ಥ**. ಹೀಗೆ ಅಲ್ಲಾಹ್ ಹೆಸರಲ್ಲವೆಂದು, ದೇವರನ್ನು ಗೌರವವಾಗಿ ಕರೆಯುವ ಬಿರುದೆಂದು ಹೇಳಬಹುದು. ಹಾಗೆಯೇ **'ದೇವರು' ಎಂದರೇ ದೇವಲ್ಪಡುವವನು, ಹುಡುಕಲ್ಪಡುವವನು ಎಂದು ಭಾವನೆ**. ಆತನು ಯಾರಿಗೂ ದೊರೆಯುವುದಿಲ್ಲ, ಕಾಣಿಸುವುದಿಲ್ಲ ಆದ್ದರಿಂದ ಆ ಬಿರುದನ್ನು ಇರಿಸಿ 'ದೇವರು' ಎಂದಿದ್ದೇವೆ. ಹಾಗೆಯೇ ಪರಮಾತ್ಮ ಎಂದು ದೇವರನ್ನು ಉಚ್ಛರಿಸಿದರೂ ಆತ್ಮಗಿಂತಲೂ ಬೇರೆಯಾಗಿರುವವನೆನ್ನುವ ಅರ್ಥವೇ

ಹೊರತು, ಅದು ಪ್ರತ್ಯೇಕಿಸಿ ಮನುಷ್ಯರಿಗೆ ಇಟ್ಟಿರುವ ಹೆಸರಿನಂಥದ್ದಲ್ಲ. **'ಪುರುಷೋತ್ತಮ'** ಎಂದರೇ **'ಪುರುಷರಲ್ಲಿ ಉತ್ತಮ ಪುರುಷನು'** ಎಂದು ಹೇಳುವುದು ಹೊರತು ಅದು ಹೆಸರಲ್ಲ. ಈ ವಿಧವಾಗಿ ದೇವರನ್ನು ಭಾವನೆಯಿಂದ ಕೂಡಿರುವ ಪದಗಳಿಂದಲೇ, ಆತನ ಪ್ರತಿಭೆಗೆ ತಕ್ಕ ಬಿರುದುಗಳಿಂದಲೇ ಗೌರವವಾಗಿ ಕರೆಯುತ್ತಿದ್ದೇವೆ. ಇದರಿಂದ ದೇವರು ಹೆಸರಿಲ್ಲದವನೆಂದು ಹೇಳಬಹುದು. ಇಲ್ಲಿಯವರೆಗು ಹೇಳಿರುವ ಬಿರುದುಗಳೆಲ್ಲ ತೆಲುಗು ಭಾಷೆಯಲ್ಲಿರುವವೇ. ಕೃತ ಯುಗದಲ್ಲಿ ಮೊದಲು ಹುಟ್ಟಿರುವ ಭಾಷೆ ತೆಲುಗು. ಆದ್ದರಿಂದ ಈದಿನ ದೇವರನ್ನು ಕರೆಯುವ ಪದಗಳೆಲ್ಲ ತೆಲುಗು ಪದಗಳಾಗಿಯೇ ಇವೆ.

ಮೊಟ್ಟಮೊದಲು ಭೂಮಿಮೇಲೆ ಮನುಷ್ಯರಿಗೆ ಜ್ಞಾನವನ್ನು ಸೇರಿಸಿದವನು ಸೂರ್ಯನು. ಭೂಮಿಮೇಲಕ್ಕೆ ಬಂದು ಜ್ಞಾನವನ್ನು ತಿಳಿಸುವ ಶಕ್ತಿ ಒಂದು ಸೂರ್ಯಗ್ರಹಕ್ಕೆ ಹೊರತುಪಡಿಸಿ ಯಾರಿಗೂ ಇಲ್ಲ. ಆದ್ದರಿಂದ ಮೊದಲು ಭೂಮಿಮೇಲೆಗೆ ಖಗೋಳದಿಂದ ಸ್ಥೂಲವಾಗಿ ಅಲ್ಲದೇ ಸೂಕ್ಷ್ಮವಾಗಿ ಬಂದು ಜ್ಞಾನವನ್ನು ಹೇಳಿರುವವನು ಸೂರ್ಯನೇ. ಅದೇ ಸೂರ್ಯನೇ ಕಲಿಯುಗದಲ್ಲಿ 'ಜಿಬ್ರಯೇಲ್' ಎಂಬ ಹೆಸರಿನಿಂದ ಆಗಾಗ ಭೂಮಿಮೇಲಕ್ಕೆ ಬಂದು 23 ವರ್ಷಗಳು ಸ್ವಲ್ಪಸ್ವಲ್ಪವಾಗಿ ಮುಹಮ್ಮದ್ ಪ್ರವಕ್ತರವರಿಗೆ ಜ್ಞಾನವನ್ನು ಹೇಳಿದ್ದಾನೆ. ಕೃತಯುಗದಲ್ಲಿಯೂ, ಕಲಿಯುಗದಲ್ಲಿಯೂ ಜ್ಞಾನವನ್ನು ಹೇಳಿರುವವನು ಒಬ್ಬ ಸೂರ್ಯನೇ ಆಗಿರುವುದರಿಂದ ಆಗ ಪೂರ್ವವು ದೇವರನ್ನು ಕುರಿತು ಉಪಯೋಗಿಸಿರುವ ಪದಗಳನ್ನು, ಆತನ ಆರಾಧನೆ ಪದಗಳನ್ನು ಅಂದಿನ ಪದಗಳನ್ನೇ ಈಗಲೂ ಕೂಡಾ ಹೇಳಿರುವುದಾಗಿದೆ. ಈಗ ಖುರಾನ್ ಗ್ರಂಥದಲ್ಲಿರುವ ದೇವರನ್ನು, ದೇವರ ಆರಾಧನೆಯನ್ನು ಕುರಿತು ಹೇಳಿರುವ ಪದಗಳು ಅರಬ್ಬೀ ಭಾಷೆಯವೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಆದರೇ ಸೃಷ್ಠಿ ಆದಿಯಲ್ಲಿ ಕೃತಯುಗದಲ್ಲಿಯೇ ಆ ಪದಗಳು ಇದ್ದವೆಂದು ಈದಿನ ಯಾರಿಗೂ ತಿಳಿದಿಲ್ಲ. ದೇವರ ಆಧ್ಯಾತ್ಮಿಕ ಭಾವನೆಗೆ ಸರಿಹೋಗುವ

ಅರ್ಥದಿಂದ ಕೂಡಿರುವ ತೆಲುಗು ಭಾಷೆಯಲ್ಲಿನ ಪದಗಳೇ ಈದಿನ ಇವೆ. ಈದಿನವಿರುವ ದೇವರಿಗೆ, ದೇವರ ಆರಾಧನೆಗೆಸಂಬಂಧಿಸಿದ ಪದಗಳಿಗೆ ಅರಬ್ಬೀ ಭಾಷೆಯಲ್ಲಿ ಆಧ್ಯಾತ್ಮಿಕಕ್ಕೆ ಸರಿಹೋಗುವ ಅರ್ಥಗಳು ತೆಲುಗು ಭಾಷೆಯಲ್ಲಿರುವಂತೆ ಇಲ್ಲ. ಈದಿನ ಕೆಲವರು ಅರಬ್ಬೀ ಭಾಷೆಯಲ್ಲಿ ಕೆಲವು ಪದಗಳಿಗೆ ಅರ್ಥಗಳು ಹೇಳಿದರೂ ಅವು ಆಧ್ಯಾತ್ಮಿಕ ಭಾವನೆಗೆ ಪೂರ್ತಿ ಹತ್ತಿರವಾಗಿರುವುದಿಲ್ಲ. ಇದ್ದರೂ ತೆಲುಗು ಭಾಷೆಯಲ್ಲಿ ಇರುವಷ್ಟು ಹತ್ತಿರ ಪದಗಳಾಗಿ ಇರುವುದಿಲ್ಲ. ಈದಿನ ಅರಬ್ಬೀ ಭಾಷೆಯಲ್ಲಿ ಕೆಲವು ಪದಗಳಿದ್ದರೂ ಅವು ತೆಲುಗು ಭಾಷೆಗೆ ಹತ್ತಿರ ಸಂಬಂಧವಾಗಿ ಇರುವಂತೆ ಕಾಣಿಸುತ್ತಿವೆ.

ಈ ದಿನ ಅಂತಹ ಅರಬ್ಬೀ ಪದಗಳನ್ನು ಹೇಳಿಕೊಂಡರೇ ಅಂದರೇ ಆಧ್ಯಾತ್ಮಿಕಕ್ಕೆ ಸಂಬಂಧಿಸಿದ ಪದಗಳನ್ನು ಕುರಿತು ಹೇಳಿಕೊಂಡರೇ ಮುಖ್ಯವಾಗಿ **ತೌರಾತ್, ತೌಹೀದ್** ಎಂಬ ಎರಡು ಪದಗಳಿವೆ. ತೆಲುಗಿನಲ್ಲಿ **'ಜ'** ಎಂಬ ಅಕ್ಷರ ಹುಟ್ಟುವಿಕೆಗೆ ಸಂಬಂಧಿಸಿದ ಅರ್ಥವನ್ನು ತೆಲುಗು ಭಾಷೆಯಲ್ಲಿ ತಿಳಿಸುತ್ತಿದೆ ಎಂದು ಹೇಳಿಕೊಂಡಿದ್ದೇವೆ. ಉದಾಹರಣೆಗೆ **'ಜಾತಕ'** ಎಂದರೇ ಹುಟ್ಟಿದಾಗ ನಿರ್ಣಯಿಸಲ್ಪಟ್ಟಿರುವ ಕರ್ಮಫಲವೆಂದು ಅರ್ಥ. ಅದನ್ನು ಪೂರ್ವದಲ್ಲಿ **'ಜಾಘತಕ'** ಎಂದು ಕರೆಯುತ್ತಿದ್ದರು. ಆದರೇ ಕಾಲಕ್ರಮವಾಗಿ ಜಾಘತಕದಲ್ಲಿ **'ಘ'** ಎಂಬ ಅಕ್ಷರ ಹೋಗಿ ಜಾತಕ ಎಂದು ಅಸಂಪೂರ್ಣವಾಗಿ ಉಳಿದುಹೋಗಿದೆ. ಯಾವುದೇನಾದರೂ ಆ ಪದದಲ್ಲಿ **'ಜ'** ಎನ್ನುವುದು ಜನ್ಮಕ್ಕೆ ಸಂಬಂಧಿಸಿದ ಭಾವನೆಯನ್ನು ತಿಳಿಸುವುದೆಂದು ಹೇಳುತ್ತಿದ್ದೇವೆ. ಅದೇ 'ಜ' ಎನ್ನುವ ಶಬ್ಧದಿಂದ ಬೆರೆತಿರುವ ದೇವರ ಆರಾಧನೆಗೆ ಆಧ್ಯಾತ್ಮಿಕಕ್ಕೆ ಹತ್ತಿರ ಸಂಬಂಧವಿರುವ "ಜ" ಕಾರದಿಂದ ಕೂಡಿಕೊಂಡಿರುವ ಪದಗಳನ್ನು ನೋಡಿದರೇ ಬಹಳ ಕಾಣಿಸುತ್ತಿವೆ. ಅವು ವರಸೆಯಾಗಿ **ನಮಾಜ಼್, ಜ಼ಕಾತ್, ರೋಜ಼ಾ, ಹಜ಼್, ರಂಜ಼ಾನ್**. ಹಾಗೆಯೇ ತೌರಾತ್, ತೌಹೀದ್ ಎನ್ನುವ ಪದಗಳು 'ತ್ರಿ' ಎನ್ನುವ ಶಬ್ದದೊಂದಿಗೆ ಸಂಬಂಧಪಟ್ಟಿವೆ. ತ್ರೈತ ಸಿದ್ಧಾಂತಕ್ಕೆ ತಗಲಿಕೊಂಡಿರುವ ಪದಗಳಾಗಿ ಕಾಣಿಸುತ್ತಿವೆ. ಅಷ್ಟೇಅಲ್ಲದೇ ತೆಲುಗು ಭಾಷೆಯಲ್ಲಿನ ಭಾವನೆಗಳಿಗೆ

ಹತ್ತಿರ ಅರ್ಥದಿಂದ ಕೂಡಿಕೊಂಡಿವೆ. ಇವುಗಳನ್ನು ಆಧ್ಯಾತ್ಮಿಕ ಭಾವನೆಯಿಂದ ನೋಡಬೇಕೆ ಹೊರತು ಕೇವಲ ಭಾಷೆ ಪರಿಧಿಯಲ್ಲಿ ನೋಡಬಾರದು.

'ತೌ' ಎಂದರೇ ತೆಲುಗು ಭಾಷೆಯಲ್ಲಿ ಮೂರು ಎಂದು ಅರ್ಥ. ಆಧ್ಯಾತ್ಮಿಕ ಪರಿಭಾಷೆಯಲ್ಲಿ ಮೂರು ಎನ್ನುವುದು ಎಷ್ಟೋ ಮುಖ್ಯವಾದುದು. ಅರಬ್ಬೀ ಭಾಷೆಯಲ್ಲಿ ಖುರಾನ್ ಗ್ರಂಥದಲ್ಲಿ 'ತೌರಾತ್', 'ತೌಹೀದ್' ಎನ್ನುವ ಪದಗಳಿವೆ. **'ತೌರಾತ್'** ಎಂದರೇ ಅಲ್ಲಾಹ್ ಮೂಸಾ ಪ್ರವಕ್ತಗೆ ಕೊಟ್ಟಿರುವ ಗ್ರಂಥವೆಂದು ಹೇಳುತ್ತಿರುತ್ತಾರೆ. ಹಾಗೆಯೇ **'ತೌಹೀದ್'** ಎಂದರೇ ಮುಸ್ಲಿಮ್ ಹಿರಿಯರು ಈ ವಿಧವಾಗಿ ಹೇಳುತ್ತಿದ್ದಾರೆ. **'ಏಕ ದೈವಾರಾಧನೆ ಅಥವಾ ಏಕೇಶ್ವರೋಪಾಸನೆ'** ಎಂದು ಹೇಳುತ್ತಿದ್ದಾರೆ. ಅವರು ಹೇಳುವುದು ವಾಸ್ತವವೇ. ಏಕೇಶ್ವರೋಪಾಸನೆ ಎಂದರೇ! ಅಸ್ತಿತ್ವ್ವರೀತಿಯಲ್ಲಾಗಲೀ, ಆರಾಧನೆ ಹಕ್ಕು ವಿಷಯದಲ್ಲಾಗಲೀ, ನಾಮಗಳು, ಗುಣಗಳ ವಿಷಯದಲ್ಲಾಗಲೀ, ದೇವರು ಒಬ್ಬನೇ ಎಂದು ಮನಸಾ, ವಾಚಾ, ಕರ್ಮಣಾ ನಂಬುವುದೆಂದು ಹೇಳುತ್ತಿರುತ್ತಾರೆ. ತೌರಾತ್ ಎಂದರೇ ದೇವರು ಕೊಟ್ಟಿರುವ ಗ್ರಂಥವೆಂದೂ, ತೌಹೀದ್ ಎಂದರೇ ಏಕೇಶ್ವರೋಪಾಸನೆ ಎಂದು ಹೇಳುತ್ತಿರುತ್ತಾರೆ. ಈ ಪದಗಳ ಕುರಿತು ತೆಲುಗು ಭಾಷೆಯಲ್ಲಿ ನನಗೆ ತಿಳಿದಿರುವ ಅರ್ಥವನ್ನು ನಾನು ಹೇಳಿದ್ದೇನೆ. ತೌರಾತ್ ಎಂದರೇ ಮೂರು ರಾತ್ರಿಗಳೆಂದು ನಾನು ಹೇಳುವುದಾಗಿದೆ. ಹಾಗೆಯೇ ತೌಹೀದ್ ಎಂದರೇ ಮೂರು ಆತ್ಮಗಳೆಂದು ಹೇಳಿದ್ದೇವೆ. ತೌರಾತ್‌ಗು, ತೌಹೀದ್‌ಗು ನಾನು ಹೇಳಿರುವ ಅರ್ಥಗಳು ಎಲ್ಲರಿಗೂ ಹೊಸದಾಗಿಯೇ ಇದ್ದರೂ ಆಧ್ಯಾತ್ಮಿಕ ಭಾವದಲ್ಲಿ ಬಹಳ ಹತ್ತಿರವಾಗಿವೆ. ನಿಜ ಭಾವನೆಯನ್ನು ತಿಳಿಸುವವು. ಯಾವ ಪದಕ್ಕಾದರೂ ನಿಜಾರ್ಥ ತಿಳಿದಾಗ ಆ ಪದದಲ್ಲಿನ ಜ್ಞಾನವೂ, ಜ್ಞಾನವೊಂದರ ಸಾಂದ್ರತೆ ತಿಳಿಯುವುದು. ತೌರಾತ್, ತೌಹೀದ್ ಎರಡು ಮುಸ್ಲಿಮ್‌ರ ಭಾವನೆಯಲ್ಲಿ ಬೇರೆ ಅರ್ಥಗಳು ಹೊಂದಿವೆ ಎಂದು ಹೇಳುತ್ತಿದ್ದರೂ ನನ್ನ ಭಾವದಲ್ಲಿ ಎರಡು ಒಂದೇ ಭಾವನೆಯನ್ನು, ಒಂದೇ ಜ್ಞಾನವನ್ನು ತಿಳಿಸುತ್ತಿವೆ ಯೆಂದು ಹೇಳುತ್ತಿದ್ದೇವೆ. ಮುಸ್ಲಿಮ್ ಒಂದು ಮತವಾಗಿ ಇರುವಾಗ ಅವರು

ಮತಕ್ಕೆ ಸರಿಹೋಗುವಂತೆ, ಮತಕ್ಕೆ ಹತ್ತಿರವಾಗಿರುವಂತೆ ಬೇರೆಬೇರೆ ಅರ್ಥಗಳಿಂದ ಹೇಳುತ್ತಿರುತ್ತಾರೆ. ತೌರಾತ್ ಗ್ರಂಥವಾಗಿ, ತೌಹೀದ್ ದೇವರ ಆರಾಧನೆಯಾಗಿ ಹೇಳುತ್ತಿರುತ್ತಾರೆ. ನಾವು ಮಾತ್ರ ದೇವರ ಔನ್ನತ್ಯವನ್ನು, ದೇವರ ಸ್ಥಿರತ್ವವನ್ನು, ದೇವರ ವಿಭಾಗಗಳನ್ನು ತಿಳಿಸುವ ಪದಗಳೇ ತೌರಾತ್, ತೌಹೀದ್ ಎಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಮುಸ್ಲಿಮ್‌ರು ತೌರಾತ್‌ನ್ನು ದೇವರ ಗ್ರಂಥವಾಗಿ, ತೌಹೀದ್‌ನ್ನು ದೇವರ ಆರಾಧನೆಯಾಗಿ ಹೇಳುತ್ತಿದ್ದಾರೆ ವಾಸ್ತವವೇ. ಆದರೇ ತೌರಾತ್ ಗ್ರಂಥವನ್ನು ಅಲ್ಲಾಹ್ ಮುಸಾ ಪ್ರವಕ್ತರಿಗೆ ಕೊಟ್ಟಿದ್ದಾನೆ ಎನ್ನುತ್ತಿದ್ದೀರ. ತೌರಾತ್ ಗ್ರಂಥದಿಂದ ಮೂಸಾ ತೌಹೀದ್‌ನ್ನು ಕುರಿತು ಹೇಳಿರಬಹುದು. ಮೂಸಾಗೆ ಅಲ್ಲಾಹ್ ತೌರಾತ್ ಗ್ರಂಥವನ್ನು ಕೋಟ್ಟಿದ್ದಾನೆ ಎನ್ನುವುದು ವಾಸ್ತವವೇನಾ? ಅಲ್ಲಾಹ್ (ದೇವರು) ಕಾಣಿಸುವುದಿಲ್ಲ, ಮಾತನಾಡುವುದಿಲ್ಲ ಎಂದು ನೀವೇ ಹೇಳಿದ್ದೀರ. ಖುರಾನ್ ಗ್ರಂಥದಲ್ಲಿ 42ನೇ ಸೂರಾ 51ನೇ ಆಯತ್‌ನಲ್ಲಿ ದೇವರು ನೇರವಾಗಿ ಯಾವ ಮಾನವನೊಂದಿಗೂ ಮಾತನಾಡುವುದಿಲ್ಲ ಎಂದು ಹೇಳಿದ್ದಾರೆಂದು ಕೂಡಾ ನೀವೇ ಹೇಳಿದ್ದೀರಿ. ಹಾಗಿರುವಾಗ ಮನುಷ್ಯನಾದ ಮೂಸಾಗೆ ದೇವರು ಹೇಗೆ ತೌರಾತ್ ಗ್ರಂಥವನ್ನು ಕೊಟ್ಟಿದ್ದಾನೆ? ಇದಕ್ಕೆ ಉತ್ತರ ಹೇಳಿರಿ.**

**ಉತ್ತರ :–** ಮೂಸಾ ಪ್ರವಕ್ತರವರಿಗೆ ತೌರಾತ್ ಗ್ರಂಥವನ್ನು ದೇವರೇ ಕೊಟ್ಟಂತೆ ಸೂರಾ ಆರರಲ್ಲಿ, ಆಯತ್ 91ರಲ್ಲಿ ಹೇಳಿರುವುದಾಗಿದೆ. ಉಳಿದ ಕಡೆ ಸೂರಾ 2 ಆಯತ್ 53ರಲ್ಲಿ ಕೂಡಾ ಮೂಸಾಗೆ ತೌರಾತ್ ಗ್ರಂಥವನ್ನು ಕೊಟ್ಟಿದ್ದೇನೆಂದು ಹೇಳಿದ್ದಾನೆ. (2-53) **"ಇನ್ನೂ ಆಗ ನಾವು ಮೂಸಾಗೆ ಗ್ರಂಥ (ತೌರಾತನ್ನು) ಕೊಟ್ಟಿದ್ದೇವೆ. ಅದು ಸತ್ಯಾಸತ್ಯಗಳ ವಿಚಕ್ಷಣೆ ರೇಖೆ (ಒರೆಕಲ್ಲು) ನೀವು ಸನ್ಮಾರ್ಗದ ಮೇಲೆ ನಡೆಯುತ್ತೀರೆಂದು ಇದೆಲ್ಲಾ ಮಾಡಿದ್ದೇವೆ"** ಇನ್ನು ಕೆಲವುಕಡೆಗಳಲ್ಲಿ ಕೂಡಾ ಮೂಸಾಗೆ ದೇವರು ತೌರಾತ್ ಗ್ರಂಥವನ್ನು ಕೊಟ್ಟಂತಿದೆ. ಆದರೇ ದೇವರು ತನ್ನ ಗ್ರಂಥದಲ್ಲಿ ನಾನು ಯಾವ ಮಾನವನಿಗೂ ಕಾಣಿಸುವುದಿಲ್ಲ, ಕೇಳಿಸುವುದಿಲ್ಲ, ಕೇಳಿಸುವಂತೆ ಮಾತನಾಡುವುದಿಲ್ಲ ಎಂದು ಹೇಳಿದಾಗ ತೌರಾತ್ ಗ್ರಂಥವನ್ನು

ಹೇಗೆ ಕೊಟ್ಟಿದ್ದಾನೆ? ಎನ್ನುವ ಪ್ರಶ್ನೆ ಬರುವುದು ಸಹಜವೇ! ಆ ಪ್ರಶ್ನೆಯನ್ನು ಈಗ ಕೇಳುವುದು ಒಳ್ಳೆಯದಾಯಿತು. ನನ್ನ ನಂತರ ಇದಕ್ಕೆ ಉತ್ತರ ಯಾರೂ ಹೇಳಲಾರರು. ಏಕೆಂದರೇ! ತೌರಾತ್ ಗ್ರಂಥವನ್ನು ಮೂಸಾಗೆ ಕೊಟ್ಟಿರುವ ರಹಸ್ಯವು ನನಗೆ ಮಾತ್ರ ಗೊತ್ತು. ಉಳಿದವರಿಗೆ ಯಾರಿಗೂ ತಿಳಿದಿಲ್ಲ. ಈಗ ನಾನು ಹೇಳುವ ವಿಷಯವನ್ನು ಜಾಗ್ರತೆಯಾಗಿ ಕೇಳಿದಾಗಲೇ ಈ ವಿಷಯವು ಅರ್ಥವಾಗುತ್ತದೆ. ಪ್ರಪಂಚದಲ್ಲಿ ನಡೆಯಲಾರದ್ದು ಕನಸಿನಲ್ಲಿ ನಡೆಯುತ್ತಿರುತ್ತದೆ. ದೇವರು ನೇರವಾಗಿ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಆದರೇ ಕನಸಿನಲ್ಲಿ ಕೂಡಾ ದೇವರು ಕಾಣಿಸುವುದಿಲ್ಲ ಆದರೇ, ದೇವರ ಅವತಾರವಾದ ಭಗವಂತನು ಕಾಣಿಸಬಹುದು. ಮೂಸಾಗೆ ಒಂದು ದಿನ ಕನಸಿನಲ್ಲಿ ಭಗವಂತನು ಕಾಣಿಸಿ ತೌರಾತ್ ಗ್ರಂಥವನ್ನು ಕೊಡುವುದು ನಡೆದಿದೆ. ಮೂಸಾ ಎಂದು ಖುರಾನ್ ಗ್ರಂಥದಲ್ಲಿ ಹೇಳಿರುವ ವ್ಯಕ್ತಿ ಬೈಬಲ್ ಗ್ರಂಥದಲ್ಲಿ ಮೋಷೇಯಾಗಿ ಹೇಳಲ್ಪಟ್ಟಿದ್ದಾನೆ. ಮೂಸಾ ಮೋಷೇ ಇಬ್ಬರು ಒಂದೇಯೆನ್ನುವ ವಿಷಯವು ಬಹಳಜನರಿಗೆ ತಿಳಿದಿಲ್ಲ. ಮೂಸಾ ಎನ್ನುವ ವ್ಯಕ್ತಿಯನ್ನೇ ಮೋಷೇಯಾಗಿ ಹೇಳಲ್ಪಡುವಾಗ ತೌರಾತ್ ಗ್ರಂಥ ಆತನಿಗೆ ಹೇಗೆ ಬಂದಿದೆ **"ಕೃಷ್ಣಮೂಸಾ"** ಗ್ರಂಥದಲ್ಲಿ ಬರೆದ ಸ್ವಲ್ಪ ಸಮಾಚಾರವನ್ನು ಕೆಳಗೆ ನೋಡೋಣ.

ಮೋಷೇಗೆ ಇಪ್ಪತ್ತು ವರ್ಷಗಳ ವಯಸ್ಸಿನಲ್ಲಿ ಒಂದು ಶುಭ ದಿನ ಏರ್ಪಟ್ಟಿದೆ. ಅಂದಿನಿಂದ ಮೋಷೇ ಆಗಾಗ ಸ್ವಲ್ಪ ಜ್ಞಾನವನ್ನು ಹೇಳುತ್ತಾ ಒಳ್ಳೆಯ ವಕ್ತನಾಗಿ ಬದಲಾಗಿಹೋದನು. ನಂತರ ಆತನನ್ನು ಪ್ರವಕ್ತ ಎಂದು ಎಲ್ಲರೂ ಕರೆದರು. 20 ವರ್ಷಗಳಿಂದ ಆತನ ಜೀವನದಲ್ಲಿ ಒಂದು ಹೊಸ ಬೆಳಕು ಬಂದಿದೆ. 92ನೇ ವರ್ಷದಲ್ಲಿ ಕೃಷ್ಣನಲ್ಲಿ ಕೂಡಾ ಒಂದು ತೃಪ್ತಿ ಏರ್ಪಟ್ಟಿದೆ. ಆಗ ನಡೆದ ವಿಶೇಷ ಏನೆಂದರೇ! ಮೋಷೇಗೆ 20 ವರ್ಷಗಳು ಕಳೆಯುವ ಕಾಲದಲ್ಲಿ ಒಂದು ದಿನ ಭಾನುವಾರ ರಾತ್ರಿ ಮಧ್ಯರಾತ್ರಿ ಕಳೆದ ಸಮಯದಲ್ಲಿ ಕನಸು ಬರುವುದು ನಡೆಯಿತು. ಆ ಕನಸಿನಲ್ಲಿ ಕೃಷ್ಣನು ಕಾಣಿಸಿ ಗ್ರಂಥವಾದ ತನ್ನ ಭಗವದ್ಗೀತೆಯನ್ನು ಮೋಷೇಗೆ ಕೊಡುವುದು ನಡೆದಿದೆ. ಮೋಷೇ ತನ್ನ

ಕನಸಿನಲ್ಲಿ ಕೃಷ್ಣನನ್ನು ನೋಡಿದರೂ ಕೃಷ್ಣನು ಯಾರೋ ತನಗೆ ತಿಳಿದಿಲ್ಲ, ಆದರೇ ಕನಸಿನಲ್ಲಿ ಕಾಣಿಸಿದ ಕೃಷ್ಣನು ಎಷ್ಟೋ ತೇಜಸ್ಸು ಹೊಂದಿರುವುದನ್ನು ನೋಡಿದ ಮೋಷೇ ಆತನು ನಿಜವಾಗಿ ದೇವರೆಂದು ನಂಬಿದನು. ತೇಜಸ್ಸಿನಿಂದ ಕಾಣಿಸಿದ ಕೃಷ್ಣನು ಮೋಷೇಗೆ ಭಗವದ್ಗೀತಾ ಗ್ರಂಥವನ್ನು ಕೊಟ್ಟು ತೌರಾತ್ ಗ್ರಂಥವೆಂದು ಹೇಳುವುದಾಗಿದೆ. ಮೋಷೇ ಕನಸಿನಲ್ಲಿ ಗ್ರಂಥವನ್ನು ತೆಗೆದುಕೊಂಡು ಎದೆಗಪ್ಪಿಕೊಂಡನು. ಅಷ್ಟೇ! ಆತನ ಮೆದುಳಿನಲ್ಲಿ ಮಿಂಚು ಹೊಳೆದಂತಾಗಿದೆ. ಮೋಷೇಗೆ ಒಂದೇ ಸಲ ಎಚ್ಚರವಾಯಿತು. ಎಚ್ಚರ ಬಂದ ನಂತರ ಕೂಡಾ ಗುಂಡಿಗೆ ವೇಗವಾಗಿ ಬಡಿದುಕೊಳ್ಳುತ್ತಿರುವಾಗ, ತಲೆಯಲ್ಲಿ ಯಾವುದೋ ಹೊಸ ಅನುಭೂತಿಯನ್ನು ಪಡೆದ ಸಂತೋಷ ಉಂಟಾಯಿತು. ನಡೆದಿರುವುದು ಏನು? ಎಂದು ಕಣ್ಣು ತೆರೆದು ನೋಡಿದರೇ ತನ್ನ ಕೈಗಳಲ್ಲಿ ಗ್ರಂಥ ಕಾಣಿಸಿತು. ಅದೇ ತೌರಾತ್ ಗ್ರಂಥ. ಅದರ ಮೇಲೆ ಅಂದಿನ ಭಾಷೆಯಲ್ಲಿ **'ತೌರಾತ್'** ಎಂದು ಇರುವುದನ್ನು ಮೋಷೇ ನೋಡಿದನು. ಆ ವಿಧವಾಗಿ ಮೋಷೇಗೆ ತೌರಾತ್ ಗ್ರಂಥ ಲಭ್ಯವಾಯಿತು. ಅಲ್ಲಿನ ತೌರಾತ್ ಗ್ರಂಥವೇ ಇಲ್ಲಿನ ಭಗವದ್ಗೀತೆ.

ತೌರಾತ್ ಎಂದರೇ ಮೂರು ಕತ್ತಲೆಯ ರಾತ್ರಿಗಳೆಂದು ಅರ್ಥ. ಮೂರು ಕಾಣಿಸದ ಆತ್ಮಗಳೊಂದರ ಜ್ಞಾನ ಇರುವುದರಿಂದ, ಮೂರು ಆತ್ಮಗಳ ಜ್ಞಾನವು ರಹಸ್ಯವಾಗಿರುವುದರಿಂದ, ಮೂರು ಆತ್ಮಗಳನ್ನುದ್ದೇಶಿಸಿ ತೌರಾತ್ ಎಂದು ಭಗವದ್ಗೀತೆಗೆ ಕೃಷ್ಣನೇ ಹೆಸರಿಟ್ಟಿದ್ದಾನೆಂದು ತಿಳಿಯುತ್ತಿದೆ. ಇದೆಲ್ಲಾ ಓದುವವರಿಗೆ ಒಂದು ಕಥೆಯಾಗಿದ್ದರೂ, ನಂಬಲಾರದೇ ಇದ್ದರೂ ಇದು ನೂರಕ್ಕೆ ನೂರು ಪಾಲು ನಡೆದ ಸತ್ಯ. ನಂಬಿರೆಂದು ಯಾರನ್ನೂ ಬಲವಂತ ಮಾಡುವುದಿಲ್ಲ. ಸತ್ಯವನ್ನು ಹೇಳದೇ ತಪ್ಪುವುದಿಲ್ಲ, ಆದ್ದರಿಂದ ಸಮಯವಾಸನ್ನವಾದಾಗ ಹೇಳದೇ ತಪ್ಪುವುದಿಲ್ಲ. ಹಾಗೆಂದು ಮೇಲ್ನೋಟಕ್ಕೆ ಕಾಣಿಸುವ ನನ್ನನ್ನು ಈ ವಿಷಯಕ್ಕೆ ಹೊಣೆ ಮಾಡಬೇಡಿ. ನಿಜವಾಗಿ ನಿಮಗೆ ಎಷ್ಟು ಗೊತ್ತೋ ನನಗು ಅಷ್ಟೇ ಗೊತ್ತು. ಈಗಿದು ನಿಮಗೇ ಅಲ್ಲ, ನನಗೂ ಸಹ ಹೊಸ ವಿಷಯವೇ. ಹೀಗೆ ನಮಗೆ ತಿಳಿಯದ ಎಷ್ಟೋ ಹೊಸ ವಿಷಯಗಳು ಆತ್ಮಗೆ ತಿಳಿದಿವೆ. ಆತ್ಮ ತಿಳಿಸಿದರೇನೇ ಈಗ ನಮಗೆ ತಿಳಿಯುತ್ತಿದೆ.

ತೌರಾತ್ ಗ್ರಂಥವು ಮೋಷೇಗೆ ಲಭ್ಯವಾಗಿದೆ ಎಂದು ತಿಳಿದಿದೆ ಅಲ್ಲವೇ! ಇಲ್ಲೇ ಇನ್ನೊಂದು ಹೊಸ ರಹಸ್ಯವಿದೆ. ಅದೇನೆಂದರೇ! ತೌರಾತ್ ಗ್ರಂಥವನ್ನು ಮೋಷೇ ಹೊರತು ಯಾರೂ ನೋಡಲಿಲ್ಲ. ತೌರಾತ್ ಗ್ರಂಥವು ಮೋಷೇಗೆ ಮಾತ್ರವೇ ಕಾಣಿಸುತ್ತಿತ್ತು, ಇತರರಿಗೆ ಕಾಣಿಸುತ್ತಿರಲಿಲ್ಲ. ಆ ವಿಧವಾಗಿ ತೌರಾತ್ (ಭಗವದ್ಗೀತೆ) ಗ್ರಂಥವು ಅಲ್ಲಿನ ಮನುಷ್ಯರಿಗೆ ರಹಸ್ಯ ಗ್ರಂಥವಾಗಿದೆ. ಆ ವಿಷಯವು ಮೋಷೇಗೆ ಕೂಡಾ ಅರ್ಥವಾಗಿದೆ. ಗ್ರಂಥದಲ್ಲಿನ ಜ್ಞಾನವನ್ನು ರಾತ್ರಿಹೊತ್ತು ಓದಿಕೊಂಡು ಹಗಲು ಇತರರಿಗೆ ಹೇಳುತ್ತಿದ್ದನು. ಹೇಳುವುದು ಭಗವದ್ಗೀತೆಯಲ್ಲಿನ ಜ್ಞಾನವಾದ್ದರಿಂದ ಶಾಸ್ತ್ರಬದ್ಧವಾಗಿ ಇತ್ತು. ಜ್ಞಾನಕ್ಕೆ ಒರೆಕಲ್ಲಾಗಿ (ಸಾಣೆಕಲ್ಲಾಗಿ) ಇತ್ತು. ತೌರಾತ್ ಜ್ಞಾನದಿಂದ ಯಾವುದು ಜ್ಞಾನವೋ ಯಾವುದು ಅಜ್ಞಾನವೋ ನಿರ್ಣಯಿಸಿ ಹೇಳಿಕೊಳ್ಳುವುದಕ್ಕೆ ಅನುಕೂಲವಾಗುತ್ತಿತ್ತು. ಆದ್ದರಿಂದ ತೌರಾತ್ ಗ್ರಂಥಕ್ಕೆ **ಒರೆಕಲ್ಲು** ಎಂಬ ಹೆಸರು ಸಾರ್ಥಕವಾಗಿದೆ. ಅದೇ ಒರೆಕಲ್ಲೇ ನಮ್ಮಬಳಿ ಇರುವ ಭಗವದ್ಗೀತೆ. ಆ ದಿನಗಳಲ್ಲಿ ಮೋಷೇಗೆ ಮಾತ್ರ ಕಾಣಿಸಿ ಇತರರಿಗೆ ಕಾಣಿಸದ ಭಗವದ್ಗೀತೆ ಈದಿನ ನಮ್ಮ ಮುಂದೆ ಜ್ಞಾನಿಗಳಿಗು, ಅಜ್ಞಾನಿಗಳಿಗು ಕಾಣಿಸುತ್ತಿದೆ. ಈದಿನ ಗ್ರಂಥವು ಕಾಣಿಸಿದರೂ ಅದರಲ್ಲಿನ ಜ್ಞಾನವು ಬಹಳಜನರಿಗೆ ಕಾಣಿಸುತ್ತಿಲ್ಲ. ಅಂದರೇ ಅರ್ಥವಾಗುತ್ತಿಲ್ಲ.

ದೇವರು ಕಾಣಿಸದೇ ಎಲ್ಲೋ ಇದ್ದರೂ ಭಗವಂತನ ವೇಷದಲ್ಲಿ ಕನಸಿನಲ್ಲಿ ಕಾಣಿಸಿ ತೌರಾತ್ ಗ್ರಂಥವನ್ನು ನೇರವಾಗಿ ಕೊಟ್ಟಿದ್ದಾನೆ. ಮೊದಲಿಗೇ ತನ್ನ ಜ್ಞಾನವನ್ನು ಮೂಸಾಗೆ ಕೊಡಲಿಲ್ಲ. ತನ್ನ ಗ್ರಂಥವಾದ ತೌರಾತ್ ಗ್ರಂಥವನ್ನು ಕೊಟ್ಟಿದ್ದಾನೆ. ನಂತರ ತೌರಾತ್ ಗ್ರಂಥದಲ್ಲಿನ ಜ್ಞಾನವನ್ನು ಮೋಷೇ (ಮೂಸಾ) ತಿಳಿದುಕೊಂಡು ಇತರರಿಗೆ ತಿಳಿಸಿದ್ದಾನೆ. ದೇವರು ತನ್ನ ಧರ್ಮದ ಪ್ರಕಾರ ಮನುಷ್ಯರಿಗೆ ಜ್ಞಾನವನ್ನು ಹೇಗೆ ತಿಳಿಸಬೇಕೋ ಹಾಗೆಯೇ ತಿಳಿಸುತ್ತಾನೆ. ಮೂಸಾಗೆ ಕನಸಿನಲ್ಲಿ ಕೊಟ್ಟಿರುವ ಗ್ರಂಥವನ್ನು ಆತನು ಹೊರತು ಇತರರು ಯಾರೂ ತೌರಾತನ್ನು ನೋಡಲಿಲ್ಲ ಎಂದರೇ ಅದೇ ಗ್ರಂಥವೇ ಹೆಸರಿನ ಬದಲಾವಣೆಯಿಂದ ನಮ್ಮಬಳಿ ಇರುವುದು ನಮ್ಮ ಅದೃಷ್ಟ ಅಲ್ಲವೇ?

**ಪ್ರಶ್ನೆ :– ತೌರಾತ್ ಗ್ರಂಥವು, ನಮ್ಮಬಳಿಯಿರುವ ಭಗವದ್ಗೀತೆ ಗ್ರಂಥವು ಎರಡೂ ಒಂದೇ ಎಂದು ನೀವು ಹೇಳಿದರೇ ಪ್ರಜೆಗಳು ನಂಬುತ್ತಾರಾ?**

**ಉತ್ತರ :–** ಪ್ರಜೆಗಳು ನಂಬುತ್ತಾರಾ ನಂಬುವುದಿಲ್ಲವಾ ಎನ್ನುವುದು ದೇವರ ಅನುಗ್ರಹ ಪ್ರಜೆಗಳ ಮೇಲೆ ಇರುವುದನ್ನನುಸರಿಸಿ ಇರುತ್ತದೆ. ಪ್ರಜೆಗಳ ಶ್ರದ್ಧೆಯನ್ನು ಅನುಸರಿಸಿ ದೇವರು ಯಾವ ವಿಧವಾಗಿಯಾದರೂ ಮಾಡಬಹುದು. ಪ್ರಜೆಗಳು ನಂಬಬೇಕೆಂದರೂ ನಂಬಬಾರದೆಂದರೂ ಅದು ದೇವರ ಇಚ್ಛೆಯನ್ನು ಅನುಸರಿಸಿ ನಡೆಯುತ್ತದೆ. ನಾನು ದೇವರ ಸೇವೆ ಮಾಡುವ ನಿಮಿತ್ತ ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ. ಇತರರನ್ನು ನಂಬಿಸಬೇಕೆನ್ನುವುದು ನನ್ನ ಇಷ್ಟವಲ್ಲ. ಅದು ದೇವರ ಇಷ್ಟವನ್ನು ಅನುಸರಿಸಿ ಮನುಷ್ಯರ ಭಕ್ತಿ, ಶ್ರದ್ಧೆಗಳನ್ನು ಅನುಸರಿಸಿ ಇರುತ್ತದೆ. ಸ್ವಚ್ಛವಾದ ದೈವಜ್ಞಾನಕ್ಕೆ ಎಲ್ಲರೂ ಅರ್ಹರಲ್ಲ. ಯಾರು ಅರ್ಹರೋ ಅವರಿಗೇ ತಿಳಿಯುವುದಕ್ಕೆ ಅವಕಾಶವಿದೆ. ಈ ವಿಷಯದಲ್ಲಿ ನನ್ನ ಪಾತ್ರ ಏನೂ ಇರುವುದಿಲ್ಲ.

**ಪ್ರಶ್ನೆ :– ತೌರಾತ್ ಎಂದರೇ ದೈವಗ್ರಂಥವೆಂದು ತಿಳಿದುಹೋಗಿದೆ. ತೌಹೀದ್ ಎಂದರೇ ಏಕೇಶ್ವರೋಪಾಸನೆ ಎಂದು ಎಲ್ಲರೂ ಹೇಳುತ್ತಿದ್ದಾರೆ. ಆದು ನಿಜವೇನಾ?**

**ಉತ್ತರ :–** ಏಕೇಶ್ವರೋಪಾಸನೆ ಎನ್ನುವುದೇ ಪ್ರಪಂಚದಲ್ಲಿ ಅತಿ ದೊಡ್ಡ ಆರಾಧನೆ, ನಿಜವಾದ ದೈವಜ್ಞಾನವಾಗಿ ಲೆಕ್ಕಿಸಬಹುದು. **ಏಕ ದೈವ ಆರಾಧನೆಗಿಂತಲೂ ಮುಖ್ಯವಾದುದು ಯಾವುದೂ ಇಲ್ಲ. ತೌ** ಎಂದರೇ **ಮೂರು** ಎಂದೂ, ತೌರಾತ್ ಎಂದರೇ ಮೂರು ಕತ್ತಲೆಯ ರಾತ್ರಿಗಳೆಂದು ಹೇಳಿಕೊಂಡಿದ್ದೇವೆ. ಈಗ **ತೌಹೀದ್** ಎನ್ನುವುದರಲ್ಲಿ **ಏಕೇಶ್ವರೋಪಾಸನೆ** ಎನ್ನುವುದರಲ್ಲಿ ತಪ್ಪಿಲ್ಲ ಆದರೇ ತೌರಾತ್ ಎಂದು ಹೇಳಿದಾಗ ತೌ ಎಂದರೇ ಮೂರು ಎಂದೂ, ರಾತ್ ಎಂದರೇ ರಾತ್ರಿಗಳೆಂದು ಹೇಳಿದ್ದೇವೆ. ಅದೇ ವಿಧಾನದ ಪ್ರಕಾರ ಹೇಳಿದರೇ ತೌ ಎಂದರೇ ಮೂರು ಎಂದು ಹೇಳಬೇಕಾಗಿರುತ್ತದೆ. ತೌಹೀದ್ ಎಂದರೇ ಮೂರು ಕಾಣಿಸದಿರುವವು ಎಂದೂ, ಮೂರು ಆತ್ಮಗಳು ಎಂದೂ ಹೇಳಬಹುದು. ತೌರಾತ್ ಎಂದರೇ ಮೂರು ರಾತ್ರಿಗಳು ಎಂದು ಹೇಳಿಕೊಂಡಿದ್ದೇವೆ. ಸುಮಾರು

ತೌರಾತ್ ಅರ್ಥವನ್ನೇ ತೌಹೀದ್ ಹೇಳುತ್ತಿದೆ. ಮೂರು ಕಾಣಿಸದಿರುವವು ಆತ್ಮಗಳೇಯೆಂದು ಹೇಳಬಹುದು. ತೌರಾತ್ ಎಂದರೇ ಮೂರು ರಾತ್ರಿಗಳು ಎಂದು ಹೇಳಿದ್ದೇವೆ ಅಲ್ಲವೇ! ತೌಹೀದ್ ಎಂದರೇ ಮೂರು ಕಾಣಿಸದಿರುವು ದೆಂದು ಹೇಳುವಾಗ, ಕಾಣಿಸದಿರುವವು ಮೂರು ಯಾವುವು? ಎನ್ನುವ ಪ್ರಶ್ನೆ ಬರಬಹುದು. ತೌಹೀದ್‌ಗಿಂತಲೂ ಮೊದಲು ತೌರಾತ್ ವಿಷಯವನ್ನು ತಿಳಿದುಕೊಂಡರೇ ನಂತರ ತೌಹೀದ್ ವಿಷಯವು ತಿಳಿಯಬಲ್ಲದು. ಆಧ್ಯಾತ್ಮಿಕ ವಿಷಯವನ್ನು ಹೊರಗಿನ ಪ್ರಪಂಚದೊಂದಿಗೆ ಹೋಲಿಸಿಕೊಳ್ಳಬಾರ ದೆಂದು ಮರೆಯಬಾರದು. ಅದರಲ್ಲಿ ಅಡಗಿರುವ ನಿಗೂಢ ವಿಷಯಗಳನ್ನು ತಿಳಿಯಬೇಕು.

ರಾತ್ರಿಗಳೆಲ್ಲ ಕತ್ತಲೆಯಿಂದ ಕೂಡಿಕೊಂಡಿರುವವೇ ಆದರೂ **ಕೆಲವು ರಾತ್ರಿಗಳು ನಿದ್ದೆಬಾರದೆ ಎಚ್ಚರಿಕೆಯಿಂದ ಕೂಡಿಕೊಂಡಿರುತ್ತವೆ. ಕೆಲವು ರಾತ್ರಿಗಳು ಕನಸಿನಿಂದ ಕೂಡಿಕೊಂಡು ನಿದ್ದೆಯಲ್ಲದೇ ಎಚ್ಚರಿಕೆಯಲ್ಲದೇ ಇರುತ್ತವೆ. ಕೆಲವು ರಾತ್ರಿಗಳು ಪೂರ್ತಿ ನಿದ್ದೆಯಿಂದ ಕೂಡಿಕೊಂಡಿರುತ್ತವೆ.** ಈ ವಿಧವಾಗಿ ಮೂರು ವಿಧಗಳ ರಾತ್ರಿಗಳಿವೆ. ಎಚ್ಚರಿಕೆಯಿಂದ ಕೂಡಿಕೊಂಡಿರುವ ರಾತ್ರಿ **ಜೀವಾತ್ಮಗೆ** ಗುರುತಾಗಿ ಇದೆಯೆಂದು ತಿಳಿಯುಬೇಕು. ಹಾಗೆಯೇ ಕನಸಿನಿಂದ ಕೂಡಿಕೊಂಡಿರುವ ರಾತ್ರಿ **ಆತ್ಮಗೆ** ಗುರುತಾಗಿ ಇದೆ. ಪೂರ್ತಿ ನಿದ್ದೆಯಿಂದ ಕೂಡಿಕೊಂಡಿರುವ ರಾತ್ರಿ **ಪರಮಾತ್ಮಗೆ** ಗುರುತಾಗಿದೆಯೆಂದು ಹೇಳಬಹುದು. ಮೂರು ಕತ್ತಲೆ ರಾತ್ರಿಗಳೇ ಆಗಿರುವುದರಿಂದ ಮೂರು ರಾತ್ರಿಗಳು ಮೂರು ಆತ್ಮಗಳಿಗೆ ಗುರುತಾಗಿ ಹೇಳುವುದಾಗಿದೆ. ಮೂರು ಕತ್ತಲೆಯ ರಾತ್ರಿಗಳಲ್ಲಿ ಏನೂ ಕಾಣಿಸುವುದಿಲ್ಲ, ಆದ್ದರಿಂದ ಮೂರು ರಾತ್ರಿಗಳನ್ನು ಮೂರು ಕಾಣಿಸದ (ತಿಳಿಯದ) ಆತ್ಮಗಳಾಗಿ ಹೇಳಿದ್ದೇವೆ. ಮೂರು ಆತ್ಮಗಳು ಒಂದೇ ಅಲ್ಲದೇ **ಮೂರು ಆತ್ಮಗಳಲ್ಲಿ ಕರ್ಮವನ್ನು ಅನುಭವಿಸುವ ಜೀವಾತ್ಮನನ್ನು ಎಚ್ಚರಿಕೆ ರಾತ್ರಿಯಾಗಿ ಹೇಳಿದ್ದೇವೆ. ಹಾಗೆಯೇ ಕರ್ಮವನ್ನು ಅನುಭವಿಸುವಂತೆ ಮಾಡುವ ಆತ್ಮನನ್ನು ಮಧ್ಯಾತ್ಮವಾಗಿ ಹೇಳುತ್ತಾ ಕನಸಿನ ರಾತ್ರಿಯೊಂದಿಗೆ ಹೋಲಿಸಿ ಹೇಳಿದ್ದೇವೆ. ಅನುಭವಿಸುವ ಜೀವಾತ್ಮಗಿಂತಲೂ, ಅನುಭವಿಸುವಂತೆ ಮಾಡುವ**

**ಆತ್ಮಗಿಂತಲೂ ಬೇರೆಯಾಗಿದ್ದು ನೋಡುತ್ತಾ ಸಾಕ್ಷಿಯಾಗಿರುವ ಪರಮಾತ್ಮನನ್ನು (ದೇವರನ್ನು) ಪೂರ್ತಿ ನಿದ್ದೆಯಿಂದ ತುಂಬಿದ ರಾತ್ರಿಯಾಗಿ ಹೇಳಿದ್ದೇವೆ.** ಮೂರು ರಾತ್ರಿಗಳಲ್ಲಿಯೂ ವ್ಯತ್ಯಾಸ ಇದ್ದಹಾಗೆಯೇ, ಮೂರು ಆತ್ಮಗಳಲ್ಲಿಯೂ ವ್ಯತ್ಯಾಸವಿದೆ. ಮಧ್ಯದಲ್ಲಿ ಕನಸು ನಿಜವಲ್ಲ, ಸುಳ್ಳಲ್ಲ ಎನ್ನುವಂತಿರುತ್ತದೆ. ಕನಸನ್ನು ನಿಜವೆಂದು ನಿರೂಪಿಸಲಾರರು. ಹಾಗೆಯೇ ಸುಳ್ಳೆಂದು (ಅಬದ್ಧ) ಕೂಡಾ ನಿರೂಪಿಸಲಾರರು. ಹಾಗೆಯೇ ಅತ್ಮನನ್ನು ಯಾವಕಡೆಗೂ ನಿರ್ಣಯಿಸಿ ಹೇಳಲಾರೆವು. ಆತ್ಮ ಕೆಲವರಿಗೆ ತಿಳಿದಹಾಗೆಯೇ ಇರುತ್ತದೆ, ಸ್ವಲ್ಪವಾದರೂ ತಿಳಿದಿರುವುದಿಲ್ಲ. ಹಾಗೆಯೇ ಸ್ವಲ್ಪವಾದರೂ ತಿಳಿಯದಂತೆಯೇ ಇರುತ್ತದೆ, ವಾಸ್ತವಕ್ಕೆ ತಿಳಿದೇ ಇರುತ್ತದೆ. ಆದರೂ ಯಾರೂ ಯಾವಕಡೆಗು ನಿರ್ಣಯಿಸಿ ಹೇಳುವುದಕ್ಕೆ ಸಾಧ್ಯವಿಲ್ಲ.

ಜೀವಾತ್ಮ ಕರ್ಮವನ್ನು ಅನುಭವಿಸುವುದೆ ತನ್ನ ಧ್ಯೇಯವಾಗಿ ಇದೆ. ಕರ್ಮದಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಸ್ವಲ್ಪವೂ ಮಾಡದೇ, ಕರ್ಮವನ್ನು ತಪ್ಪಿಸಿಕೊಳ್ಳುವ ಅವಕಾಶವಿದ್ದರೂ, ಆ ಅವಕಾಶವನ್ನು ವಿನಿಯೋಗಿಸಿಕೊಳ್ಳದೆ ಅನುಭವಗಳಲ್ಲಿಯೇ ಸಿಲುಕಿಕೊಂಡಿದೆ. ಆದ್ದರಿಂದ ಜೀವಾತ್ಮನನ್ನು ಎಚ್ಚರಿಕೆ ರಾತ್ರಿಯಾಗಿ ಹೇಳಿದ್ದೇವೆ. ಎಚ್ಚರಿಕೆ ರಾತ್ರಿಯಲ್ಲಿ ಎಂದರೇ ನಿದ್ದೆಬರದ ರಾತ್ರಿಯಲ್ಲಿ ನಿದ್ದೆ ಹೋಗುವುದಕ್ಕೆ ಅವಕಾಶವಿದೆ. ಹೇಗೆಂದರೇ ನಿದ್ದೆ ಬರುವುದಕ್ಕೆ ಬೇಕಾಗಿರುವ ನಿದ್ದೆ ಔಷಧಿ ಇದೆ. ಕೆಲವರು ನಿದ್ದೆ ಔಷಧಿ ಉಪಯೋಗಿಸಿ ಎಚ್ಚರಿಕೆಯ ರಾತ್ರಿಯಲ್ಲಿ ಕೂಡಾ ನಿದ್ದೆ ಹೋಗುವವರಿದ್ದಾರೆ. ಎಚ್ಚರಿಕೆಯ ರಾತ್ರಿ ಕರ್ಮ ಅನುಭವಕ್ಕೆ ಗುರುತಾಗಿ, ಕರ್ಮವನ್ನು ಅನುಭವಿಸುವ ಜೀವಿಗೆ ಗುರುತಾಗಿದೆ. ಜ್ಞಾನವೆಂಬ ನಿದ್ದೆ ಔಷಧಿಯನ್ನು ಸಂಪಾದಿಸಿಕೊಂಡವರು ಎಚ್ಚರವಾಗಿದ್ದು ಕರ್ಮವನ್ನು ಅನುಭವಿಸದೆ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿದೆ. ಹಾಗೆ ತಪ್ಪಿಸಿಕೊಳ್ಳುವವರು ಕೂಡಾ ಇದ್ದಾರೆ. ಜ್ಞಾನದಿಂದ ಕರ್ಮವನ್ನು ತಪ್ಪಿಸಿಕೊಳ್ಳ ಬಹುದೆಂದು ದೇವರೇ ತನ್ನ ಬೋಧನೆಯಲ್ಲಿ ಹೇಳಿದ್ದಾನೆ. ಆದರೂ ಅತ್ತ ಮನುಷ್ಯ ತನ್ನ ಗಮನವಿಡಲಿಲ್ಲ. ತನ್ನ ಕರ್ಮವನ್ನು ತಾನು ಮುಂದು

ವರೆಸುತ್ತಿದ್ದಾನೆ. ತಾನು ಕರ್ಮವನ್ನು ಅನುಭವಿಸುತ್ತಿದ್ದೇನೆಂಬ ಗಮನ ಕೂಡಾ ಮನುಷ್ಯನಿಗಿಲ್ಲ. ನಾನು ಜೀವಿಯೆಂದು ಕೂಡಾ ತನಗೆ ತಿಳಿಯದ ಸ್ಥಿತಿಯಲ್ಲಿ ಮನುಷ್ಯ ಬದುಕುತ್ತಿದ್ದಾನೆ. ಎಚ್ಚರದಲ್ಲಿ ಮನುಷ್ಯ ಪ್ರಪಂಚ ವಿಷಯಗಳ ಜ್ಞಾಪಕದಲ್ಲಿರುವಂತೆ ಮನುಷ್ಯ ಪ್ರಕೃತಿ ಸಂಬಂಧ ಆಲೋಚನೆಗಳನ್ನು ಹೊರತು ಪರಮಾತ್ಮ ಸಂಬಂಧ ಆಲೋಚನೆಗಳನ್ನು ಮಾಡುತ್ತಿಲ್ಲ. ಆದ್ದರಿಂದ ಪ್ರಪಂಚ ವಿಷಯಗಳಲ್ಲಿ ಆಸಕ್ತನಾದ ಮನುಷ್ಯನನ್ನು ಎಚ್ಚರಿಕೆಯ ರಾತ್ರಿಯೊಂದಿಗೆ ಸಮಾನವಾಗಿ ಹೋಲಿಸಿ ಹೇಳಿರುವುದಾಗಿದೆ.

ಜೀವಾತ್ಮಗು ಪರಮಾತ್ಮಗು ಮಧ್ಯದಲ್ಲಿ ಆತ್ಮವಿದೆ. ಜೀವಾತ್ಮ ಪೂರ್ತಿ ಎಚ್ಚರಿಕೆಯ ರಾತ್ರಿಯಾಗಿ ಹೋಲಿಸಿದರೇ ಪರಮಾತ್ಮನನ್ನು ಪೂರ್ತಿ ನಿದ್ದೆ ರಾತ್ರಿಯಾಗಿ ಹೋಲಿಸಿ ಹೇಳಿರುವುದಾಗಿದೆ. ಜೀವಿಗೆ ಪೂರ್ತಿ ವಿರುದ್ಧ ದಿಕ್ಕಿಯಲ್ಲಿ ದೇವರಿದ್ದಾನೆ. ದೇವರಿಗೆ ಎಲ್ಲಾ ಮಾಡಬಲ್ಲ ಸಾಮರ್ಥ್ಯವಿದ್ದರೂ ಆತನ ಧರ್ಮದ ಪ್ರಕಾರ ಆತನು ಏನೂ ಮಾಡುವುದಿಲ್ಲ. ಜೀವಿಯು ಮಾಡುತ್ತಿರುವಾಗ, ಆತ್ಮ ಮಾಡಿಸುತ್ತಿರುವಾಗ, ಪರಮಾತ್ಮ ಎರಡಕ್ಕೂ ಬೇರೆಯಾಗಿ ನೋಡುತ್ತಿದ್ದಾನೆ. ಜೀವಿಯು ಸುಮ್ಮನಿರದೆ ಯಾವುದೋ ಒಂದು ಅನುಭವಿಸುತ್ತಿದ್ದಾನೆ. ದೇವರು ಏನೂ ಅನುಭವಿಸದೆ ಇದ್ದಾನೆ. ಜೀವಿಗೆ ದೇವರಿಗೆ ಮಧ್ಯದಲ್ಲಿ ಆತ್ಮ ತಾನು ಒಂದು ಕ್ಷಣವು ಕೂಡಾ ಸುಮ್ಮನಿರದೆ ತನ್ನ ದೃಷ್ಠಿಯನ್ನು ಜೀವಿಯ ಕರ್ಮದ ಮೇಲೆ ಇಟ್ಟು, ಕ್ಷಣ ಕ್ಷಣವು ಕರ್ಮವನ್ನು ಜಾರಿ ಮಾಡುತ್ತಾ ಜೀವಿಯನ್ನು ಪ್ರತಿ ಕ್ಷಣ ಕರ್ಮವನ್ನು ಅನುಭವಿಸುವಂತೆ ಮಾಡುತ್ತಿದ್ದಾನೆ. ಶರೀರಕ್ಕೆಲ್ಲ ದೊಡ್ಡದಾಗಿದ್ದು ಪ್ರತಿ ಅವಯವಕ್ಕು ಶಕ್ತಿಕೊಟ್ಟು ಕದಲಿಸುವ ಚೈತನ್ಯವಾಗಿದ್ದಾನೆ. ಆತ್ಮವನ್ನು ನಿಜವೆಂದು ಹೇಳಲು ಬಯಸಿದರೇ ಸುಳ್ಳಾಗಿ (ಅಬದ್ಧವಾಗಿ) ಕಾಣಿಸುತ್ತಾನೆ. ಸುಳ್ಳೆಂದು ಹೇಳಲು ಬಯಸಿದರೇ ನಿಜವಾಗಿ ಕಾಣಿಸುತ್ತಾನೆ. ಆತ್ಮವನ್ನು ಶರೀರದಲ್ಲಿ ಇದೆಯೆಂದು ಹೇಳುವುದಕ್ಕೆ ಎಷ್ಟು ಆಧಾರಗಳಿವೆಯೋ, ಶರೀರದಲ್ಲಿಲ್ಲವೆಂದು ಹೇಳುವುದಕ್ಕೆ ಅಷ್ಟು ಆಧಾರಗಳಿವೆ. ಆದ್ದರಿಂದ ಆತ್ಮ ವಿಷಯದಲ್ಲಿ ಎಲ್ಲರೂ ಹಿಂದೆಜ್ಜೆ ಹಾಕುತ್ತಿದ್ದಾರೆ.

ಶರೀರದಲ್ಲಿರುವ ಆತ್ಮವನ್ನು ಸತ್ಯವೆಂದಾಗಲೀ, ಅಸತ್ಯವೆಂದಾಗಲೀ ಹೇಳುವುದಕ್ಕೆ ಅವಕಾಶವಿಲ್ಲದಂತಿರುವುದರಿಂದ ಆತ್ಮವನ್ನು ಸ್ವಪ್ನಗಳ ರಾತ್ರಿಯಾಗಿ ಹೋಲಿಸಿ ಹೇಳುವುದು ನಡೆದಿದೆ. ಸ್ವಪ್ನ ವಿಷಯದಲ್ಲಿ ಭಯಪಟ್ಟವನು ಎಚ್ಚರವಾದರೂ ಆ ಭಯ ಹೋಗಲಿಲ್ಲ. ಆದ್ದರಿಂದ ಭಯಪಟ್ಟ ಸಂಘಟನೆ ವಾಸ್ತವವೇ ಆದರೂ ಎಚ್ಚರಿಕೆಯೊಳಗೆ ಬರುವ ಸಮಯಕ್ಕೆ ಭಯಪಟ್ಟ ಸಂಘಟನೆವೊಂದರ ಪರಿಸ್ಥಿತಿ ಅಲ್ಲಿಲ್ಲ. ಉದಾಹರಣೆಗೆ ಮನೆಯಲ್ಲಿ ಕಳ್ಳರುಬಂದು ದೋಚಿಕೊಳ್ಳುತ್ತಿದ್ದಾರೆ. ಆ ಸಮಯದಲ್ಲಿ ಎಚ್ಚರ ಬಂದು ನೋಡಿ ಕಳ್ಳರೆಂದು ಜೋರಾಗಿ ಕಿರುಚಿದಾಗ ಕಳ್ಳ ಹಲ್ಲೆ ಮಾಡಿ ಚಾಕುವಿನಿಂದ ಇರಿದನು ಆಗ ಭಯಪಟ್ಟಿರುವುದರಿಂದ ಕೂಡಲೇ ಎಚ್ಚರದೊಳಗೆ ಬರುವುದು ನಡೆದಿದೆ. ಎಚ್ಚರವಾದ ನಂತರ ಕೂಡಾ ಹತ್ತು ನಿಮಿಷಗಳು ಭಯ ಹೋಗಲಿಲ್ಲ. ಸಂಘಟನೆಯಿಂದಲೇ ಭಯವಿರುವುದರಿಂದ ಅದು ನಡೆದಿದೆ ಎನ್ನುವುದಕ್ಕೆ ಆಧಾರವಿದೆ. ಎಚ್ಚರದೊಳಗೆ ಬಂದ ನಂತರ ಕಳ್ಳನಿಲ್ಲ, ಕಳ್ಳತನ ನಡೆದಿಲ್ಲ. ಕಳ್ಳತನ ನಡೆದ ಸುಳಿವು ಇಲ್ಲ. ಆದ್ದರಿಂದ ಕಳ್ಳತನ ನಡೆಯಲಿಲ್ಲವೆಂದು ಹೇಳಬಹುದು. ಜ್ಞಾಪಕ ಬಂದ ನಂತರ ಕೂಡಾ ಭಯವಿರುವುದರಿಂದ ಕಳ್ಳತನ ವಾಸ್ತವವೇ ಎನ್ನುವಂತಿದ್ದರೂ, ಅದರ ಸುಳಿವೇ ಇಲ್ಲದಿರುವುದರಿಂದ ಕಳ್ಳತನ ವಾಸ್ತವವಲ್ಲ ಎಂದು ಹೇಳಬಹುದು. ಈ ವಿಧವಾಗಿ ಕನಸು ಒಂದು ಕಡೆ ಸತ್ಯವನ್ನು, ಮತ್ತೊಂದುಕಡೆ ಅಸತ್ಯವನ್ನು ಹೊಂದಿರುತ್ತದೆ. ನಮ್ಮ ಶರೀರದಲ್ಲಿನ ಮಧ್ಯಾತ್ಮ ಕೂಡಾ ಕನಸಿನಹಾಗೆ ಎಲ್ಲ ಕೆಲಸಗಳು ತಾನೇ ಮಾಡುತ್ತಿದ್ದರೂ ಏನೂ ಮಾಡದಿರುವಂತೆ ಇದೆ. ಒಂದುಕಡೆ ಶರೀರದಲ್ಲಿ ಆತ್ಮ ಎಲ್ಲಾ ದೇವರೇ ಮಾಡುತ್ತಿದ್ದಾನೆಂದು ಹೇಳುತ್ತದೆ. ಮತ್ತೊಂದು ಸಲ ಎಲ್ಲಾ ಕೆಲಸಗಳು ನಾನೇ ಮಾಡುತ್ತಿದ್ದೇನೆಂದು ಹೇಳುವುದು. ಮತ್ತೊಂದುಬಾರಿ ಜೀವಿಯೇ ಮಾಡಿದ್ದಾ ನೆಂದು ಹೇಳುತ್ತದೆ. ಯಾವುದು ಒಂದು ನಿರ್ಧಾರವಿಲ್ಲದ ವಿಧದಲ್ಲಿ ಆತ್ಮವಿರುವುದರಿಂದ ಆತ್ಮನನ್ನು ಸತ್ಯಾಸತ್ಯಗಳಿಗೆ ದೊರೆಯದ ಕನಸಿನಹಾಗೆ ಹೇಳುತ್ತಿದ್ದೇವೆ.

ಈ ವಿಧವಾಗಿ ಜೀವಾತ್ಮ, ಆತ್ಮ, ಪರಮಾತ್ಮ ಮೂರು ಆತ್ಮಗಳನ್ನು ಮೂರು ರಾತ್ರಿಗಳಾಗಿ ಹೋಲಿಸಿ ಹೇಳಿದ್ದಾರೆ. ಮೂರು ಆತ್ಮಗಳ ಜ್ಞಾನವಿರುವ ಗ್ರಂಥವು ಭಗವದ್ಗೀತೆ. ಭಗವದ್ಗೀತೆ ಮೊದಲು ತಯಾರಾದ ದೈವಗ್ರಂಥ. ಆದರೂ ಭಗವದ್ಗೀತೆಯೆನ್ನುವ ಹೆಸರನ್ನು ಮನುಷ್ಯರು ಅದಕ್ಕೆ ಇಟ್ಟಿದ್ದಾರೆ. ಆ ಹೆಸರು ಗ್ರಂಥದಲ್ಲಿನ ಜ್ಞಾನಕ್ಕೆ ತಕ್ಕಹಾಗಿಲ್ಲ. ಭಗವಂತನು ಹೇಳಿರುವುದೆಂದು ವ್ಯಾಸನು ಗ್ರಂಥದಲ್ಲಿ **'ಭಗವಾನುವಾಚ'** ಎಂದು ಗ್ರಂಥದಲ್ಲಿ ಬರೆದರೂ ವ್ಯಾಸನಿಗೆ ಕೃಷ್ಣನು ಭಗವಂತನೆನ್ನುವ ನಂಬಿಕೆ ಇಲ್ಲ. ಆದರೂ ಭಗವದ್ಗೀತೆ ಎಂಬ ಹೆಸರು ಆತನು (ಕೃಷ್ಣನು) ಹೊರಗೆ ಹೇಳಲು ಬಯಸಲಿಲ್ಲ. ಭಗವದ್ಗೀತೆಯಲ್ಲಿ ಮೂರು ಆತ್ಮಗಳ ಜ್ಞಾನವಿರುವುದರಿಂದ ಭಗವದ್ಗೀತೆಯನ್ನು ತೌರಾತ್ ಗ್ರಂಥವೆಂದು ಹೇಳಿ ಕೃಷ್ಣನು ಮೂಸಾಗೆ ಕೊಟ್ಟಿದ್ದಾನೆ. ಮೂಸಾಗೆ (ಮೋಷೇಗೆ) ಕೊಟ್ಟಿರುವವನು ಕೃಷ್ಣನು ಎಂದಾಗಲೀ, ಭಗವಂತನೆಂದಾಗಲೀ ಏನೂ ತಿಳಿದಿಲ್ಲ. ಕೊಟ್ಟಿರುವ ಗ್ರಂಥವು ಭಗವದ್ಗೀತೆ ಎಂದಾಗಲೀ ಮೂಸಾಗೆ ತಿಳಿದಿಲ್ಲ. ಮೂಸಾಗೆ ಕೃಷ್ಣನು ಭಗವದ್ಗೀತೆಯನ್ನು ತೌರಾತ್ ಎಂದು ಹೆಸರಿಟ್ಟು ಕೊಟ್ಟಿದ್ದಾನೆಂದು ಉಳಿದ ಮನುಷ್ಯರಿಗೆ ಕೂಡಾ ತಿಳಿದಿಲ್ಲ.

ಮೂಸಾಗೆ ಅಲ್ಲಾಹ್ (ದೇವರು) ಜ್ಞಾನವನ್ನು ಸ್ವತಃವಾಗಿ ಕೊಡಲಿಲ್ಲ. ದೇವರು ಆಗ ಮನುಷ್ಯ ರೂಪದಲ್ಲಿ ಇರುವುದರಿಂದ ಕನಸಿನಲ್ಲಿ ತೌರಾತ್ ಗ್ರಂಥವನ್ನು ಕೊಡುವುದಕ್ಕೆ ಸಾಧ್ಯವಾಯಿತು. ಕನಸು ಸತ್ಯ ಅಸತ್ಯಗಳ ಸೇರುವಿಕೆ ಆದಕಾರಣ ಕೊಟ್ಟಿರುವುದು ತೌರಾತ್ ಆದರೂ ಅದು ಮೂಸಾಗೆ ಒಬ್ಬನಿಗೇ ಕಾಣಿಸುತ್ತಿತ್ತು. ಅಂದಿನ ಪ್ರಜೆಗಳಿಗಾಗಲೀ, ಇಂದಿನ ಮನುಷ್ಯರಿಗಾಗಲೀ ಮೂಸಾಗೆ ಕೊಡಲಾಗಿರುವುದು ಭಗವದ್ಗೀತೆಯೆಂದು, ಅದನ್ನು ತೌರಾತ್ ಹೆಸರಿನಿಂದ ಕೃಷ್ಣನೇ ಕೊಟ್ಟಿದ್ದಾನೆಂದು ನಂಬುವುದು ಈಗ ಅವಶ್ಯವಿಲ್ಲ ಆದರೇ, ಅದು ದೇವರ ನಂತರ ಜನ್ಮವಾದ ಯೇಸು ಜೀವನದಲ್ಲಿ ಇದು ತಿಳಿಯುವುದು ಅವಶ್ಯಕ. ನಡೆದುಹೋಗಿರುವ ವಿಷಯವು ತಿಳಿಯುವುದರಿಂದ ಅಂದಿನ ಜ್ಞಾನಕ್ಕೆ ಸಾಕ್ಷ್ಯ ದೊರೆಯುವುದು. ಆದ್ದರಿಂದ ಆ ವಿಷಯವನ್ನು ಈಗಲೇ ಹೇಳಿದ್ದೇವೆ.

ಮೂರು ಆತ್ಮಗಳ ಜ್ಞಾನಚಿಹ್ನೆ ಎಂದು ತಿಳಿಸುವ ನಿಮಿತ್ತ ಮೂಸಾಗೆ ಕೊಡಲಾದ ಗ್ರಂಥದ ಹೆಸರು ತೌರಾತ್ ಎಂದು ಹೇಳಿದ್ದಾರೆ. ಮೂರು ಆತ್ಮಗಳಲ್ಲಿ ಜೀವಾತ್ಮದಿಂದ ಪರಮಾತ್ಮದವರೆಗು ಎಷ್ಟೋ ವ್ಯತ್ಯಾಸ ಇರುವುದರಿಂದ ಮೂರು ಆತ್ಮಗಳನ್ನು ಮೂರು ವಿಭಿನ್ನವಾದ ರಾತ್ರಿಗಳೊಂದಿಗೆ ಹೋಲಿಸುವುದಾಗಿದೆ. ಎಚ್ಚರದ ರಾತ್ರಿ, ಕನಸಿನ ರಾತ್ರಿ, ನಿದ್ದೆಯರಾತ್ರಿಗೆ ಎಷ್ಟು ವ್ಯತ್ಯಾಸಗಳಿವೆಯೋ ಅಷ್ಟೇ ವ್ಯತ್ಯಾಸಗಳು ಮೂರು ಆತ್ಮಗಳಲ್ಲಿ ಇರುವಂತೆ ಇದಕ್ಕು ಮೊದಲೇ ತಿಳಿದಿದ್ದೇವೆ. ಇದು ತೌರಾತ್ ಹೆಸರಿನೊಂದರ ವಿಶೇಷವಾಗಿರುವಾಗ, ಇದನ್ನು ಅನುಸರಿಸಿ 'ತೌಹೀದ್' ಪದವು ಕೂಡಾ ಹುಟ್ಟಿಬಂದಿದೆ.

ತೌಹೀದ್ ಎಂದರೇ ಮುಸ್ಲಿಮ್‌ರೆಲ್ಲರಿಗೂ ತಿಳಿದ ವಿವರದ ಪ್ರಕಾರ ಏಕೇಶ್ವರೋಪಾಸನೆಯನ್ನು ತೌಹೀದ್ ಎಂದು ಕರೆಯುತ್ತಾರೆ. ಏಕ ದೈವ ಆರಾಧನೆ ಎನ್ನುವುದು ವಾಸ್ತವವೇ ಆದರೂ, ಆ ಹೆಸರಿನಲ್ಲಿ ಯಾವ ವಿಧವಾಗಿ ಆ ಅರ್ಥವು ಬಂದಿದೆಯೋ ವಿವರಿಸಿ ನೋಡಿಕೊಳ್ಳಬೇಕಾಗಿರುವ ಅವಶ್ಯವಿದೆ. ಕೇವಲ ಅರ್ಥ ತಿಳಿಯುವುದಕ್ಕಿಂತಲೂ ಅರ್ಥದ ಹಿಂದೆ ಅಡಗಿರುವ ವಿವರವನ್ನು ತಿಳಿದರೇ ಅರ್ಥಕ್ಕೆ ಬೆಲೆ ಹೆಚ್ಚಾಗುವುದು. ಆದ್ದರಿಂದ ತೌಹೀದ್ ಪದವೊಂದರ ಅರ್ಥ ಏಕೇಶ್ವರೋಪಾಸನೆ ಅಥವಾ ಒಂದೇ ದೇವರ ಆರಾಧನೆ ಎಂದಿರುವುದನ್ನು ನೋಡಿದರೇ ಈ ವಿಧವಾಗಿ ಆ ಅರ್ಥ ಹುಟ್ಟಿಬಂದಿದೆಯೆಂದು ಅಂದು ಕೊಳ್ಳುತ್ತೇನೆ. ತೌರಾತ್ ಪದದಲ್ಲಿ **ತೌ** ಎಂದರೇ ಮೂರು ಎಂದು ಅರ್ಥವಿರುವಹಾಗೆ ತೌಹೀದ್ ಪದದಲ್ಲಿ ಕೂಡಾ ತೌ ಎಂದರೇ ಮೂರು ಎಂದೇ ಅರ್ಥ. ತೌಹೀದ್‌ನಲ್ಲಿ ತೌ+ಹೀದ್ ಎನ್ನುವ ಎರಡು ಶಬ್ಧಗಳಿವೆ. ಮೊದಲ ಅಕ್ಷರಕ್ಕೆ ಅರ್ಥ ಮೂರು ಎಂದು ಹೇಳಲ್ಪಟ್ಟಿದೆ. ನಂತರವಿರುವ 'ಹೀದ್' ಎನ್ನುವ ಶಬ್ದದಲ್ಲಿ 'ಹೀ' ಎನ್ನುವುದು ಅರ್ಥದಿಂದ ಕೂಡಿಕೊಂಡಿರುವ ಶಬ್ದವಾಗಿರುವಾಗ 'ದ್' ಎನ್ನುವ ಶಬ್ದವು ಬೆಲೆ ಇಲ್ಲದಿರುವುದು. ಮುಕ್ತಾಯಕ್ಕೆ ಯಾವ ಶಬ್ದವನ್ನಾದರೂ ಇರಿಸಿಕೊಳ್ಳಬಹುದು. ತೌಹೀದ್‌ನಲ್ಲಿ 'ತೌಹೀ' ಎನ್ನುವ

ಎರಡು ಅಕ್ಷರಗಳಿಗೇ ಬೆಲೆ ಅರ್ಥವಿದೆ. ಹೀ ಅಥವಾ ಹಿದ್ ಎನ್ನುವ ಶಬ್ಧಕ್ಕೆ **'ಶಕ್ತಿ'** ಎಂದು ಅರ್ಥವಿದೆ. 'ಹೀ' ಎನ್ನುವ ಅಕ್ಷರವು ಶಕ್ತಿಗೆ ಗುರುತು. ಹೀದ್ ಎಂದರೇ ಶಕ್ತಿಗಳೆಂದು ಹೇಳಬಹುದು. **ತೌಹೀದ್ ಎಂದರೇ ಮೂರು ಶಕ್ತಿಗಳು** ಎಂದು ಅರ್ಥ. ಶಕ್ತಿ ಕಾಣಿಸುವುದಿಲ್ಲ ಆದ್ದರಿಂದ ಕಾಣಿಸದ ಶಕ್ತಿಗಳೆಂದು ಹೇಳಿದ್ದಾರೆ. ತೌಹೀದ್‌ನಲ್ಲಿ ಮೂರು ಕಾಣಿಸದ ಶಕ್ತಿಗಳು ಇವೆ. ಶಕ್ತಿಗೆ ಮತ್ತೊಂದು ಹೆಸರಾಗಿ ಪುರುಷನೆಂದು ಕೂಡಾ ಹೇಳಬಹುದು. ತೌಹೀದ್ ಎಂದರೇ ಮೂರು ಶಕ್ತಿಗಳು ಅಥವಾ ಮೂವರು ಪುರುಷರೆಂದು ಹೇಳಬಹುದು. ಮೂರು ಕಾಣಿಸದ ಶಕ್ತಿಗಳನ್ನೇ ಮೂವರು ಕಾಣಿಸದ ಪುರುಷರಾಗಿ ಹೇಳುತ್ತಿದ್ದೇವೆ. ಮೂವರು ಪುರುಷರನ್ನೇ ಮೂರು ಆತ್ಮಗಳೆಂದು ಅನ್ನುತ್ತಿದ್ದೇವೆ. **ತೌಹೀದ್ ಎಂದರೇ ಮೂರು ಶಕ್ತಿಗಳೆಂದೂ, ಮೂರು ಆತ್ಮಗಳೆಂದೂ, ಮೂವರು ಪುರುಷರೆಂದೂ ಹೇಳಬಹುದು**. ಆ ಮೂವರ ಪುರುಷರಲ್ಲಿ ಯಾರು ದೊಡ್ಡವ, ಯಾರು ಚಿಕ್ಕವನೆಂದು ನಿರ್ಣಯಿಸಿ ಹೇಳುವುದಕ್ಕೆ ಒರೆಕಲ್ಲು ಅವಶ್ಯಕವಾದುದು.

ಮೂಸಾಗೆ ಅಲ್ಲಾಹ್ ಕೊಟ್ಟಿರುವ ಒರೆಕಲ್ಲಿನ ಪ್ರಕಾರ ನೋಡಿದರೇ ಮೂಸಾ ಗ್ರಂಥದಲ್ಲಿ (ಭಗವದ್ಗೀತೆಯಲ್ಲಿ) ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯವನ್ನು ನೋಡಿದರೇ ಅದರಲ್ಲಿ 16ನೇ ಶ್ಲೋಕದಲ್ಲಿ, 17ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ ನೋಡಿರಿ.

**ಶ್ಲೋ॥ 16.** **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ।**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥**

**ಭಾವಾರ್ಥ :-** "ಲೋಕದಲ್ಲಿ ಇರುವ ಪುರುಷರಲ್ಲಿ (ಆತ್ಮಗಳಲ್ಲಿ) ಎರಡು ವಿಧದವರು ಇದ್ದಾರೆ. ಒಬ್ಬನ ಹೆಸರು ಕ್ಷರನೆಂದು ಹೇಳುತ್ತಿರುತ್ತಾರೆ. ಮತ್ತೊಬ್ಬನ ಹೆಸರು ಅಕ್ಷರನೆಂದು ಹೇಳಬಹುದು. ಕ್ಷರನು ಎಂದರೇ ನಾಶವಾಗುವವನೆಂದು ಅರ್ಥ. ಅಕ್ಷರನು ಎಂದರೇ ನಾಶವಿಲ್ಲದವನೆಂದು ಅರ್ಥ. ಕ್ಷರನು ಸರ್ವ ಜೀವಿಗಳಲ್ಲಿದ್ದಾನೆ. ಅಕ್ಷರನು ಕ್ಷರನೊಂದಿಗೆ ಸಹ ಶರೀರದಲ್ಲಿಯೇ ಇರುತ್ತಾನೆ".

**ಶ್ಲೋ॥ 17. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ ।**
**ಯೋ ಲೋಕತ್ರಯ ಮಾವಿಶ್ಯ ಬಿಭರ್ತವ್ಯಯ ಈಶ್ವರಃ ॥**

**ಭಾವಾರ್ಥ :–** "ಇಬ್ಬರ ಪುರುಷರಿಗಿಂತಲೂ ಬೇರೆ ಇನ್ನೊಬ್ಬ ಉತ್ತಮ ಪುರುಷನು ಇದ್ದಾನೆ. ಅವನನ್ನೇ ಪರಮಾತ್ಮ ಎಂದು ಹೇಳುತ್ತಿದ್ದೇವೆ. ಆತನು ಮೂರು ಲೋಕಗಳನ್ನು ಆವರಿಸಿ ನಾಶವಿಲ್ಲದ ದೇವರಾಗಿ, ಅಧಿಪತಿಯಾಗಿ ವಿಶ್ವವೆಲ್ಲವನ್ನು ಭರಿಸುತ್ತಿದ್ದಾನೆ."

ಭಗವದ್ಗೀತೆಯಲ್ಲಿ ಹೇಳಿರುವ ಮೂವರು ಪುರುಷರಲ್ಲಿ ಒಬ್ಬನು ಕ್ಷರನು, ಎರಡನೆಯವನು ಅಕ್ಷರನು, ಮೂರನೆಯವನು ಪುರುಷೋತ್ತಮನು. ಮೊದಲ ಪುರುಷನು ಜೀವಿಯು (ಜೀವಾತ್ಮ). ಜೀವಿಯು ನಾಶವಾಗುವವನಾದ್ದರಿಂದ ಆತನನ್ನು **'ಕ್ಷರನು'** ಎಂದು ಕರೆಯುತ್ತಿದ್ದೇವೆ. ಎರಡನೆಯ ಪುರುಷನ ಹೆಸರು ಆತ್ಮ. ಆತ್ಮ ನಾಶವಾಗದವನು ಆದ್ದರಿಂದ **ಅಕ್ಷರನು** ಎಂದು ಆತ್ಮವನ್ನು ಕರೆಯುತ್ತಿದ್ದೇವೆ. ಕ್ಷರ ಪುರುಷನಿಗಿಂತಲೂ ಅಕ್ಷರ ಪುರುಷನಿಗಿಂತಲೂ **ಉತ್ತಮ ಪುರುಷನು** ಮೂರನೆಯವನು ಇದ್ದಾನೆ. ಅವನನ್ನೇ ದೇವರು ಅಥವಾ ಪರಮಾತ್ಮ ಎಂದು, ಅಲ್ಲಾಹ್‌ಯೆಂದು ಬೇರೆಬೇರೆ ವಿಧಗಳಾಗಿ ಕರೆಯುತ್ತಿದ್ದೇವೆ. ಮೂವರು ಎಂದರೇ ಮೂರು ಆತ್ಮಗಳು ಒಂದೇ ವಿಧವಾಗಲ್ಲದೇ ಒಂದು ದೊಡ್ಡದು ಮತ್ತೊಂದು ಇನ್ನೂ ದೊಡ್ಡದು ಎನ್ನುವಂತಿವೆ. ಆದ್ದರಿಂದ ಅವುಗಳ ಮಧ್ಯದಲ್ಲಿರುವ ತಾರತಮ್ಯಗಳನ್ನು ತಿಳಿಸುವ ನಿಮಿತ್ತ ಭಗವದ್ಗೀತೆ, ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಮೂವರು ಪುರುಷರಾಗಿ ವಿಂಗಡಿಸಿ ಹೇಳಿದ್ದಾರೆ. ಆ ಮೂವರು ಪುರುಷರನ್ನೇ 'ತೌಹೀದ್' ಎಂದು ಕೂಡಾ ಹೇಳಿದ್ದಾರೆ. ಮೂವರು ಪುರುಷರನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಹೊರಗಿನ ಪ್ರಪಂಚದಲ್ಲಿ ಕಾಣಿಸುವವರೊಂದಿಗೆ ಹೋಲಿಸಿ ಹೇಳಿದ್ದಾರೆ. ತೌರಾತ್‌ಗೆ ಮೂರು ರಾತ್ರಿಗಳೆಂದು ಹೇಳಿ ಮೂರು ವಿಧಗಳ ರಾತ್ರಿಗಳನ್ನು ವಿವರಿಸಿ ಎಚ್ಚರ ರಾತ್ರಿ, ಕನಸಿನ ರಾತ್ರಿ, ನಿದ್ದೆಯ ರಾತ್ರಿ ಎಂದು ವಿವರಿಸಿ ಹೇಳಿದಂತೆ, ಈಗ 'ತೌಹೀದ್' ಎನ್ನುವ ಪದಕ್ಕೆ ಮೂರು ಕಾಣಿಸದ ಶಕ್ತಿಗಳೆಂದು, ಅವುಗಳನ್ನೇ ಮೂರು ಆತ್ಮಗಳೆಂದು

ಕರೆಯುತ್ತಿದ್ದೇವೆಂದು ಹೇಳುತ್ತಿದ್ದೇವೆ. ಮೂರು ಆತ್ಮಗಳನ್ನು ಹತ್ತಿರವಾಗಿ ಅರ್ಥ ಮಾಡಿಕೊಳ್ಳುವುದಕ್ಕೆ ಮೇಲ್ನೋಟಕ್ಕೆ ಕಾಣಿಸುವ ಮನುಷ್ಯರನ್ನೇ ತೋರಿಸಿ ಉದಹರಿಸುತ್ತಿದ್ದಾರೆ. ಮನುಷ್ಯರಲ್ಲಿ ನಪುಂಸಕನು, ಸ್ತ್ರೀ, ಪುರುಷನು ಎಂದು ಮೂರು ವಿಧಗಳ ಶರೀರಗಳಿರುವವರು ಇದ್ದಾರೆ. ನಪುಂಸಕನು ಪುರುಷ ಶರೀರವನ್ನು ಧರಿಸಿ ಗಂಡಸರಿಗಿರುವ ಅವಯವಗಳಿಂದಲೇ ಇರುತ್ತಾನೆ. ಪುರುಷನಹಾಗೆ ಶರೀರವಿದ್ದರೂ ಅವನ ಶರೀರದಲ್ಲಿ ಪುರುಷತ್ವ ಇರುವುದಿಲ್ಲ. ಮೊದಲನೆಯವನು ನಪುಂಸಕನಾದರೇ, ಮೂರನೆಯವನು ಪುರುಷ ಶರೀರದಿಂದ ಪುರುಷ ಅವಯವಗಳಿಂದಲೇ ಇರುತ್ತಾನೆ. ಮೂರನೆಯವನಿಗೆ ಪುರುಷ ಶರೀರವಿರುವುದೇ ಅಲ್ಲದೇ ಅವನ ಶರೀರದಲ್ಲಿ ಪುರುಷತ್ವ ಇರುತ್ತದೆ. ಮೊದಲನೆಯವನದ್ದು ಮೂರನೆಯವನದ್ದು ಎರಡೂ ಪುರುಷ ಅವಯವ ಗಳಿರುವ ಶರೀರವೇ ಆದರೂ ಮೊದಲನೆಯವನಲ್ಲಿ ಪುರುಷತ್ವವಿಲ್ಲ, ಮೂರನೆಯವನಲ್ಲಿ ಪುರುಷತ್ವವಿದೆ. ಈ ಎರಡು ಶರೀರಗಳೇ ಅಲ್ಲದೇ ಮಧ್ಯದಲ್ಲಿ ಎರಡನೆಯ ಶರೀರವು ಮೊದಲನೆಯದಕ್ಕಿಂತಲೂ ಮೂರನೆಯದಕ್ಕಿಂತಲೂ ಭಿನ್ನವಾಗಿದೆ. ಈ ಎರಡನೆಯ ಶರೀರದಲ್ಲಿ ಪುರುಷನು ಎಂದು ಗುರುತು ಹಿಡಿಯುವುದಕ್ಕೆ ಅವಕಾಶವಿಲ್ಲದೇ ಸ್ತ್ರೀ ಅವಯವಗಳಿರುವ ಶರೀರವಾಗಿದೆ. ಶರೀರವು ಸ್ತ್ರೀ ಶರೀರವೇ ಆದರೂ ಅದರಲ್ಲಿ ಸ್ತ್ರೀ ಸ್ವಭಾವವಿಲ್ಲ. ಪುರುಷ ಸ್ವಭಾವವಿದೆ. ಅದರಿಂದ ಆಕೆಯನ್ನು ಒಂದು ವಿಧವಾಗಿ ಪುರುಷನೆಂದು ಹೇಳಬಹುದು. ಆಕೆ ಆಕಾರದಲ್ಲಿ ಸ್ತ್ರೀ ಆದರೂ, ಲಕ್ಷಣಗಳಲ್ಲಿ ಪುರುಷನಾಗಿದೆ. ಮೊದಲನೆಯವನ ಶರೀರವು ಪುರುಷನಾದರೂ ಆತ್ಮ ಲಕ್ಷಣಗಳಿರುವವನಾಗಿ ಇದ್ದಾನೆ.

ಈ ವಿಧವಾಗಿ ಎರಡು ಶರೀರಗಳು ಪುರುಷರವು, ಒಂದು ಶರೀರವು ಸ್ತ್ರೀದು ಆದರೂ ಪುರುಷ ಲಕ್ಷಣಗಳು ಇರುವುದಾಗಿ ಇದೆ. ಮಧ್ಯದವನು ಚಿಕ್ಕಂದಿನಿಂದ ಪುರುಷರ ಉಡುಗೆಗಳನ್ನು ಧರಿಸುತ್ತಿದ್ದನು. ಆಗ ಮೂವರು ಪುರುಷರಾಗಿಯೇ ಕಾಣಿಸುತ್ತಿದ್ದರು ಆದರೇ ಅದರಲ್ಲಿ ಮಧ್ಯದಲ್ಲಿರುವವನು

ಸ್ತ್ರೀಯಾಗಿದ್ದಾನೆ. ಮಧ್ಯದವನನ್ನು ಹಾಕಿಕೊಂಡಿರುವ ಉಡುಗೆಗಳನ್ನು ಅನುಸರಿಸಿ ಪುರುಷನೆಂದು ಹೇಳಿದರೂ ಒಳಗಿನ ಶರೀರವನ್ನು ಅನುಸರಿಸಿ ಹೆಂಗಸು ಎಂದು ಹೇಳಬಹುದು. ಮಧ್ಯದವನನ್ನು ಯಾವಕಡೆಗು ಹೇಳುವುದಕ್ಕೆ ಅವಕಾಶವಿಲ್ಲದೇ ಹೋಗಿದೆ. ಮೂರು ರಾತ್ರಿಗಳಲ್ಲಿ ಮಧ್ಯ ಕನಸಿನ ರಾತ್ರಿಯನ್ನು ಕನಸು ನಿಜವೆಂದು ಹೇಳುವುದಕ್ಕೆ ಒಂದು ಆಧಾರವಿದ್ದರೂ, ಅಸತ್ಯವೆಂದು ಹೇಳುವುದಕ್ಕು ಕೂಡಾ ಆಧಾರವಿರುವಂತೆ, ತೌಹೀದ್‌ನಲ್ಲಿ ವರ್ಣಿಸಿರುವ ಮೂವರು ವ್ಯಕ್ತಿಗಳನ್ನು ನೋಡಿದರೇ ಗಂಡಸರಾಗಿದ್ದರೂ ಮಧ್ಯದವನನ್ನು ಗಂಡಸನಾಗಿ ನಿರೂಪಿಸಲಾರೆವು. ಏನು ಮಾಡಿದರೂ ಮಧ್ಯ ರಾತ್ರಿ, ಮಧ್ಯ ಮನುಷ್ಯನನ್ನು ನಿರ್ಣಯಿಸಲಾರದಂತೆ ಸರ್ವ ಜೀವರಾಶಿಗಳ ಶರೀರದಲ್ಲಿರುವ ಮೂರು ಆತ್ಮಗಳಲ್ಲಿ ಮಧ್ಯ ಆತ್ಮನನ್ನು ಯಾವಕಡೆಗೂ ನಿರ್ಣಯಿಸಲಾರದೆ ಇದೆ. ಯಾರ ಬುದ್ಧಿಗೆ ಅರ್ಥವಾಗದಿರುವುದು, ಯಾರ ಊಹೆಗೂ ದೊರೆಯದೆ ಇರುವುದು ಮಧ್ಯ ಆತ್ಮ. ಮಧ್ಯೆ ಆತ್ಮವೇ ಮೊದಲ ಜೀವಾತ್ಮಗೆ ಆದೇಶಗಳನ್ನು ಕೊಟ್ಟು ನಡೆಸುತ್ತಿರುತ್ತದೆ. ಶರೀರದಲ್ಲಿ ಮಧ್ಯಾತ್ಮ ಸರ್ವಕಾರ್ಯಗಳನ್ನು ಮಾಡುವುದಾಗಿದ್ದರೂ ತನ್ನನ್ನು ಮಾತ್ರ  ದೊಡ್ಡದಾಗಿ ಹೇಳಿಕೊಳ್ಳುವುದಿಲ್ಲ. ಪರಮಾತ್ಮನಾಗಿದ್ದ ಮೂರನೆ ಆತ್ಮವನ್ನೇ ದೊಡ್ಡದಾಗಿ ಹೇಳುತ್ತಿರುವುದು. ತಾನು ಮಾಡುತ್ತಿರುವ ಎಲ್ಲ ಕಾರ್ಯಗಳನ್ನು ತನ್ನ ಮೇಲೆ ಹೇಳಿಕೊಳ್ಳದೆ ಪರಮಾತ್ಮ ಮಾಡಿದಂತೆ ಹೇಳುತ್ತಿರುತ್ತದೆ. ಆತ್ಮ ಮಾಡಿರುವ ಕೆಲಸಗಳನ್ನು ಜೀವಾತ್ಮ ಅಹಂನಿಂದ ತಾನೇ ಮಾಡಿದ್ದೇನೆಂದು ಹೇಳುತ್ತಿರುತ್ತದೆ. ಆದರೇ ಆತ್ಮ ಜೀವಾತ್ಮ ಮಾತನ್ನು ಸ್ವಲ್ಪವಾದರೂ ಖಂಡಿಸುವುದಿಲ್ಲ. ವಾಸ್ತವವಾಗಿ ಮಾಡಿರುವುದು ಆತ್ಮವೇ ಆದರೂ ಈ ಕೆಲಸ ಮಾಡಿರುವುದು ಯಾರು? ಎಂದು ಆತ್ಮನನ್ನು ಕೇಳಿದರೇ ಆತ್ಮ ಪರಮಾತ್ಮ ಮೇಲೆ ಹೇಳುತ್ತದೆ. ಜೀವಾತ್ಮ ಮಾಡದಿದ್ದರೂ ತನ್ನನ್ನು ಕರ್ತನಾಗಿ ಹೇಳಿದರೇ ಆತ್ಮ ತಾನು ಮಾಡಿದರೂ ತನ್ನನ್ನು ಕರ್ತನಾಗಿ ಹೇಳದೆ ದೇವರನ್ನೇ ಕರ್ತನಾಗಿ ಹೇಳುವುದು.

ದೈವಜ್ಞಾನವು ತಿಳಿಯದ ಶರೀರದಲ್ಲಿ ಜೀವಿಯು ತನ್ನನ್ನು ಮಾಡದ ಎಲ್ಲ ಕೆಲಸಗಳಿಗು ಕರ್ತನಾಗಿ ಹೇಳಿಕೊಳ್ಳುತ್ತಿರುತ್ತದೆ. ಆದರೇ ಆತ್ಮ ಜೀವಾತ್ಮ ಹೇಳಿರುವುದನ್ನು ಖಂಡಿಸದಿದ್ದರೂ ತಾನು ಹೇಳುವಾಗ ಮಾತ್ರ ದೇವರನ್ನೇ ದೊಡ್ಡದಾಗಿ ಹೇಳುತ್ತಿರುತ್ತದೆ. ಸ್ವಲ್ಪಕಾಲದ ನಂತರ ಜೀವಿಯು ದೈವಜ್ಞಾನ ತಿಳಿದುಕೊಂಡರೇ ಆಗ ಆತ್ಮ ಮಾಡುವ ಕೆಲಸಗಳನ್ನು ಆತ್ಮವೇ ಮಾಡಿದ್ದಾನೆಂದು ತಿಳಿಯದೆ ದೇವರು ಮಾಡಿದ್ದಾನೆಂದು ಹೇಳುತ್ತಿರುತ್ತದೆ. ಆತ್ಮ ಹಾಗೆಯೇ ಹೇಳಿದರೆ ಜೀವಾತ್ಮ ಕೂಡಾ ಕೆಲಸಗಳನ್ನು ದೇವರ ಮೇಲೆಯೇ ಹೇಳುತ್ತಿರುತ್ತದೆ. ಹಾಗೆ ಸ್ವಲ್ಪಕಾಲ ಕಳೆದಾಗ ಜೀವಿಯು ಕೆಲವು ಜನ್ಮಗಳ ನಂತರ ಸಂಪೂರ್ಣ ಜ್ಞಾನವನ್ನು ತಿಳಿಯಲ್ಪಟ್ಟು ಆಗ ಶರೀರದಲ್ಲಿ ನಡೆಯುವ ಕೆಲಸಗಳನ್ನು ಆತ್ಮವೇ ಮಾಡುತ್ತಿದೆ ಎಂದು ತಿಳಿಯುತ್ತಾನೆ. ಆಗ ಪರಮಾತ್ಮ ಎಲ್ಲದಕ್ಕೂ ಅತೀತನೆಂದೂ, ಅವ್ಯಯನೆಂದೂ, ಅಧಿಪತಿಯೆಂದೂ ತಿಳಿಯುತ್ತಾನೆ. ಎಲ್ಲಾ ವಿಧಗಳಲ್ಲಿ ಪರಮಾತ್ಮನೇ ದೊಡ್ಡವನೆಂದು ಜೀವಿಯು ತಿಳಿದುಕೊಂಡಾಗ ಜೀವಿಯು ಪರಮಾತ್ಮ ಒಬ್ಬನನ್ನೇ ಆರಾಧಿಸುವುದು ಶುರು ಮಾಡುತ್ತಾನೆ. ಆಗ ಇತರ ದೇವತೆಗಳನ್ನು ಬಿಟ್ಟು ಎಲ್ಲರಿಗೂ ಪರಮಾತ್ಮ ಒಬ್ಬನೇ ದೇವರಾಗಿದ್ದಾನೆಂದು ತಿಳಿದು ಒಬ್ಬ ದೇವರನ್ನೇ ಗೌರವವಾಗಿ ಆರಾಧಿಸಲು ಶುರು ಮಾಡುತ್ತಾನೆ. ಆಗ ಜೀವಿಯು **"ಏಕೇಶ್ವರೋಪಾಸನೆ"** ಮಾಡಿದಂತಾಗುವುದು. ಜೀವಿಯು ತಿಳಿಯುವ ಜ್ಞಾನವನ್ನು ಅನುಸರಿಸಿ ಜೀವಿಗಿರುವ ಶ್ರದ್ಧೆಯನ್ನು ಅನುಸರಿಸಿ ದೇವರ ಮೇಲೇ ಆಸಕ್ತಿ ಇರುವಂತೆ ಮಾಡಿ ದೇವರನ್ನೇ ಆರಾಧಿಸುವಂತೆ ಮಾಡುತ್ತಿದೆ ಆತ್ಮ. ಜೀವಿಯು ಭಾವನೆಗಳಿರುವವನೇ ಹೊರತು ಕಾರ್ಯಗಳನ್ನು ಮಾಡುವ ಸಾಮರ್ಥ್ಯ ಇಲ್ಲದವನು, ವಾಸ್ತವವಾಗಿ ಕೈಲಾಗದವನು. ಅಂತಹ ಜೀವಿಯ ಭಾವನೆಯನ್ನು ಅನುಸರಿಸಿ, ಆತ್ಮ ತಾನೇ ದೇವರನ್ನು ಆರಾಧಿಸುತ್ತಾ, ಆರಾಧನೆ ಕಾರ್ಯಗಳನ್ನು ಮಾಡುತ್ತಾ ಅಲ್ಲಿಯವರೆಗು ಎಂದೂ ಹೇಳದ ವಿಧವಾಗಿ ತಾನು ಮಾಡುವ ಕೆಲಸಗಳು ಅಂದರೇ ಆರಾಧನೆಗಳು ಜೀವಾತ್ಮ ಮಾಡಿದೆಯೆಂದು ಹೇಳುತ್ತದೆ. ಜೀವಾತ್ಮ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯುವವರೆಗು ಮಧ್ಯಾತ್ಮ ತಾನು ಮಾಡುವ ಕೆಲಸಗಳೆಲ್ಲವೂ ದೇವರ ಮೇಲೆ

ಹೇಳುತ್ತಿರುತ್ತದೆ. ಆದರೇ ಜೀವಾತ್ಮ ಜ್ಞಾನವನ್ನು ತಿಳಿದ ನಂತರ ದೇವರ ಮೇಲೆ ಹೇಳದೆ ಜೀವಿಯ ಮೇಲೆ ಹೇಳುವುದು.

ದೇವರ ಆರಾಧನೆಗಳಾಗಲೀ, ಅನ್ಯದೇವರುಗಳ ಆರಾಧನೆಗಳಾಗಲೀ ಮಾಡುವುದು ಮಧ್ಯಾತ್ಮವೇ. ಆದರೇ ಎಂದಾದರೂ ತಾನು ಮಾಡಿರುವ ಕೆಲಸಗಳನ್ನು ತನ್ನ ಮೇಲೆ ಹೇಳಿಕೊಳ್ಳಲಿಲ್ಲ. ದೇವರು ತನ್ನ ಧರ್ಮದ ಪ್ರಕಾರ ಏನೂ ಮಾಡದವನಾಗಿ ಇದ್ದಾನೆ. ಆದರೇ ಮನುಷ್ಯರಿಗೆ ಸಂತಾನ ಉಂಟು ಮಾಡುವವನು ಆತ್ಮವೇ. ಆದರೂ ಆ ವಿಷಯವು ಯಾರಿಗೂ ತಿಳಿದಿಲ್ಲ. ವಾಸ್ತವವಾಗಿ ಸರ್ವಜೀವಿಗಳಿಗೆ ತಂದೆ ಮಧ್ಯಾತ್ಮವೇ. ಆದರೂ ಆ ವಿಷಯ ಯಾರಿಗೂ ತಿಳಿದಂತೇ ಮುಚ್ಚಿಟ್ಟಿರುವುದು ಆತ್ಮವೇ. ಜೀವಿಯನ್ನು ಅಜ್ಞಾನ ಮಾರ್ಗದೊಳಗಾಗಲೀ, ಜ್ಞಾನ ಮಾರ್ಗದೊಳಗಾಗಲೀ ಕಳುಹಿಸುವವನು ಆತ್ಮವೇ. ಆದರೇ ಎಲ್ಲರು ಅದನ್ನು ಮಾಡುವವನು ದೇವರೇ ಎನ್ನುವಂತೆ ನಂಬಿಸಿರುವವನು ಆತ್ಮವೇ. ದೇವರು ಯಾವಾಗಲೂ ಏನೂ ಮಾಡಿಲ್ಲ, ಮಾಡುವುದೂ ಇಲ್ಲ. ಸೃಷ್ಠಿಗಿಂತಲೂ ಪೂರ್ವವು ಸರ್ವ ಸೃಷ್ಠಿಯನ್ನು ಸೃಷ್ಠಿಸಿರುವವನು ದೇವರೇ. ಅದೇ ಆತನಿಗೆ ಮೊದಲ ಕೆಲಸ, ಕೊನೆಯ ಕೆಲಸ. ಸೃಷ್ಠಿ ನಂತರ ಆತನು ಯಾವ ಕೆಲಸವನ್ನು ಮಾಡದವನಾಗಿದ್ದಾನೆ. ಸೃಷ್ಠಿ ನಂತರ ಎಲ್ಲ ಕಾರ್ಯಗಳಿಗು ದೊಡ್ಡವ, ಕರ್ತ ಆತ್ಮವೇ. ಆತ್ಮ ದೇವರಹಾಗೆ ಕೆಲಸ ಮಾಡುತ್ತಾ ದೇವರೇ ಎಲ್ಲಾ ಮಾಡುತ್ತಿದ್ದಾನೆಂದು ನಂಬಿಸುತ್ತಿದೆ. ಮನುಷ್ಯನಿಗೆ ತನ್ನ ಮೇಲೆ ದೃಷ್ಠಿ ಇಲ್ಲದೇ ಮಾಡುತ್ತಿದೆ. ಆದ್ದರಿಂದ ಇಂದಿನವರೆಗೂ ಸೃಷ್ಠಿ ಆದಿಯಿಂದ ಆತ್ಮವೆಂದರೇ ಯಾರೋ ಯಾರಿಗೂ ತಿಳಿದಿಲ್ಲ. ಸ್ವಲ್ಪ ಜ್ಞಾನ ತಿಳಿದವರಿಗೆ ಜೀವಾತ್ಮ, ದೇವರವರೆಗು ತಿಳಿಯುತ್ತದೆ ಆದರೇ ಆತ್ಮ ವರೆಗು ತಿಳಿಯುವುದಿಲ್ಲ. ಸರ್ವರಿಗು ತಂದೆ ದೇವರಲ್ಲ ನಿನ್ನಲ್ಲಿರುವ ಆತ್ಮವೇ. ಸರ್ವರನ್ನು ಅಜ್ಞಾನದಲ್ಲಿ ಮುಳುಗಿಸಿರುವವನು ದೇವರಲ್ಲ ನಿನ್ನ ಆತ್ಮವೇ. ಸರ್ವರನ್ನು ಜ್ಞಾನದ ಕಡೆ ಕಳುಹಿಸುವವನು ದೇವರಲ್ಲ ಆತ್ಮವೇ. ತನ್ನನ್ನು ತಾನು ಇತರರಿಗೆ ತಿಳಿಸುವವನು ಆತ್ಮವೇ. ತಾನು ಇತರರಿಗೆ ತಿಳಿಯದೇ ಶರೀರದಲ್ಲಿ ಅಡಗಿರುವವನು ಆತ್ಮವೇ.

ಹೊರಗೆ ಕಾಣಿಸುವ ಕೆಲಸಗಳನ್ನು ಮಾಡುವುದು ಆತ್ಮವೇ. ಆದರೂ ಹೊರಗೆ ಯಾರಿಗೂ ತಿಳಿಯದಂತೇ ಜಗತ್ತನ್ನೆಲ್ಲವನ್ನು ಆಟ ಆಡಿಸುವುದು ಆತ್ಮವೇ. ನಿನಗೆ ಜ್ಞಾನ ಬೇಕೆಂದರೇ ನೀನು ಜ್ಞಾನಿ ಆಗಬೇಕೆಂದರೇ ದೇವರನ್ನು ಬಿಟ್ಟು ಆತ್ಮನನ್ನು ತಿಳಿದುಕೋ, ಆತ್ಮವೇ ದೇವರನ್ನು ತಿಳಿಸುತ್ತದೆ.

## ಆತ್ಮವೇ ಎಲ್ಲವನ್ನು ನಿರ್ಣಯಿಸಿ ಹೇಳುವ ಒರೆಕಲ್ಲು

**ಮುಕ್ತಾಯ**

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವದಕ್ಕೆ ಶಾಸ್ತ್ರವು ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ"

ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

# ಒರೆ ಕಲ್ಲು

ಒರೆ ಕಲ್ಲು

ಒರೆ ಕಲ್ಲು

ಒರೆ ಕಲ್ಲು

ಒರೆ ಕಲ್ಲು

ಒರೆ ಕಲ್ಲು

ಒರೆ ಕಲ್ಲು

| ಒರೆ | ಕಲ್ಲು |
|---|---|
| ಜ್ಞಾನ | ಅಜ್ಞಾನ |
| ಸತ್ಯ | ಅಸತ್ಯ |
| ದೇವರು | ಮಾಯೆ |

Author :

The Only Guru of Three Religions

The Spiritual Emperor, Thraitha Theorem Originator

Sri Acharya Prabodhananda Yogeeshwarulu

www.thraithashakam.org